ಶ್ರೀಃ

ವಿದ್ಯಾರಣ್ಯರ

# ಜೀವನ್ಮುಕ್ತಿ ವಿವೇಕ


ಲೇಖಕ.

ಹೊಸಕೆರೆ ಚಿದಂಬರಯ್ಯ

ಕರ್ನಾಟಕ ಕವಿರತ್ನ



ಪ್ರಕಾಶಕ.

ೀ ಚಾಮರಾಜೇನ್ದ್ರ ಸಂಸ್ಕೃತ ಕಾಲೇಜು ಉಪಾಧ್ಯಾಯರೂ
ಸೂರು ಸಂಸ್ಥಾನದ ಸಾಹಿತ್ಯವಿದ್ವಾನ್ ಮತ್ತು
ಮಾರ್ಥ ಪತ್ರಿಕಾ ಸಂಪಾದಕರೂ ಆದ ಪಂಡಿತ
ಗ್ರಾಮದ ನಾರಾಯಣಶಾಸ್ತ್ರೀ.





ಪರಮಾರ್ಥ ಮುದ್ರಾಕ್ಷರಶಾಲಾ.

ಬೆಲೆ. ರೂ ೧-೦-೦ ] ಬೆಂಗಳೂರು ಸಿಟಿ. [ ಪೋಸ್ಟೇಜು ಬೇರೆ.

1918.

ಶ್ರೀಃ



ವಿದ್ಯಾರಣ್ಯರ

# ಜೀವನ್ಮುಕ್ತಿವಿವೇಕ



ಲೇಖಕ.

ಹೊಸಕೆರೆ ಚಿದಂಬರಯ್ಯ

ಕರ್ನಾಟಕ ಕವಿರತ್ನ



ಪ್ರಕಾಶಕ.

ಶ್ರೀ ಚಾಮರಾಜೇನ್ದ್ರ ಸಂಸ್ಕೃತ ಕಾಲೇಜು ಉಪಾಧ್ಯಾಯರೂ
ಮೈಸೂರು ಸಂಸ್ಥಾನದ ಸಾಹಿತ್ಯವಿದ್ವಾನ್ ಮತ್ತು
ಪರಮಾರ್ಥ ಪತ್ರಿಕಾ ಸಂಪಾದಕರೂ ಆದ ಪಂಡಿತ

ಸಾಲಿಗ್ರಾಮದ ನಾರಾಯಣಶಾಸ್ತ್ರೀ.



ಪರಮಾರ್ಥ ಮುದ್ರಾಕ್ಷರಶಾಲಾ.

ಬೆಲೆ. ರೂ ೧-೦-೦ ] ಬೆಂಗಳೂರು ಸಿಟಿ. [ ಪೋಸ್ಟೇಜು ಬೇರೆ.

1918.

# ವಿಷಯಾನುಕ್ರಮಣಿಕೆ.

—+—

| ವಿಷಯ | | ಪುಟ |
|---|---|---|

# ಪ್ರಸ್ತಾವನೆ.

—+—

ಜನನ ಮರಣ ಪ್ರವಾಹರೂಪವಾದ ಈ ಸಂಸಾರದಲ್ಲಿ ಮುಳುಗುತ್ತ ತೇಲುತ್ತ ದಡವನ್ನು ಕಾಣದೆ ಬಳಲಿ ಬೆಂಡಾಗಿ ನಿರಾಶೆಯನ್ನು ಹೊಂದಿ ದುಃಖಿಸುತ್ತಿರುವ ಮಾನವರನ್ನು ಉದ್ಧರಿಸಿ ದುಃಖಸಮುದ್ರದಲ್ಲಿ ಮುಳುಗುವದನ್ನು ತಪ್ಪಿಸಿ ಆನಂದ ಸಾಗರದಲ್ಲಿ ಈಜಾಡುವಂತೆ ಮಾಡುವದಕ್ಕಾಗಿ ಪ್ರಯತ್ನ ಪಟ್ಟ ಮಹಾತ್ಮರಲ್ಲಿ ವಿದ್ಯಾರಣ್ಯರು ಒಬ್ಬರು. ವಿದ್ಯಾರಣ್ಯರು ಸನ್ಯಾಸ ತೆಗದುಕೊಳ್ಳುವದಕ್ಕೆ ಮೊದಲು ಬುಕ್ಕಮಹಾರಾಜನ ಮಂತ್ರಿಗಳಾಗಿದ್ದರು. ಇವರಿಗೆ ಮಾಧವಾಚಾರ್ಯರೆಂದು ಹೆಸರಿದ್ದಿತು. ಇವರಿಗೆ ಸಾಯಣ ಮತ್ತು ಮಾಯಣರೆಂಬ ಇಬ್ಬರು ಸಹೋದರರು ಇದ್ದರು. ಕರ್ಣಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ ಎಂಬ ಬಿರುದನ್ನು ಶೃಂಗೇರೀ ಜಗದ್ಗುರು ಸಂಸ್ಥಾನಕ್ಕೆ ಸಂಪಾದನೆ ಮಾಡಿಕೊಟ್ಟವರು ವಿದ್ಯಾರಣ್ಯರೆ. ವಿದ್ಯಾರಣ್ಯರು ಶೃಂಗೇರೀ ಜಗದ್ಗುರು ಶಂಕರಾಚಾರ್ಯ ಪೀಠಕ್ಕೆ ಬರುವದಕ್ಕೆ ಮುಂಚೆ ತಾವು ಮಂತ್ರಿಪದವಿಯಲ್ಲಿರುವಾಗಲೇ ಸಾಯಣಾಚಾರ್ಯರಿಂದ ವೇದಗಳಿಗೆ ಭಾಷ್ಯಗಳನ್ನು ಬರೆಯಿಸಿದರು. ವೇದಾನ್ತ ಪಂಚದಶೀ, ವಿದ್ಯಾಮಾಧವ, ಮಾಧವನಿದಾನ, ಮಾಧವೀಯ ಧಾತುವೃತ್ತಿಯೇ ಮೊದಲಾದ ಇವರು ಮಾಡಿರುವ ಗ್ರಂಥಗಳನ್ನು ನೋಡಿದರೆ ಇವರಿಗೆ ಸಕಲ ಶಾಸ್ತ್ರಗಳಲ್ಲಿಯೂ ಪಾಂಡಿತ್ಯವಿದ್ದಿತೆಂದು ಗೊತ್ತಾಗುವದು. ಶಂಕರವಿಜಯವೆಂಬ ಕಾವ್ಯವನ್ನೂ ಸರ್ವದರ್ಶನ ಸಂಗ್ರಹವೆಂಬ ಗ್ರಂಥವನ್ನೂ ಇವರೇ ರಚಿಸಿದವರು.

ವಿದ್ಯಾರಣ್ಯರು ರಚಿಸಿರುವ ಅನೇಕ ಗ್ರಂಥಗಳ ಪೈಕಿ ಪ್ರಕೃತ ಪ್ರಸ್ತಾವನೆಗೆ ವಿಷಯವಾದ ಜೀವನ್ಮುಕ್ತಿವಿವೇಕವೆಂಬ ಗ್ರಂಥವು ಶಿಖರಪ್ರಾಯವಾದದ್ದು. ವಿಚಾರ ಪರರಾದ ಮುಮುಕ್ಷುಗಳಿಗೆ ತಾವು ವಿಚಾರಮಾಡಿದ ವೇದಾನ್ತ ಸಿದ್ಧಾನ್ತಗಳನ್ನು ಆಚರಣೆಗೆ ತಂದುಕೊಡುವದಕ್ಕೆ ಇದರಂತೆ ಸುಲಭವಾಗಿಯೂ ಸ್ಪಷ್ಟವಾಗಿಯೂ ಇರುವ ಮತ್ತೊಂದು ಗ್ರಂಥವು ಇಲ್ಲವೆಂದೇ ಹೇಳಬೇಕು.

ಮಹಾನುಭಾವರಾದ ವಿದ್ಯಾರಣ್ಯರು ರಚಿಸಿರುವ ಈ ಗ್ರಂಥರತ್ನವನ್ನು ಸಂಸ್ಕೃತದಲ್ಲಿ ಪರಿಚಯವಿಲ್ಲದಿರುವ ಕರ್ಣಾಟಕದೇಶದ ಮುಮುಕ್ಷು ಜನಗಳ ಸಲುವಾಗಿ ಸಂಸ್ಕೃತದಿಂದ ಕನ್ನಡಕ್ಕೆ ಪರಿವರ್ತನೆ ಮಾಡಿ ಯಾವ ಪ್ರಯೋಜನದ ಮೇಲೆಯೂ ದೃಷ್ಟಿಯಿಡದೆ ಕೇವಲ ಪಾರಮಾರ್ಥಿಕಬುದ್ಧಿಯಿಂದ ತಮ್ಮಿಂದಲೇ ಪ್ರಾರಂಭಿಸಲ್ಪಟ್ಟ ಪರಮಾರ್ಥ ಮಾಸಪತ್ರಿಕೆಯಲ್ಲಿ ಪ್ರಕಟಿಸಲು ಉದಾರಬುದ್ಧಿಯಿಂದ ಅನುಜ್ಞೆಯನ್ನಿತ್ತು ಇದರ ಸ್ವಾಮ್ಯವನ್ನೂ ಪ್ರಕಾಶಕರ ವಶಮಾಡಿ ಜೀವನ್ಮುಕ್ತ ಸ್ಥಿತಿಗೆ ಪ್ರತ್ಯಕ್ಷ ದೃಷ್ಟಾಂತವನ್ನು ತಮ್ಮ ನಡತೆಯಿಂದಲೇ ತೋರ್ಪಡಿಸುತಲಿರುವ ಕೊಲ್ಲಾಪುರದ ಜಗದ್ಗುರು ಪ್ರಾಸಾದದಲ್ಲಿ ವಾಸಮಾಡಿಕೊಂಡಿರುವ ಶ್ರೀಯುತ ಹೊಸಕೆರೆ ಚಿದಂಬರಾ-

ರ್ಯರಿಗೆ ಇಡೀಕರ್ಣಾಟಕಮಂಡಲಿಯೇ ಋಣಿಯಾಗಿರುವದೆಂಬ ಮಾತಿನಲ್ಲಿ ಸ್ವಲ್ಪವೂ ಅತ್ಯುಕ್ತಿಯಿಲ್ಲವು.

ವಿದ್ಯಾರಣ್ಯರ ಜೀವನ್ಮುಕ್ತಿವಿವೇಕದಲ್ಲಿ ಶ್ರುತಿ ಸ್ಮೃತಿ ಪುರಾಣಸೂತ್ರ ಮೊದಲಾದ ಪ್ರಮಾಣಗ್ರಂಥಗಳ ವಾಕ್ಯಗಳು ಅಲ್ಲಲ್ಲಿ ಧಾರಾಳವಾಗಿ ಉದಹರಿಸಲ್ಪಟ್ಟಿರುತ್ತವೆ. ಆದರೆ ಈ ಅನುವಾದ ಗ್ರಂಥದಲ್ಲಿ ಮೂಲವಾಕ್ಯಗಳನ್ನುದಹರಿಸದೆ ಅವುಗಳ ಅಭಿಪ್ರಾಯಗಳು ಮಾತ್ರ ಸ್ವೀಕರಿಸಲ್ಪಟ್ಟಿರುತ್ತವೆ. ಈ ಕನ್ನಡ ಭಾಷೆಯ ಗ್ರಂಥವನ್ನು ನೋಡಿದವರಿಗೆ ಇದು ಮತ್ತೊಂದು ಗ್ರಂಥದ ಅನುವಾದವೆಂದು ತೋರದೆ ಇದೊಂದು ಸ್ವತಂತ್ರಗ್ರಂಥವೇ ಇರಬಹುದೆಂಬ ಭಾವನೆಯನ್ನು ಕೊಡುವದೇ ಈ ಗ್ರಂಥದ ಸೌಂದರ್ಯವು.

ಮುದ್ರಣ ಕಾಲದಲ್ಲಿ ಪ್ರಕರಣಗಳ ಆನುಪೂರ್ವಿಯು ಸ್ವಲ್ಪವ್ಯತ್ಯಸ್ತವಾಗಿರುತ್ತದೆ. ಯಾದ ಕಾರಣ ಈ ಗ್ರಂಥವನ್ನು ಓದತಕ್ಕವರು ಮೊದಲು ಜೀವನ್ಮುಕ್ತಿ ಪ್ರಮಾಣ ಪ್ರಕರಣ ಅನಂತರ ವಾಸನಾಕ್ಷಯ ಪ್ರಕರಣ, ಅನಂತರ ಮನೋನಾಶ ಪ್ರಕರಣ, ಅನಂತರ ಸ್ವರೂಪಸಿದ್ಧಿಪ್ರಕರಣ, ಕೊನೆಗೆ ವಿದ್ವತ್ಸನ್ಯಾಸಪ್ರಕರಣ ಈ ರೀತಿಯಾಗಿ ಓದಬೇಕು.

ಅಲ್ಲದೆ ೬೧ ನೆಯ ಪುಟದಿಂದ ೬೨ ನೆಯ ಪುಟದವರೆಗೆ ಪತ್ರಾಗ್ರಸೂಚನೆಯಲ್ಲಿ [ ಮನೋನಾಶ ಪ್ರಕರಣ. ಅನ್ನುವದಕ್ಕೆ ಬದಲಾಗಿ ವಾಸನಾಕ್ಷಯ ಪ್ರಕರಣ ಎಂದು ತಿದ್ದಿಕೊಂಡು ಓದಬೇಕು.

ಧರ್ಮ ನೀತಿ ನಡತೆ ವಿನಯ ಭಕ್ತಿ ಕರ್ತವ್ಯ ಮೊದಲಾದ ಅನೇಕ ವಿಷಯಗಳು ಈ ಗ್ರಂಥದಲ್ಲಿ ಅಲ್ಲಲ್ಲಿ ವಿವರಿಸಲ್ಪಡುತ್ತವೆ ಯಾದಕಾರಣ ಅಚ್ಚ ತಿಳಿಗನ್ನಡದ ಸುಲಭ ಶೈಲಿಯಲ್ಲಿ ಬರೆಯಲ್ಪಟ್ಟಿರುವ ಈ ಗ್ರಂಥವನ್ನು ದೇಶಭಾಷೆಯ ವಿದ್ಯಾಶಾಲೆಗಳಲ್ಲಿ ಪ್ರೌಢವಿದ್ಯಾರ್ಥಿಗಳಿಗೆ ಪಠನೀಯ ಗ್ರಂಥವನ್ನಾಗಿ ವಿದ್ಯಾಭ್ಯಾಸದ ಇಲಾಖೆಯವರು ಗೊತ್ತುಮಾಡಿ ಪ್ರಚಾರಕ್ಕೆ ತಂದಪಕ್ಷದಲ್ಲಿ ವಿದ್ಯಾರ್ಥಿಮಂಡಲಿಗೆ ನೀತಿ ಮತ ಧರ್ಮ ಇವುಗಳು ಬಹು ಸುಲಭವಾಗಿ ಮನಗಂಡು ದೇಶೋನ್ನತಿಗೆ ಕಾರಣವಾಗುವದರಲ್ಲಿ ಸಂದೇಹವಿಲ್ಲ.

ಸಾಲಿಗ್ರಾಮದ ನಾರಾಯಣಶಾಸ್ತ್ರೀ

ಪ್ರಕಾಶಕ.

# ಪೀಠಿಕೆ.

ವೇದಾಂತ ವಿಚಾರದಲ್ಲಿ ಸಿದ್ಧಾಂತವನ್ನು ಹೆಚ್ಚಾಗಿ ವಿವರಿಸುವ ಗ್ರಂಥಗಳು ಬೇಕಾದಷ್ಟಿವೆ. ಸಾಧನಗಳ ವಿಷಯವನ್ನೊಂದನ್ನೇ ಮುಖ್ಯವಾಗಿಟ್ಟು ಬಗೆಬಗೆಯಿಂದ ಅದನ್ನೇ ವಿವರಿಸುವ ಗ್ರಂಥವನ್ನು ನೋಡಬೇಕೆಂದರೆ ಇದೊಂದೆ. ವಿಚಾರಮಾಡಿದರೆ ಸಿದ್ಧಾಂತಗಳ ಗೊಂದಲದಲ್ಲಿ ಬಿದ್ದು ಒದ್ದಾಡುವದಕ್ಕಿಂತಲೂ ಸಾಧನಗಳ ಕಡೆಗೆ ಲಕ್ಷ್ಯವನ್ನು ಕೊಡುವವರಿಂದಲೇ ನಿಜವಾದ ಪ್ರಯೋಜನವಾಗುವದು ಸಾಧನಗಳನ್ನು ಮಾಡದೆ ಬರೀ ಸಿದ್ಧಾಂತಗಳಮಾತು ಎಷ್ಟಾಡಿದರೂ ಅವು ಬಹು ಮಟ್ಟಿಗೆ ಗಾಳಿಯಲ್ಲಿ ತೂರಿಕೊಂಡು ಹೋಗುವವು. ಸಾಧನವು ಎಷ್ಟರಮಟ್ಟಿಗೆ ಕೈಗೂಡುವದೊ ಸಿದ್ಧಾಂತವು ಅಷ್ಟರಮಟ್ಟಿಗೆ ಅನುಭವಕ್ಕೆ ಬಂದಹಾಗೆಯೇ ಆಗಿಬಿಡುವದು. ಆದಕಾರಣ ಸಿದ್ಧಾಂತಗಳ ವಿಚಾರಕ್ಕಿಂತಲೂ ಸಾಧನಗಳ ವಿಚಾರವೇ ಮುಖ್ಯ. ಸಿದ್ಧಾಂತವೇನಾದರೂ ಆಗಲಿ; ಸಾಧನಗಳನ್ನು ಸರಿಯಾಗಿ ನಡೆಸಿದರೆ ಸಾಕು. ಜುಟ್ಟು ಹಿಡಿದೆಳೆದರೆ ಮನುಷ್ಯನು ತಾನಾಗಿಬರುವಂತೆ ಸರಿಯಾದ ಸಿದ್ಧಾಂತವು ತಾನಾಗಿಯೇ ಅನುಭವಕ್ಕೆ ಬರುವದು.

ಇನ್ನೊಂದು ವಿಶೇಷವೇನೆಂದರೆ ಸಿದ್ಧಾಂತದ ವಿಚಾರವು ಕೆಲಕೆಲವರ ಮನಸ್ಸಿಗೆ ಹಿಡಿಯುವದೇ ಇಲ್ಲ. ಸಾಧನಗಳ ವಿಚಾರಗಳು ಎಂಥವರಿಗಾದರೂ ಹಿಡಿಯುತ್ತವೆ. ಏಕೆಂದರೆ ಸಿದ್ಧಾಂತದ ವಿಚಾರವು ಮುಖ್ಯವಾಗಿ ಮೆದುಳಿನ ಶಕ್ತಿಗೆ ಸಂಬಂಧಪಟ್ಟದ್ದು. ಮೆದುಳುಎಲ್ಲರಿಗೂ ಅಷ್ಟು ಹೆಚ್ಚು ಪ್ರಮಾಣದಲ್ಲಿಯೇ ಇರುವದಿಲ್ಲ. ಸಾಧನಗಳ ವಿಚಾರವು ಮುಖ್ಯವಾಗಿ ಹೃದಯಕ್ಕೆ ಸಂಬಂಧಪಟ್ಟದ್ದು. ಅದರಲ್ಲಿ ಕೊರತೆಯಾಗಿರುವವರು ಕಡಮೆ. ಕೊನೆಗೆ ಪರಮಾನಂದವು ಸ್ಫೂರ್ತಿಯಾಗುವದು ಹೃದಯದಲ್ಲಿಯೇ ಹೊರತು ಮೆದುಳಿನಲ್ಲಿ ಅಲ್ಲ. ಈ ಕಾರಣದಿಂದಲೂ ಸಾಧನಗಳ ವಿಚಾರಕ್ಕೇ ಬೆಲೆ ಹೆಚ್ಚು.

ಇದು ಪರಮಕಾರುಣಿಕರಾದ ಶ್ರೀವಿದ್ಯಾರಣ್ಯರೆಂಬ ಮಹಾಮುನಿಗಳ ಜೀವನ್ಮುಕ್ತಿ ವಿವೇಕವೆಂಬ ಸಂಸ್ಕೃತ ಗ್ರಂಥದ ಕರ್ಣಾಟಕಾನುವಾದ. ಜೀವನ್ಮುಕ್ತಿಯೆಂದರೇನೆಂಬುದನ್ನು ಇಲ್ಲಿ ಈಗ ತಿಳಿಸಬೇಕಾದ್ದು ಅಗತ್ಯವಾಗಿದೆ. ಮುಕ್ತಿಗೆ ಏಳು ಮೆಟ್ಟಲುಗಳಿವೆ. ಮೊದಲನೇ ಮೂರು ಮೆಟ್ಟಲು ಅಜ್ಞಾನಿಗಳು ಮಾಡುವ ಸಾಧನಗಳಾಗಿವೆ. ನಾಲ್ಕನೇ ಮೆಟ್ಟಲೇ ಜ್ಞಾನ. ಈ ಸ್ಥಿತಿಯಲ್ಲಿ ವಿಷಯಗಳೆಲ್ಲಾ ಮೂರುದಿನದ ಬಾಳಿನವುಗಳೆಂದು ಉಪೇಕ್ಷೆಯುಂಟಾಗಿ ಅವುಗಳ ಇರುವಿಕೆಗೆಲ್ಲಾ ಆಧಾರಭೂತವಾದ ಆತ್ಮಸ್ವರೂಪವೆಂದು ಗುಟ್ಟುಗೊತ್ತಾಗಿ ಅದು ಹೊಳೆಯುತ್ತಿರುವದು ಹೀಗಾಗಿ ವಿಷಯಗಳ ಕಣ್ಣಿಯಿಂದ ಕಳಚಿಕೊಂಡಿರುವ ಅವನು ಬಹುಮಟ್ಟಿಗೆ ಮುಕ್ತನಾದಂತೆಯೇ ಆಯಿತು. ಅರುಣೋದಯದಿಂದಲೇ ಕತ್ತಲೆ ಕೈಗರೆಯುವಂತೆ ಈ ಆಗಾಗ ಹೊಳೆಯುವ ಜ್ಞಾನದ ಪ್ರಭಾವದಿಂದಲೇ ಮುಂದೆ ಜನ್ಮವನ್ನು ಕೊಡುವದಕ್ಕೆ ರಾಶಿಯಾಗಿ ಬಿದ್ದಿರುವಂಥ ಕರ್ಮಗಳ ಸಂಬಂಧವಾದ ಹೆದರಿಕೆ ಮಾಯವಾಗುವದು. ಮುಂದಿನ ಮೂರು ಮೆಟ್ಟ-

ಲುಗಳು ಈ ಪ್ರಾರಬ್ಧಕರ್ಮದ ಆಟವನ್ನು ಕೂಡ ತನ್ನ ಮೇಲೆ ಸಾಗದಂತೆ ಆ ಜ್ಞಾನಿಯು ಮಾಡಿಕೊಳ್ಳುವ ಸಾಧನಗಳನ್ನು ಸೂಚಿಸುವವು. ಹಾಗೆ ಪ್ರಾರಬ್ಧದ ಆಟವನ್ನು ನಿಲ್ಲಿಸಿ ತಮ್ಮ ಆತ್ಮಾನುಸಂಧಾನವನ್ನು ನಡೆಸಿಕೊಳ್ಳುತ್ತಿರುವದೇ ಜೀವನ್ಮುಕ್ತಿಯನ್ನು ಅನುಭವಿಸಬೇಕೆಂಬ ಜ್ಞಾನಿಗಳಿಗಾಗಿ ಶ್ರೀವಿದ್ಯಾರಣ್ಯ ಮಹಾಮುನಿಗಳು ಈ ಗ್ರಂಥ-ವನ್ನು ರಚಿಸಿರುವರು.

ಜ್ಞಾನಿಗಳೆಂದರೆ ಮಾಡಬೇಕಾದ್ದನ್ನೆಲ್ಲಾ ಮಾಡಿ ಪಡೆಯತಕ್ಕದ್ದನ್ನೆಲ್ಲಾ ಪಡೆ-ದವರೆಂದು ಎಲ್ಲರೂ ಹೇಳುತ್ತಿರುವಾಗ ಈ ಗ್ರಂಥವು ಅವರಿಗಾಗಿ ಹೇಳಿದ್ದೆಂಬುದೂ ಇದನ್ನು ತಿಳಿದು ಅವರು ಸಾಧನೆ ಮಾಡತಕ್ಕದ್ದುಂಟೆಂಬುದೂ ಹೇಗೆ ಒಪ್ಪುವದೆಂಬ ಸಂಶಯವು ಬರಬಹುದು. ಮಾಡಬೇಕಾದ್ದನ್ನೆಲ್ಲಾ ಮಾಡಿ ಪಡೆಯಬೇಕಾದ್ದನ್ನೆಲ್ಲಾ ಪಡೆದಿರುವಂಥ ಜ್ಞಾನಿಗೆ ಯಾರೂ ಏನೂ ಹೇಳತಕ್ಕದ್ದೂ ಇಲ್ಲ. ಹೇಳಿದರೂ ಅವನು ಅದನ್ನು ಕೇಳಿ ಏನೂ ಮಾಡತಕ್ಕದ್ದೂ ಇಲ್ಲ. ಈ ಗ್ರಂಥದಲ್ಲಿ ಜ್ಞಾನವೆಂದರೆ ಮಾಡತಕ್ಕದ್ದನ್ನೆಲ್ಲಾ ಮಾಡಿ ಪಡೆಯತಕ್ಕದ್ದನ್ನೆಲ್ಲಾ ಪಡೆದುದೆನಿಸಿಕೊಳ್ಳುವಂಥ ಜ್ಞಾನವಲ್ಲ. ಅದರದೊಂದು ಹೊಳಪಾಗಿರುವಂಥ ಜ್ಞಾನ. ಮುಂದಿನ ಹುಟ್ಟುಸಾವುಗಳ ತೊಡಕನ್ನು ತಪ್ಪಿಸುವ ಸಾಮರ್ಥ್ಯವು ಇದರಲ್ಲಿ ಅಡಗಿಕೊಂಡಿರುವದು. ಇದನ್ನು ಪರೋಕ್ಷಜ್ಞಾನವೆಂದೂ ಭಾವಿಸಬಾರದು. ದೇವರೆಲ್ಲಿಯೋ ದೂರದಲ್ಲಿರುವನೆಂದು ನಂಬುವದೂ ಅಥವಾ ಇಂಥ ವಿಚಿತ್ರವಾದ ಪ್ರಪಂಚಕ್ಕೆ ಸರ್ವಸಮರ್ಥನಾದಂಥ ದೇವ-ರೊಬ್ಬನಿರಬಹುದೆಂದು ಊಹಿಸುವದೂ ಪರೋಕ್ಷಜ್ಞಾನವೆನಿಸುವದು. ಈ ಪರೋಕ್ಷ-ಜ್ಞಾನವು ಹುಟ್ಟುಸಾವುಗಳ ತೊಡಕನ್ನು ತಪ್ಪಿಸಲಾರದು. ಈ ಗ್ರಂಥದಲ್ಲಿರುವ ಜ್ಞಾನವೆಂಬ ಮಾತು ಪರೋಕ್ಷವಾದುದಲ್ಲ; ಪ್ರತ್ಯಕ್ಷವಾದುದೇ ಏಕೆಂದರೆ ಅವನಿಗೆ ಹೊರಗಣ ವಿಷಯಗಳೆಲ್ಲಾ ಮೂರುದಿನದ ಬಾಳಿನವುಗಳೆಂದೂ ಅವುಗಳೆಲ್ಲಾ ತನ್ನಲ್ಲಿ ನೀನುನಾನೆಂಬ ತಿಳಿವಳಿಕೆಯ ರೂಪವಾಗಿ ತೋರುವ ಜ್ಞಾನವನ್ನವಲಂಬಿಸಿಕೊಂಡಿರುವ-ವೆಂದೂ ತನಗೆತಾನೇ ತೋರುತ್ತಿರುವದು. ಆದರೆ ಆ ತೋರಿಕೆಯು ಎಡೆಬಿಡದೆ ತಾನಾಗಿ ಎದ್ದು ಕಾಣಿಸಿಕೊಳ್ಳುತ್ತಿರುವಷ್ಟು ಇನ್ನೂ ಮೈಗೂಡಿಕೊಂಡಿರುವದಿಲ್ಲ. ಈ ಸ್ಥಿತಿ-ಯಲ್ಲಿರುವವನಿಗೆ ಪ್ರಾರಬ್ಧದ ವೇಗದಿಂದ ವಿಷಯಗಳು ಬಂದು ಗಂಟುಬಿದ್ದಾಗ ಅವುಗಳು ಆತ್ಮನ ಆಧಾರದಿಂದ ಇರುವ ಬರೀ ತೋರಿಕೆಯವುಗಳೆಂದು ತೋರಿ ಉಪೇಕ್ಷೆಯುಂಟಾ-ದರೂ ಆಗಬಹುದು. ಅಥವಾ ಒಮ್ಮೊಮ್ಮೆ ಆತ್ಮನ ಆಧಾರತ್ವವೇ ನೆನಪಿಗೆಬಾರದೆ ಅವುಗಳ ವಿಷಯದಲ್ಲಿ ಅಪೇಕ್ಷೆಯುಂಟಾದರೂ ಆಗಬಹುದು. ಉಪೇಕ್ಷೆಯುಂಟಾದ-ರಂತು ಸರಿಯೇ ಆಯಿತು. ಅಪೇಕ್ಷೆಯುಂಟಾದರೆ ಮಾತ್ರ ಅವನು ಆ ವಿಷಯಗಳ ಸಂಬಂಧದಿಂದ ಸುಖವನ್ನೋ ದುಃಖವನ್ನೋ ಅನುಭವಿಸುವವನಾಗುತ್ತಾನೆ. ಆ ಸುಖ-ದುಃಖಗಳ ಹೊಡೆತವನ್ನು ತಪ್ಪಿಸಿಕೊಳ್ಳಬೇಕಾದರೆ ಅವನಿಗೆ ಆ ವಿಷಯಗಳು ಬರೀ ತೋರಿಕೆಯಮಾತ್ರದವುಗಳಾಗಿ ಕಂಡು ಅವುಗಳಿಗೆ ಆತ್ಮನ ಆಧಾರತ್ವವು ಯಾವಾಗಲೂ ಕಣ್ಣಿಗೆ ಕಟ್ಟಿದಹಾಗೆ ಆಗುತ್ತಿರಬೇಕು. ಹೀಗೆ ಜ್ಞಾನವು ಯಾವಾಗಲೂ ಬೆಳಗುತ್ತಿರ-

ಬೇಕಾದರೆ ಆ ಜ್ಞಾನಿಯು ಮನೋನಾಶ ಮೊದಲಾದ ಸಾಧನಗಳನ್ನು ಮಾಡಬೇಕೆಂದು ಉಪದೇಶಿಸುವದೇ ಈ ಗ್ರಂಥದ ಉದ್ದೇಶವು. ಎಡೆಬಿಡದೆ ಬೆಳಗುವ ಜ್ಞಾನವನ್ನು ಜ್ಞಾನವೆಂದು ಕರೆಯುವದೆ; ಎಲ್ಲಾ ಬಗೆಯಿಂದಲೂ ಒಪ್ಪಿದರೂ ಅದೊಂದು ಹೊಳಪಾಗಿ ಆಗಾಗ ಬೆಳಗುವಂಥ ಜ್ಞಾನವನ್ನು ಜ್ಞಾನವೆನ್ನುವದು ಉಪಚಾರವೆಂದು ತಿಳಿಯಬೇಕು. ಈ ಆಗಾಗ ಬೆಳಗುವ ಜ್ಞಾನವೇ ಮನೋನಾಶ ವಾಸನಾಕ್ಷಯ ಮೊದಲಾದ ಸಾಧನಗಳಿಂದ ಬೆಳೆದು ಯಾವಾಗಲೂ ಬೆಳಗುವ ಜ್ಞಾನವಾಗಿ ಬಿಟ್ಟಮೇಲೆ ಆ ಜ್ಞಾನಿಯು ತನ್ನ ಮನಸ್ಸನ್ನು ಬಿಗಿಹಿಡಿದುಕೊಂಡವನಂತೆಯೇ ಇದ್ದರೂ ಇರಬಹುದು ಹರಿಯಬಿಟ್ಟವನಂತೆ ಇದ್ದರೂ ಇರಬಹುದು. ನಿಜವಾಗಿ ನೋಡಿದರೆ ಆಗ ಅವನಿಗೆ ಮನಸ್ಸೆಂಬುದೇ ಬೇರೆ ಇರುವದೇ ಇಲ್ಲ ಇನ್ನು ಅದರ ವಾಸನೆಯ ಮಾತಂತು ಎಷ್ಟೋ ದೂರ. ಅವನಿಗೆ ಎಲ್ಲೆಲ್ಲಿಯೂ ಯಾವಾಗಲೂ ತನ್ನ ಜ್ಞಾನಸ್ವರೂಪವೇ ಬೆಳಗುತ್ತಿರುವದು. ಆ ಜ್ಞಾನವು ಯಾವಾಗಲೂ ಬೆಳಗುವಂತೆ ಆಗುವತನಕ ಮಾತ್ರ ಅದಕ್ಕೆ ಸಾಧನವಾಗಿ ಮನೋನಾಶ ಮೊದಲಾದವುಗಳನ್ನು ಮಾಡಿಕೊಳ್ಳುತ್ತಿರಬೇಕೆಂದು ಈ ಗ್ರಂಥದ ತಾತ್ಪರ್ಯ. ಜೀವನ್ಮುಕ್ತಿಗೆ ತತ್ತ್ವಜ್ಞಾನ, ಮನೋನಾಶ ಮತ್ತು ವಾಸನಾಕ್ಷಯವೆಂಬ ಮೂರು ಸಾಧನಗಳನ್ನು ಹೇಳಿ ಈ ಗ್ರಂಥದಲ್ಲಿ ಮನೋನಾಶ ವಾಸನಾಕ್ಷಯಗಳ ವಿಚಾರವನ್ನು ಹೇಳಿದಂತೆ ತತ್ತ್ವಜ್ಞಾನದ ವಿಚಾರವನ್ನು ಹೇಳದೆ ಇರುವದನ್ನು ನೋಡಿದರೆ ಇದು ಸಿದ್ಧಾಂತವನ್ನು ಮನಗಂಡು ಆಗಾಗ ಬೆಳಗುವ ಜ್ಞಾನವನ್ನು ಪಡೆದವರನ್ನು ಉದ್ದೇಶಮಾಡಿ ಹೇಳಿದ ಗ್ರಂಥವಾಗಿ ಕಾಣುವದು.

ಒಳ್ಳೇದು ಈ ಗ್ರಂಥವು ದೃಢವಾದ ಜ್ಞಾನದ ಹೊಳಪಾಗಿ ಆಗಾಗ ಬೆಳಗುವಂಥ ಜ್ಞಾನವಾದರೂ ಇದ್ದವರಿಗಷ್ಟೆ ಬೇಕಾಗುವದು? ಅಜ್ಞಾನಿಗಳಾದ ನಮಗೆ ಇದರ ಗೊಡವೆ ಏಕೆಂದು ವಾಚಕರು ಯೋಚಿಸಬಾರದು. ಜ್ಞಾನಿಗಳ ಸಾಧನವು ಅಜ್ಞಾನಿಗಳ ಸಾಧನಕ್ಕಿಂತ ಬೇರೆಯಾದ ಒಂದು ಹೊಸಜಾತಿಯದಲ್ಲ. ಇಬ್ಬರ ಸಾಧನವು ಒಂದೆ. ಅಜ್ಞಾನಿಗಳ ಉದ್ದೇಶವು ಮುಖ್ಯವಾಗಿ ಮುಂದೆ ಜನ್ಮಗಳನ್ನು ಕೊಡುವದಕ್ಕೆ ಕಾದಿರುವ ಕರ್ಮಗಳನ್ನೆಲ್ಲಾ ಹಾರಿಸಿಬಿಡುವದರ ಕಡೆಗೆ ಇರುತ್ತೆ. ಜ್ಞಾನಿಗಳ ಉದ್ದೇಶವು ಪ್ರಾರಬ್ಧಕರ್ಮವನ್ನು ಸೋಲಿಸುವದರ ಕಡೆಗೆ ಇರುತ್ತೆ. ಅಜ್ಞಾನಿಗಳು ಪರಮಾತ್ಮಸ್ವರೂಪವನ್ನು ತಿಳಿಯಬೇಕೆಂದು ಸಾಧನೆ ಮಾಡುತ್ತಾರೆ. ಜ್ಞಾನಿಗಳು ತಮಗೆ ತಿಳಿದಿರುವ ಪರಮಾತ್ಮಸ್ವರೂಪವನ್ನು ಯಾವಾಗಲೂ ಕದಲಗೊಡದೆ ಇಟ್ಟುಕೊಂಡಿರಬೇಕೆಂದು ಸಾಧನೆ ಮಾಡುತ್ತಾರೆ. ಇಬ್ಬರ ಸಾಧನೆಯ ಜಾತಿಯೂ ಒಂದೇ. ಆದಕಾರಣ ಈ ಗ್ರಂಥವನ್ನು ನಮಗಲ್ಲವೆಂದು ಜ್ಞಾನಿಗಳೂ ಬಿಡುವಹಾಗಿಲ್ಲ, ಅಜ್ಞಾನಿಗಳೂ ಬಿಡುವಹಾಗಿಲ್ಲ. ಜ್ಞಾನಿಗಳು ಬಿಟ್ಟರೂ ಬಿಡಲಿ. ಶ್ರೀಮಂತನು ಸಂಪಾದನೆಯ ಉದ್ಯೋಗಕ್ಕೆ ಹೋಗದೆ ಹೋದಮಾತ್ರಕ್ಕೇ ಅವನನ್ನು ಬಡತನದ ದುಃಖವೇನೂ ಬಾಧಿಸುವದಿಲ್ಲ. ಬಡವನು ಕೆಲಸಕ್ಕೆ ಹೋಗಲೊಲ್ಲೆನೆಂದರೆ ಹೇಗೆ ಒಪ್ಪೀತು? ಆದಕಾರಣ ಜ್ಞಾನವನ್ನು ಬಯಸುವವರೆಲ್ಲರೂ ಅದರ ಸಾಧನೆಗಳಿರುವ ಈ ಗ್ರಂಥಕ್ಕೆ ಕೈನೀಡಲೇಬೇಕು.

ಈ ಗ್ರಂಥದಲ್ಲಿ ಒಂದುಕಡೆ ಬಂದ ಮಾತುಗಳೇ ಬಹುಕಡೆಬಂದಿವೆ. ವೇದಾಂತ ಗ್ರಂಥಗಳಲ್ಲಿ ಹೀಗಿರುವುದು ಅಗತ್ಯ. ಏಕೆಂದರೆ ಎಷ್ಟು ಹೇಳಿದರೂ ವೇದಾಂತದ ವಿಚಾರಗಳು ಮನಸ್ಸಿಗೆ ಹಚ್ಚಿಕೊಳ್ಳುವದಿಲ್ಲ. ಕೊನೆಗೆ ಬೇಸರವಾದರೂ ಚಿಂತೆಇಲ್ಲ; ವೇದಾಂತದ ವಿಚಾರಗಳು ಮನಸ್ಸಿನಲ್ಲಿ ಬೇರೂರಿಕೊಂಡರೆ ಸಾಕೆಂದು ಶ್ರೀವಿದ್ಯಾರಣ್ಯರು ಪ್ರತಿಯೊಂದು ಸಂಗತಿಯನ್ನೂ ಚೆನ್ನಾಗಿ ಬಿಡಿಸಿಬಿಡಿಸಿ ಎಲ್ಲಾ ಬಗೆಯಿಂದಲೂ ಅವುಗಳನ್ನು ಮನಸ್ಸಿನಲ್ಲಿ ನಿಲ್ಲಿಸಿಬಿಡಬೇಕೆಂದು ಈರೀತಿಮಾಡಿರುವಂತೆ ಕಾಣುತ್ತದೆ. ದೊಡ್ಡವರು ಹಿಡಿದ ದಾರಿಯನ್ನೇ ನಾನು ಹಿಡಿದು ಹೋಗಿರುತ್ತೇನೆ.

ಬಂಗಾಳ ಮಹಾರಾಷ್ಟ್ರ ಮೊದಲಾದ ದೇಶಗಳಲ್ಲಿ ಅಧ್ಯಾತ್ಮ ವಿಚಾರಪರರು ಬಹಳವಾಗಿರುತ್ತಾರೆ. ಈ ವಿಧವಾದ ಅಧ್ಯಾತ್ಮಗ್ರಂಥಗಳು ಕಣ್ಣಿಗೆ ಬಿದ್ದ ಮಾತ್ರಕ್ಕೆ ಅವುಗಳಿಂದ ತಾವುಗಳು ಪ್ರಯೋಜನವನ್ನು ಹೊಂದುತ್ತಾರೆ. ನಮ್ಮ ಕನ್ನಡ ನಾಡುಗಳಲ್ಲಾದರೋ ಹೊಟ್ಟೆ ಪಟ್ಟೆಗಳಮೇಲೆ ದೃಷ್ಟಿಯೇ ಅಲ್ಲದೆ ಜನಗಳಿಗೆ ಆತ್ಮಶಾಸ್ತ್ರ ವಿಚಾರಗಳಲ್ಲಿ ರುಚಿಯು ಬಹಳ ಮಟ್ಟಿಗೆ ಕಡಮೆ. ಈ ವಿಧವಾಗಿ ವೇದಾಂತಶಾಸ್ತ್ರ ವಿಚಾರದಲ್ಲಿ ಆಸಕ್ತಿ ಇಲ್ಲದಿರುವ ಅಥವಾ ಆಸಕ್ತಿ ಇದ್ದರೂ ಆ ವಿಚಾರಗಳನ್ನು ಗ್ರಹಿಸುವದಕ್ಕೆ ತಕ್ಕಷ್ಟು ಯೋಗ್ಯತೆ ಇಲ್ಲದೆ ತಿಳಿದುಕೊಳ್ಳಬೇಕೆಂಬ ಕುತೂಹಲಮಾತ್ರವಿರುವ ಮುಮುಕ್ಷುಜನಗಳ ಸಲುವಾಗಿ ಸಂಸ್ಕೃತ ಶ್ಲೋಕಗಳ ತೊಡರಿಗೆ ಹೋಗದೆ ಕಾದಂಬರೀ ಕಥೆಯಂತೆ ವಿನೋದವಾಗಿರುವಂತೆ ಈ ಗ್ರಂಥವನ್ನು ಅತಿಸುಲಭರೀತಿಯಲ್ಲಿ ಬರದಿರುತ್ತೆ.

ನಾಸ್ತಿಕರಿಗೂ ಆಸ್ತಿಕ್ಯವನ್ನುಂಟುಮಾಡಿ ವೇದಾಂತವು ಔಷಧದಂತೆ ಕಹಿಯಾಗಿರುವದೆಂಬ ಭಾವನೆಯನ್ನು ತಪ್ಪಿಸಿ ಜೇನುತುಪ್ಪದಂತೆ ಸೀಯದಾಗಿರುವದೆಂಬುದನ್ನು ಸಕಲರಿಗೂ ತಿಳಿಯಪಡಿಸಬೇಕೆಂಬುದೇ ಈ ಗ್ರಂಥರಚನೆಯ ಉದ್ದೇಶ.

ಈ ಗ್ರಂಥವನ್ನು ಮೊದಲಿಂದ ಕೊನೆಯವರಿಗೂ ಪರಿಶೋಧಿಸಿಕೊಟ್ಟ ಮ॥ ರಾ॥ ವೈ. ಸುಬ್ಬರಾಯರಿಗೂ ಮತ್ತು ಇದಕ್ಕೆ ಅವಲಂಬನವನ್ನು ಕೊಟ್ಟು ಆದರದಿಂದ ತಮ್ಮ ಪರಮಾರ್ಥ ಪತ್ರಿಕೆಯಲ್ಲಿ ಪ್ರಕಟಿಸಿಕೊಂಡ ವೇ॥ ನಾರಾಯಣಶಾಸ್ತ್ರಿಗಳವರಿಗೂ ನಾನು ಕೃತಜ್ಞನಾಗಿದ್ದೇನೆ.

ಚಿದಂಬರ.

ಶ್ರೀಃ.

ಶ್ರೀಗುರುಭ್ಯೋ ನಮಃ

ಶ್ರೀಮದ್ವಿದ್ಯಾರಣ್ಯಕೃತ

# ಜೀವನ್ಮುಕ್ತಿವಿವೇಕ.

(ಕನ್ನಡ ಭಾಷಾನುವಾದ)

## ಜೀವನ್ಮುಕ್ತಿಪ್ರಮಾಣ ಪ್ರಕರಣ.

ವೇದದಲ್ಲಿ ಕರ್ಮಕಾಂಡ, ಉಪಾಸನಾಕಾಂಡ ಮತ್ತು ಜ್ಞಾನಕಾಂಡ ಎಂದು ಮೂರು ಭಾಗಗಳಿವೆ. ಮೊದಲನೇದಾದ ಕರ್ಮಕಾಂಡವು ಈ ಲೋಕದ ಮತ್ತು ಪರಲೋಕದ ಸುಖಗಳಿಗೆ ಬಾಯಿನೀರು ಕರೆಯುವವರಿಗಾಗಿ ಬಗೆಬಗೆಯ ಕಾಮ್ಯಕರ್ಮಗಳನ್ನೂ ಅಂಥ ಮೂರುಗಳಿಗೆಯ ಇಂದ್ರಿಯ ಸುಖಗಳಿಗೆ ಕೈ ಒತ್ತದೆ ಮೋಕ್ಷವನ್ನು ಬಯಸುವವರಿಗೆ ಮನಸ್ಸಿನ ಪಾಪ ಸಂಸ್ಕಾರಗಳೆಲ್ಲಾ ಹೋಗುವದಕ್ಕೆ ಸಾಧನವಾಗುವಂಥ ನಿತ್ಯಕರ್ಮಗಳನ್ನೂ ಹೇಳುತ್ತದೆ. ಎರಡನೇದಾದ ಉಪಾಸನಾಕಾಂಡವು ಬುದ್ಧಿಶಕ್ತಿಯಿಂದ ಸಂಪಾದಿಸಬಹುದಾದ ಈ ಲೋಕದ ಮತ್ತು ಪರಲೋಕದ ಸುಖಗಳಿಗೂ ಸಾಧನವಾಗುವದಲ್ಲದೆ ಆ ಸುಖವನ್ನು ಕಡೆಗಣ್ಣಿಂದ ಕಾಣುವಂಥ ಮುಮುಕ್ಷುವಿಗೆ ಪುಣ್ಯಸಂಸ್ಕಾರಗಳನ್ನು ಹೆಚ್ಚಿಸಿ ಆತ್ಮಸಾಕ್ಷಾತ್ಕಾರಕ್ಕೆ ತಕ್ಕ ಯೋಗ್ಯತೆಯನ್ನು ತಂದು ಕೊಡುವಂಥ ಸಾಧನಗಳನ್ನೂ ತಿಳಿಸುತ್ತದೆ. ಮೂರನೇದಾದ ಜ್ಞಾನಕಾಂಡವು ಆತ್ಮಸ್ವರೂಪದ ವಿಚಾರವಾಗಿರುತ್ತದೆ. ಕರ್ಮವೂ ಉಪಾಸನೆಯೂ ಎರಡೂ ಜ್ಞಾನಕ್ಕೇ ಸಾಧನಗಳಾದರೂ ಕರ್ಮವು ಹೊರಗಣ ಸಾಧನ. ಉಪಾಸನೆಯು ಒಳಗಣಸಾಧನ. ಕರ್ಮವು ಚಿತ್ತಶುದ್ಧಿಯನ್ನು ಮಾಡಿ ಮನಸ್ಸಿಗೆ ಉಪಾಸನಾಸಾಮರ್ಥ್ಯವನ್ನು ತಂದುಕೊಡುವುದು. ಕರ್ಮದ ಕೆಲಸ ಇಷ್ಟೆ. ಉಪಾಸನೆಯು ಆ ಮೇಲೆ ಜ್ಞಾನರೂಪವಾಗಿ ಫಲಿಸುವುದು. ಆದಕಾರಣ ಕರ್ಮವನ್ನು ಜ್ಞಾನಿಗಳೂ ಮತ್ತು

ಉಪಾಸಕರೂ ಕೈ ಬಿಡುವ ಸಂಭವವುಂಟು. ಜ್ಞಾನಿಗಳು ತಮ್ಮ ಆತ್ಮಾನುಸಂಧಾನದಲ್ಲಿ ತಾವು ಅಂತರ್ಮುಖರಾಗಿರುವಾಗಲಂತು ಅವರಿಗೆ ಈ ಪ್ರಪಂಚದ ನೆನಪೇ ಇರುವುದಿಲ್ಲ. ಇನ್ನು ಕರ್ಮದ ಮಾತೆಲ್ಲಿಯದು? ಅವರು ಬಹಿರ್ಮುಖರಾದಾಗ ಇತರರಿಗೆ ಉದಾಹರಣೆಯಾಗಿರಬೇಕೆಂದು ಅವರಿಗೆ ತೋರಿದರೆ ಅವರು ಎಲ್ಲರಂತೆ ಕರ್ಮವನ್ನು ಮಾಡಿಕೊಂಡಿದ್ದರೂ ಇರಬಹುದು. ಅವರು ಅದನ್ನು ಮಾಡದೆಬಿಟ್ಟರೂ ಅವರಿಗೆ ಬುದ್ಧಿಹೇಳುವುದಕ್ಕೆ ಯಾರಿಗೂ ಅಧಿಕಾರವಿರುವುದಿಲ್ಲ. ಏಕೆಂದರೆ ಅವರು ಕರ್ಮದ ಮೆಟ್ಟಲನ್ನು ದಾಟಿ ಎಷ್ಟೋ ಮುಂದೆ ಹೋಗಿರುವರು. ಅವರಿಗೆ ಕರ್ಮದಿಂದಾಗಬೇಕಾದುದೇನೂ ಇಲ್ಲ. ಮುಮುಕ್ಷುಗಳಾದರೂ ತಮ್ಮ ಉಪಾಸನೆಯ ಜೊತೆಗೆ ವಿಧಿಪ್ರಕಾರವಾಗಿ ಕರ್ಮಗಳನ್ನು ನಡೆಸಿಕೊಂಡು ಹೋದರೂ ಹೋಗಬಹುದು. ಆ ಕರ್ಮಕ್ಕೆ ಬೇಕಾಗಿರುವ ಕಾಲವನ್ನು ಉಪಾಸನೆಯಲ್ಲಿಯೇ ಕಳೆಯೋಣವೆಂದು ತೋರಿದರೆ ಕರ್ಮವನ್ನು ಬಿಟ್ಟು ಉಪಾಸನೆಯೊಂದನ್ನೇ ಮಾಡಿಕೊಂಡಿದ್ದರೂ ಇರಬಹುದು. ಚಿತ್ತಶುದ್ಧಿಯಾದ ಹೊರತು ಮನಸ್ಸು ಉಪಾಸನೆಮಾಡಲರಿಯದು. ಆದುದರಿಂದ ಉಪಾಸನೆ ಮಾಡುವಮನಸ್ಸು ಕರ್ಮದ ಮೇಲಿನ ಅಂತಸ್ತನ್ನು ಹತ್ತಿರುವುದರಿಂದ ಮುಮುಕ್ಷುಗಳು ಕರ್ಮವನ್ನು ಮಾಡದೆಯೂ ಇರಬಹುದು. ಜ್ಞಾನಿಗಳಾಗಿರುವವರಾಗಲಿ, ಉಪಾಸಕರಾಗಿರುವವರಾಗಲಿ, ತಾವುಮೊದಲು ಕರ್ಮವನ್ನು ಹಿಡಿದುದಕ್ಕೆ ವಿಧಿ ಇರುವಂತೆ ಈಗ ಬಿಡುವುದಕ್ಕೂ ಶಾಸ್ತ್ರದಲ್ಲಿ ವಿಧಿ ಇರುವುದು. ವಿಧಿಪ್ರಕಾರವಾಗಿ ಹಿಡಿದ ಕರ್ಮವನ್ನು ವಿಧಿಪ್ರಕಾರವಾಗಿ ಬಿಡುವುದಕ್ಕೆ ಸನ್ಯಾಸವೆಂದು ಹೆಸರು.

ಜ್ಞಾನಿಗಳಾದವರು ಯಾವಾಗಲೂ ತಮ್ಮ ಆನಂದದಲ್ಲಿ ತಾವು ಇರೋಣವೆಂದು ಕರ್ಮಗಳನ್ನು ಬಿಡುವ ಸನ್ಯಾಸಕ್ಕೆ ವಿದ್ವತ್ಸನ್ಯಾಸವೆಂದು ಹೆಸರು. ವಿದ್ವತ್ಸನ್ಯಾಸವೆಂದರೆ ಜ್ಞಾನಿಗಳು ಮಾಡುವ ಸನ್ಯಾಸ. ಮುಮುಕ್ಷುಗಳು ಕಾಮ್ಯಕರ್ಮಸಂಬಂಧವಾದ ಹೊರಗಣ ಗಡಿಬಿಡಿಯ ತೊಡಕಿಗೆ ಬೀಳದೆ ತಮ್ಮ ಕಾಲವನ್ನೆಲ್ಲಾ ಉಪಾಸನೆಯಲ್ಲಿಯೇ ಕಳೆಯಬೇಕೆಂದು ನಿಶ್ಚಯಿಸಿ ಕರ್ಮಗಳನ್ನು ಬಿಡುವುದಕ್ಕೆ ವಿವಿದಿಷಾಸನ್ಯಾಸವೆಂದು ಹೆಸರು. ವಿವಿದಿಷಾಸನ್ಯಾಸವೆಂದರೆ ಸಾಧಕರು ಮಾಡುವ ಸನ್ಯಾಸ. ಸಾಧಕರು

ಸಾಮಾನ್ಯವಾಗಿ ಮುಕ್ತಿಯನ್ನೇ ಲಕ್ಷ್ಯದಲ್ಲಿಟ್ಟುಕೊಂಡು ಸನ್ಯಾಸಮಾಡುವನು. ಜ್ಞಾನಿಗಳು ಜೀವಿಸಿರುವಾಗಲೇ ಮೋಕ್ಷಸುಖವನ್ನು ಅನುಭವಕ್ಕೆ ತಂದುಕೊಳ್ಳಬೇಕೆಂದು ಸನ್ಯಾಸಮಾಡುವನು. ಹೀಗೆ ಸನ್ಯಾಸವು ವಿವಿದಿಷಾ ಸನ್ಯಾಸವೆಂದೂ ವಿದ್ವತ್ಸನ್ಯಾಸವೆಂದೂ ಎರಡುಬಗೆ. ಸನ್ಯಾಸಮಾಡುವುದಕ್ಕೆ ಮುಖ್ಯವಾಗಿ ವೈರಾಗ್ಯವಿರಬೇಕು. ಯಾವಾಗ ವೈರಾಗ್ಯವು ಹುಟ್ಟುತ್ತದೋ ಆಗಲೇ ಸನ್ಯಾಸಮಾಡಬೇಕೆಂದು ವೇದದಲ್ಲಿ ಹೇಳಿದೆ. ಸನ್ಯಾಸದ ಭೇದಗಳು ಪುರಾಣಗಳಲ್ಲಿ ಹೇಳಿವೆ. ವೈರಾಗ್ಯವು ಎರಡು ಬಗೆಯಾಗಿರುತ್ತದೆ. ಒಂದು ತೀವ್ರ. ಇನ್ನೊಂದು ತೀವ್ರತರ. ವೈರಾಗ್ಯವು ತೀವ್ರವಾಗಿದ್ದರೆ ತೀರ್ಥಯಾತ್ರಾದಿಗಳನ್ನು ಮಾಡುವ ಸಾಮರ್ಥ್ಯವಿಲ್ಲದವನು ಕುಟೀಚಕವೆಂಬ ಸನ್ಯಾಸವನ್ನೂ ತೀರ್ಥಯಾತ್ರಾದಿಗಳನ್ನು ಮಾಡುವ ಶಕ್ತಿಯುಳ್ಳವನು ಬಹೂದಕವೆಂಬ ಸನ್ಯಾಸವನ್ನೂ ಮಾಡಬೇಕು. ವೈರಾಗ್ಯವು ತೀವ್ರತರವಾಗಿದ್ದರೆ ಲೋಕಾಂತರಸುಖವನ್ನು ಬಯಸುವವರು ಹಂಸವೆಂಬ ಸನ್ಯಾಸವನ್ನು ಮಾಡಬೇಕು. ಮೋಕ್ಷವನ್ನು ಬಯಸುವವನು ಜ್ಞಾನಕ್ಕೆ ಸಾಕ್ಷಾತ್ಸಾಧನವಾದಂಥ ಪರಮಹಂಸ ಸನ್ಯಾಸವನ್ನುಮಾಡಬೇಕು. ಹೆಂಡಿರು ಮಕ್ಕಳು ಸತ್ತಾಗ ಮನೆಮಾರು ಮತ್ತೊಬ್ಬರಪಾಲಾದಾಗ ಈ ಸಂಸಾರದಲ್ಲಿ ಹುರುಳಿಲ್ಲವೆಂದು ತೋರುವ ವೈರಾಗ್ಯವು ಮಂದವೈರಾಗ್ಯ. ಈ ಜನ್ಮದಲ್ಲಿ ನನಗೆ ಹೆಂಡಿರೂ ಬೇಡ ಮಕ್ಕಳೂ ಬೇಡ ಎಂದು ಮನಸ್ಸಿನಲ್ಲಿ ದೃಢಭಾವನೆ ಹುಟ್ಟಿದರೆ ಅದುತೀವ್ರವೈರಾಗ್ಯ. ಸತ್ತಮೇಲೆ ಮತ್ತೆ ಗರ್ಭವಾಸಕ್ಕೆ ಹಾಕುವಂಥ ಲೋಕಾಂತರದ ಸುಖಗಳೂ ನನಗೆ ಬೇಡವೆಂದೆನ್ನಿಸುವುದು ತೀವ್ರತರವೈರಾಗ್ಯ. ಮಂದವೈರಾಗ್ಯದವನಿಗೆ ಯಾವಸನ್ಯಾಸವೂ ಒಪ್ಪುವುದಿಲ್ಲ. ತೀವ್ರವೈರಾಗ್ಯದವನಿಗೆ ತೀರ್ಥಯಾತ್ರಾದಿಗಳನ್ನು ಮಾಡುವಶಕ್ತಿ ಇಲ್ಲದಿದ್ದರೆ ಕುಟೀಚಕ ಸನ್ಯಾಸ. ಅಂಥಾಶಕ್ತಿಯಿದ್ದರೆ ಬಹೂದಕ ಸನ್ಯಾಸ. ತೀವ್ರತರವಾದ ವೈರಾಗ್ಯದವನಿಗೆ ಬ್ರಹ್ಮಲೋಕಕ್ಕೆ ಹೋಗಿ ಅಲ್ಲಿ ಜ್ಞಾನವನ್ನು ಪಡೆಯಬೇಕೆಂಬುವನಿಗೆ ಹಂಸಸನ್ಯಾಸ, ಮೋಕ್ಷವೊಂದನ್ನೆ ಪಡೆಯಬೇಕೆಂಬವನಿಗೆ ಪರಮಹಂಸಸನ್ಯಾಸ. ಇವುಗಳ ವಿಚಾರವೆಲ್ಲ ಪರಾಶರಸ್ಮೃತಿಯಲ್ಲಿ ವಿಶದವಾಗಿರುವುದು. ಇಲ್ಲಿ ಹೇಳುವುದು ಪರಮಹಂಸನ ವಿಚಾರ. ಪರಮಹಂಸರಲ್ಲಿ ಜ್ಞಾನಿ ಮತ್ತು ಸಾಧಕ ಎಂದು ಎರಡುಬಗೆ.

ಬ್ರಹ್ಮಜ್ಞಾನವನ್ನು ಪಡೆಯಬೇಕಾದರೆ ಪರಮಹಂಸನಾಗಿ ಶಾಂತಿ ದಾಂತಿ ಮೊದಲಾದ ಎಲ್ಲಾ ಸಾಧನಗಳನ್ನು ಸಾಧಿಸಬೇಕು. ಈ ಜನ್ಮದಲ್ಲಾಗಲಿ ಹಿಂದಿನ ಜನ್ಮಗಳಲ್ಲಾಗಲಿ ಚೆನ್ನಾಗಿ ನಡೆಸಿದಂಥ ಪುಣ್ಯಕರ್ಮಗಳ ಪ್ರಾಬಲ್ಯದಿಂದ ಈ ಜನ್ಮದಲ್ಲಿ ಜ್ಞಾನವನ್ನು ಪಡೆಯಬೇಕೆಂಬ ಬಯಕೆ ಹುಟ್ಟುವುದು. ಈ ಸ್ಥಿತಿಯಲ್ಲಿ ಸನ್ಯಾಸಮಾಡುವುದು ಜ್ಞಾನಕ್ಕೆ ಸಾಧನವಾದ ಸನ್ಯಾಸ. ಇದರಲ್ಲಿ ಎರಡುಬಗೆ, ಜನ್ಮಗಳನ್ನು ಕೊಡುವಂಥ ಕಾಮ್ಯಕರ್ಮ ಮೊದಲಾದವುಗಳನ್ನು ಮಾತ್ರ ಬಿಡುವುದೊಂದು ಬಗೆ. ಪ್ರೈಷಮಂತ್ರವನ್ನು ಉಚ್ಚಾರಮಾಡಿ ಕಾಷಾಯದಂಡಗಳನ್ನು ಧರಿಸುವುದಿನ್ನೊಂದು ಬಗೆ. ಪುರುಷನು ಪ್ರೈಷಮಂತ್ರವನ್ನು ಉಚ್ಚಾರಮಾಡಿ ಸನ್ಯಾಸಕ್ರಮವನ್ನು ತೆಗೆದುಕೊಂಡರೆ ಅದರ ಪ್ರಭಾವದಿಂದ ಅವನ ಹೆಂಡತಿಗೂ ಮತ್ತು ತಾಯಿಗೂ ಕೂಡ ಮುಂದೆ ಪುರುಷ ಜನ್ಮ ಬರುವುದು. ಸ್ತ್ರೀಯರಿಗೆ ಕೂಡ ಈ ಸನ್ಯಾಸವುಂಟು. ಮದುವೆ ಆಗುವುದಕ್ಕೆ ಮುಂದಾಗಿ ಆಗಲಿ ಅಥವಾ ವೈಧವ್ಯ ಬಂದ ಮೇಲೆ ಆಗಲಿ ಸ್ತ್ರೀಯರೂ ಸನ್ಯಾಸಿಗಳಾಗಿ ಭಿಕ್ಷುಕಿಯರೆನಿಸಿಕೊಂಡು ಭಿಕ್ಷಾಚರ್ಯವನ್ನು ಮಾಡಿಕೊಂಡು ಮೋಕ್ಷಶಾಸ್ತ್ರವನ್ನು ಶ್ರವಣಮಾಡುತ್ತ ತ್ರಿದಂಡಧಾರಿಗಳಾಗಿ ಏಕಾಂತದಲ್ಲಿ ಆತ್ಮಧ್ಯಾನವನ್ನು ಮಾಡಿಕೊಂಡಿರಬಹುದು. ಹೀಗೆ ಸ್ತ್ರೀಯರೂ ಇರಬಹುದೆಂಬ ವಿಷಯವು ಮೋಕ್ಷಧರ್ಮವಿಚಾರವಾದ ಸುಲಭಾಜನಕಸಂವಾದದಲ್ಲಿಯೂ ಶ್ರೀ ಶಂಕರಾಚಾರ್ಯರ ಶಾರೀರಕಭಾಷ್ಯದ ಮೂರನೇ ಅಧ್ಯಾಯದ ನಾಲ್ಕನೇ ಪಾದದಲ್ಲಿರುವ ವಿಧುರರ ಅಂದರೆ ಹೆಂಡತಿಯನ್ನು ಕಳೆದುಕೊಂಡಿರುವವರ ಅಧಿಕಾರಪ್ರಸಂಗದಲ್ಲಿಯೂ ಉಕ್ತವಾಗಿದೆ. ಬ್ರಹ್ಮಚಾರಿಗಳಿಗಾಗಲಿ, ಗೃಹಸ್ಥರಿಗಾಗಲಿ, ವಾನಪ್ರಸ್ಥರಿಗಾಗಲಿ, ಏನಾದರೊಂದು ಕಾರಣದಿಂದ ಸನ್ಯಾಸಕ್ರಮವನ್ನು ತೆಗೆದುಕೊಳ್ಳುವುದಕ್ಕೆ ಅಡ್ಡಿ ಇದ್ದರೆ ಹೊರಗೆ ತಮ್ಮ ಆಶ್ರಮಧರ್ಮಗಳನ್ನು ನಡೆಸುತ್ತಿದ್ದರೂ ಮನಸ್ಸಿನಲ್ಲಿ ಅವುಗಳನ್ನು ತ್ಯಾಗಮಾಡಿ ಬಿಡಬಹುದು. ಹೀಗೆ ಇರುವಂಥ ತತ್ತ್ವಜ್ಞಾನಿಗಳ ಉದಾಹರಣೆಗಳು ಶ್ರುತಿಗಳಲ್ಲಿಯೂ ಸ್ಮೃತಿಗಳಲ್ಲಿಯೂ ಇತಿಹಾಸಗಳಲ್ಲಿಯೂ ಪುರಾಣಗಳಲ್ಲಿಯೂ ಮತ್ತು ಸಾಕ್ಷಾತ್ತಾಗಿ ನಮ್ಮ ಕಣ್ಣಮುಂದೆಯೂ ಬೇಕಾದಷ್ಟು ಸಿಕ್ಕುವುವು. ಇದು ವಿವಿದಿಷಾ ಸನ್ಯಾಸ.

ಇನ್ನು ಶ್ರವಣ ಮನನ ನಿದಿಧ್ಯಾಸಗಳನ್ನು ಚೆನ್ನಾಗಿಮಾಡಿ ತತ್ವಜ್ಞಾನವನ್ನು ಪಡೆದಿರುವವರು ಮಾಡುವ ಸನ್ಯಾಸವು ವಿದ್ವತ್ಸನ್ಯಾಸ. ಈ ಸನ್ಯಾಸವನ್ನು ಯಾಜ್ಞವಲ್ಕ್ಯರು ಮಾಡಿರುವರು. ವಿದ್ವಚ್ಛಿರೋಮಣಿಗಳಾದ ಭಗವಾನ್ ಯಾಜ್ಞವಲ್ಕ್ಯರು ಬಗೆಬಗೆಯಾದ ತತ್ವನಿರೂಪಗಳಿಂದ ಆಶ್ವಲಾಯನ ಮೊದಲಾದ ಬ್ರಾಹ್ಮಣರನ್ನು ಗೆದ್ದು ಜನಕನಿಗೆ ಬಗೆಬಗೆಯಿಂದ ಬುದ್ಧಿಯನ್ನು ಹೇಳಿ ತಾವು ಸನ್ಯಾಸವನ್ನು ಮಾಡಬೇಕೆಂದು ಮನಸ್ಸುಮಾಡಿ, ಮೈತ್ರೇಯಿಗೆ ಕ್ಷಿಪ್ರದಲ್ಲಿಯೇ ಜ್ಞಾನ ಪ್ರಾಪ್ತಿಯಾಗುವಂತೆ ತಿಳಿಯಹೇಳಿ ತಾವು ಸನ್ಯಾಸಿಗಳಾದರು. ಆತ್ಮಜ್ಞಾನವನ್ನು ಪಡೆದಂಥ ಬ್ರಹ್ಮನಿಷ್ಠರು. ಮಕ್ಕಳ ಬಯಕೆ, ಹಣದ ಬಯಕೆ, ಮತ್ತು ಲೋಕಾಂತರಗಳ ಬಯಕೆ, ಇವುಗಳನ್ನೆಲ್ಲಾ ಬಿಟ್ಟು ಭಿಕ್ಷಾಟನವನ್ನು ಮಾಡಿಕೊಂಡಿರುವರು ಎಂದು ಜ್ಞಾನಿಗಳ ಸನ್ಯಾಸವು ಕಹೋಳ ಬ್ರಾಹ್ಮಣದಲ್ಲಿಯೂ ಹೇಳಿದೆ. ಸಾಧಕರ ಸನ್ಯಾಸವೂ ಜ್ಞಾನಿಗಳ ಸನ್ಯಾಸವೂ ಎರಡೂ ಶಾರೀರ ಬ್ರಾಹ್ಮಣದಲ್ಲಿಯೂ ಹೇಳಿದೆ. ಸಾಧಕರ ಸನ್ಯಾಸವು ಸಾಧನರೂಪಸನ್ಯಾಸ. ಜ್ಞಾನಿಗಳಸನ್ಯಾಸವು ಫಲರೂಪಸನ್ಯಾಸ. ಸಾಧಕರಾದ ಸನ್ಯಾಸಿಗಳು ಜ್ಞಾನವನ್ನು ಪಡೆಯುವದಕ್ಕಾಗಿ ಶ್ರವಣ ಮನನಾದಿಗಳನ್ನು ಮಾಡಬೇಕು. ಜ್ಞಾನಿಗಳಾದ ಸನ್ಯಾಸಿಗಳು ಜೀವನ್ಮುಕ್ತಿಸುಖವನ್ನು ಅನುಭವಿಸುವುದಕ್ಕಾಗಿ ಮನೋನಾಶವನ್ನೂ ವಾಸನಾಕ್ಷಯವನ್ನೂ ಮಾಡಿಕೊಳ್ಳಬೇಕು. ಹೀಗೆ ಎರಡು ಬಗೆಯ ಸನ್ಯಾಸಕ್ಕೂ ಈ ಭೇದವಿದ್ದರೂ ಇವೆರಡಕ್ಕೂ ಪರಮಹಂಸವೆಂಬ ಒಂದೇ ಹೆಸರೆಂದು ಸ್ಮೃತಿಗಳೆಲ್ಲಾ ಒಪ್ಪುವುವು. ಆದ್ದರಿಂದ ಆಶ್ರಮಗಳು ನಾಲ್ಕೆಂದು ವ್ಯವಹಾರ.

ಜಾಬಾಲಶ್ರುತಿಯಲ್ಲಿ ಇವರ ವಿಷಯದಲ್ಲಿ ಜನಕನು ಪ್ರಶ್ನೆ ಮಾಡಿದುದಕ್ಕೆ ಯಾಜ್ಞವಲ್ಕ್ಯರು ಬೇರೆಬೇರೆ ಯೋಗ್ಯತೆಯುವರಿಗೆ ಬೇರೆಬೇರೆ ಸನ್ಯಾಸಕ್ರಮಗಳನ್ನೂ ಆಯಾ ಸನ್ಯಾಸಿಗಳು ಮೇಲೆ ಮಾಡಬೇಕಾದುದದನ್ನೂ ಹೇಳಲಾಗಿ, ಯಜ್ಞೋಪವೀತವನ್ನು ಕಿತ್ತುಹಾಕಿದಮೇಲೆ ಬ್ರಾಹ್ಮಣ್ಯಕ್ಕೆ ಕೊರತೆ ಯುಂಟಾಯಿತೆಂದು ಅತ್ರಿಋಷಿಗಳು ಆಕ್ಷೇಪಿಸಲು, ಆತ್ಮಜ್ಞಾನವೇ ಯಜ್ಞೋಪವೀತವೆಂದು ಯಾಜ್ಞವಲ್ಕ್ಯರು ಅವರನ್ನು

ಸಮಾಧಾನಮಾಡಿರುವರು. ಈ ಮಾತಿನಿಂದ ನೋಡಿದರೆ ಯಜ್ಞೋಪವೀತ ವಿಲ್ಲದಿರೋಣವೇ ಪರಮಹಂಸತ್ವದ ಗುರುತಾಯಿತು. ಇದು ಸಾಧಕರ ಸನ್ಯಾಸದ ಮಾತು. ಇನ್ನೊಂದುಕಡೆ ಪರಮಹಂಸರ ಮಾತು ಬಂದಾಗ ಸಂವರ್ತಕರೇ ಮೊದಲಾದ ಅನೇಕ ಬ್ರಹ್ಮವೇತ್ತರಾದ ಜೀವನ್ಮುಕ್ತರ ಉದಾಹರಣೆಯನ್ನು ಕೊಟ್ಟು ಅವರಲ್ಲಿ ಯಾವ ಗುರುತೂ ತೋರುವದಿಲ್ಲವೆಂದೂ, ಯಾವ ಆಚಾರವೂ ತೋರುವುದಿಲ್ಲವೆಂದೂ, ಅವರು ಹುಚ್ಚರಲ್ಲದಿದ್ದರೂ ಹುಚ್ಚರಂತೆ ಆಚರಿಸುವರೆಂದೂ, ಜ್ಞಾನಿಗಳ ಸನ್ಯಾಸದ ವಿಚಾರವು ಹೇಳಿರುವುದು. ಅದೇ ಸಂದರ್ಭದಲ್ಲಿಯೇ ಅವರು ಸುಖದುಃಖ ಮೊದಲಾದ ದ್ವಂದ್ವಗಳನ್ನು ಹಚ್ಚಿಕೊಳ್ಳದೆ ಯಾರಿಂದಲೂ ಎಂಥಾ ದಾನವನ್ನೂ ತೆಗೆದುಕೊಳ್ಳದೆ ಶುದ್ಧವಾದ ಮನಸುಳ್ಳವರಾಗಿ ಬ್ರಹ್ಮನಿಷ್ಠಾಪರಾಯಣರಾಗಿ ಪ್ರಾಣವಿರುವಷ್ಟರ ಮಾತ್ರಕ್ಕೆ ಆ ಸಮಯದಲ್ಲಿ ಭಿಕ್ಷೆಯಿಂದ ಹಸಿವಡಗಿಸಿಕೊಂಡು ಯಾರೂ ಇಲ್ಲದ ಮನೆಯಲ್ಲಿಯೇ ಗುಡಿಗಳಲ್ಲಿಯೋ ಗೋಪುರಗಳಲ್ಲಿಯೋ ಹುಲ್ಲಿನ ಬಣವೆಯ ಬಳಿಯಲ್ಲಿಯೋ ಹುತ್ತದ ಬಳಿಯಲ್ಲಿಯೋ ಮರಗಳ ಬುಡದಲ್ಲಿಯೋ ಕುಂಬಾರರ ಆವಿಗೆಯಲ್ಲಿಯೋ ಅಗ್ನಿಹೋತ್ರವಿರುವ ಕಡೆಯಲ್ಲಿಯೋ ನದಿಗಳ ಮರಳಿನಲ್ಲಿಯೋ ಪರ್ವತಗಳ ಗುಹೆಗಳಲ್ಲಿಯೋ ಇದ್ದು ಕಾಲವನ್ನು ಕಳೆಯುತ್ತ ಮನೆ ಮಠಗಳೊಂದೂ ಇಲ್ಲದೆ ನಾನು ನನ್ನದೆಂಬ ಅಭಿಮಾನವನ್ನು ಬಿಟ್ಟು ಸನ್ಯಾಸದಿಂದ ದೇಹತ್ಯಾಗವನ್ನು ಮಾಡುವವನು ಪರಮಹಂಸನೆಂದು ಉಕ್ತವಾಗಿರುವುದು. ಅಂತೂ ಸಾಧಕರ ಸನ್ಯಾಸವೂ ಮತ್ತು ಜ್ಞಾನಿಗಳ ಸನ್ಯಾಸವೂ ಎರಡೂ ಪರಮಹಂಸ ಸನ್ಯಾಸವೇ. ಹೀಗೆ ಎರಡಕ್ಕೂ ಪರಮಹಂಸತ್ವವು ಸಮಾನವಾದರೂ, ಒಂದು ಸಾಧಕರದಾಗಿಯೂ, ಇನ್ನೊಂದು ಜ್ಞಾನಿಗಳದಾಗಿಯೂ, ಇರುವುದರಿಂದ ಅವೆರಡಕ್ಕೂ ಏನಾದರೂ ಭೇದವಿರಲೇಬೇಕು. ಅದರ ವಿಚಾರವನ್ನು ಆರುಣ್ಯೋ (ಆರುಣೇಯ) ಪನಿಷತ್ತೂ (ಪರಮ) ಹಂಸೋಪನಿಷತ್ತೂ ತಿಳಿಸುವುವು. ಶಿಷ್ಯನಾದ ಆರುಣಿಯು ಕಾಲವನ್ನೆಲ್ಲಾ ಜ್ಞಾನಸಾಧನಗಳಲ್ಲಿಯೇ ಕಳೆಯುವಂತೆ ಜುಟ್ಟು, ಜನಿವಾರ, ವೇದಪಾಠ ಮತ್ತು ಗಾಯತ್ರೀಜಪ ಮೊದಲಾದ ಕರ್ಮಗಳನ್ನೆಲ್ಲಾ ಬಿಡುವುದು ಹೇಗೆಂದು ತನ್ನ ಗುರುವಾದ ಬ್ರಹ್ಮನನ್ನು ಕೇಳಿದಾಗ ಆತನು ಜುಟ್ಟು ಜನಿವಾರ ಮೊದಲಾದವುಗಳನ್ನೆಲ್ಲಾ ತೆಗೆದುಹಾಕಬೇಕೆಂದು ಹೇಳಿ

ದಂಡವನ್ನೂ, ಹೊದಿಕೆಯನ್ನೂ, ಕೌಪೀನವನ್ನೂ ಮಾತ್ರ ಇಟ್ಟುಕೊಂಡು
ಮೂರು ಸಂಧ್ಯಾಕಾಲಗಳಲ್ಲಿಯೂ ಸ್ನಾನಮಾಡುತ್ತ ಉಪನಿಷತ್ತುಗಳನ್ನು
ಮತ್ತೆಮತ್ತೆ ಓದುತ್ತಿರಬೇಕೆಂದು ಜ್ಞಾನಸಾಧನವಾದ ಕೆಲವು ಆಶ್ರಮ
ಧರ್ಮಗಳನ್ನು ಹೇಳುವುದರಮೂಲಕ ಸಾಧಕರ ಸನ್ಯಾಸವನ್ನು ತಿಳಿಸಿರು
ವನು. ಜ್ಞಾನಿಗಳಾದ ಪರಮಹಂಸರ ನಡವಳಿಕೆ ಹೇಗೆಂದು ನಾರದರು
ಕೇಳಿದಾಗ ಅವೇ ಬ್ರಹ್ಮನೇ ಮಕ್ಕಳು, ಗೆಳೆಯರು, ಮೊದಲಾದವರ
ಮಮತೆಯನ್ನೆಲ್ಲಾ ತೊರೆದು ತನ್ನ ಶರೀರ ರಕ್ಷಣೆಗಾಗಿಯೂ, ಮತ್ತು
ಜನರಿಗೆ ಅಸಹ್ಯವಾಗದಂತೆ ಇರುವುದಕ್ಕಾಗಿಯೂ, ದಂಡವನ್ನೂ, ಹೊದಿ-
ಕೆಯನ್ನೂ, ಕೌಪೀನವನ್ನೂ ಇಟ್ಟುಕೊಳ್ಳಬೇಕೆಂದು ಹೇಳಿ ಆ ದಂಡ
ಮೊದಲಾದುವುಗಳನ್ನು ಇಟ್ಟುಕೊಳ್ಳುವುದೂ ಕೂಡ ಲೌಕಿಕ ಪದ್ಧತಿಗಾ-
ಗಿಯೇ ಹೊರತು ಮುಖ್ಯವಲ್ಲವೆಂದೂ, ಅವನು ದಂಡ ಮೊದಲಾದವುಗಳನ್ನು
ಇಟ್ಟುಕೊಳ್ಳದೇ ಇರಬಹುದೆಂದೂ ಲೋಕವ್ಯವಹಾರವನ್ನೂ ಮೀರಿ ಬ್ರ-
ಹ್ಮಾನುಭವ ಒಂದರಲ್ಲಿಯೇ ಇರುವನೆಂದು ಹೇಳಿರುವನು. ಹೀಗೆ ಸಾಧಕರ
ಸನ್ಯಾಸಕ್ಕೂ ಜ್ಞಾನಿಗಳ ಸನ್ಯಾಸಕ್ಕೂ ಬಹಳ ಭೇದವುಂಟು. ಸಾಧ-
ಕರು ಸಂಸಾರವನ್ನು ಅಸಾರವೆಂದು ತಿಳಿದು ಮದುವೆಗೆ ಮನಸ್ಸುಕೊಡದೆ
ವೈರಾಗ್ಯವನ್ನ ದೃಢಮಾಡಿಕೊಂಡು ಸನ್ಯಾಸಮಾಡುವರು. ತತ್ವವನ್ನು
ತಿಳಿದವರು ಜುಟ್ಟು ಜನಿವಾರಗಳನ್ನು ತೆಗೆದೊಗೆದು ಏಕದಂಡವನ್ನು ಹಿಡಿದು
ಎಲ್ಲವನ್ನೂ ಬಿಟ್ಟು ಸನ್ಯಾಸಮಾಡುವರು. ಯಾವುದಾದರೊಂದು ಕಲೆಯ-
ನ್ನು ಕಲಿಯಬೇಕೆಂದು ಯಾವಾಗಲೊ ಒಂದುಸಲ ಕುತೂಹಲ ಹುಟ್ಟು
ವಂತೆ, ಆತ್ಮಸ್ವರೂಪವನ್ನು ತಿಳಿಯಬೇಕೆಂಬ ಬರೀ ಕುತೂಹಲ ಉಂಟಾ-
ದರೂ ಮತ್ತು ತಿಳಿವಂತೆ ತೋರಿದಮಾತ್ರಕ್ಕೆ ಜ್ಞಾನಿಯಾದೆನೆಂಬ ಭಾವನೆ
ಯುಂಟಾದರೂ-ಆ ಸ್ಥಿತಿಗಳಿಗೆ ಸನ್ಯಾಸವು ಒಪ್ಪುವದಿಲ್ಲ. ತಡೆಯಲಾರದಷ್ಟು
ಹಸಿವೆ ಆದಾಗ ಊಟದ ಹೊರತು ಇನ್ನೊಂದೇನೂ ಬೇಕಾಗದಂತೆಯೂ
ಊಟವು ತಡವಾದರೆ ಸಹಿಸಲಾರದಿರುವಂತೆಯೂ, ಜನ್ಮವನ್ನು ತಂದುಕೊ-
ಡುವಂಥ ಕರ್ಮಗಳು ಎಷ್ಟುಮಾತ್ರವೂ ಬೇಡವೆನಿಸಿ ಜ್ಞಾನಕ್ಕೆ ಸಾಧನ
ಗಳಾದ ಶ್ರವಣ ಮೊದಲಾದುವುಗಳಲ್ಲಿ ಎಡೆಬಿಡದ ಸನ್ನಾಹವು ನಡೆಯು
ವಂತಾದರೆ, ಸಾಧಕರ ಸನ್ಯಾಸಕ್ಕೆ ಯೋಗ್ಯತೆ ಯುಂಟಾದಂತಾಯಿತು.

ಜ್ಞಾನಿಗಳ ಸನ್ಯಾಸವಾಗಬೇಕಾದರೆ ಅವನಿಗೆ ಎಲ್ಲರಿಗೂ ದೇಹವೇ ನಾನೆಂಬ ಭಾವನೆಯು ಹೇಗೆ ಬಲವಾಗಿರುವುದೋ ಹಾಗೆ ದೇಹವು ನಾನಲ್ಲವೆಂಬ ಭಾವನೆಯು ಬಲವಾಗಬೇಕು. ಆಗ ಅವನು ಬೆಡವೆಂದರೂ ಅವನಿಗೆ ಮುಕ್ತಿ ತಪ್ಪುವದಿಲ್ಲ. ಜ್ಞಾನವಾದೊಡನೆಯೇ ತಾನಲ್ಲದ್ದನ್ನು ತಾನೆಂದು ತಿಳಿಯುವ ಅವಿವೇಕವೆಂಬ ಕಗ್ಗಂಟು ಬಿಚ್ಚಿಕೊಂಡು ಹೋಗುತ್ತದೆ. ಇಷ್ಟಾಗುತ್ತಲೆ ಆತ್ಮನು ಸುಮ್ಮನೆ ಇರತಕ್ಕವನೋ, ಅಥವ ಏನನ್ನಾದರೂ ಮಾಡುತ್ತಿರುವವನೋ. ಒಂದು ವಕ್ಷ ಆತ್ಮನು ಸುಮ್ಮನೇ ನೋಡುತ್ತಿರತಕ್ಕವನೇ ಆದರೂ ಅವನು ಅನಂತನಹುದೋ ಅಲ್ಲವೋ. ಒಂದುವೇಳೆ ಅನಂತನಾದರೂ ಅವನನ್ನು ಬುದ್ಧಿಯಿಂದ ತಿಳಿಯಲಾಗುವುದೋ ಇಲ್ಲವೋ, ತಿಳಿಯಲಾದರೂ ತಿಳಿದ ಮಾತ್ರಕ್ಕೆ ಮುಕ್ತಿಯುಂಟೋ ಇಲ್ಲವೋ, ಎಂಬ ಸಂಶಯಗಳು ಹೋಗುವವು. ಮತ್ತು ಮುಂದಿನ ಜನ್ಮಗಳಿಗೆ ಕಾರಣಗಳಾಗಿರುವ ಕರ್ಮಗಳೆಲ್ಲಾ ನಿರ್ಬೀಜವಾಗಿ ಹೋಗುವವು. ಯಾವನು ಬ್ರಹ್ಮಜ್ಞಾನಿಯಾಗಿ ತಾನಲ್ಲದ್ದನ್ನು ತಾನೆಂದು ತಿಳಿದುಕೊಳ್ಳದೆ ಇರುವವನಾಗಿ ಸಂಶಯಗಳನ್ನೆಲ್ಲಾ ಕಳೆದುಕೊಂಡಿರುವನೋ ಅವನು ಮೂರು ಲೋಕವನ್ನು ಕೊಂದರೂ ಅವನಿಗೆ ಅದರ ಬಾಧೆ ತಟ್ಟುವದಿಲ್ಲ. ಇನ್ನು ಇತರ ಕರ್ಮಗಳ ಮಾತೇನು? ಸಾಧಕರ ಸನ್ಯಾಸದಿಂದಲೇ ತತ್ವಜ್ಞಾನವಾಗಿ ಮುಂದಿನ ಜನ್ಮಗಳಿಗೆ ಕಾರಣವಾದ ಕರ್ಮವೆಲ್ಲಾ ಹೋಗುವದರಿಂದಲೂ ಮತ್ತು ಈ ಜನ್ಮದಲ್ಲಿ ಫಲವನ್ನು ಕೊಡುವುದಕ್ಕೆ ಪ್ರಾರಂಭವಾಗಿರುವ ಕರ್ಮವು ಅನುಭವಿಸಿದ ಹೊರತು ಹೋಗುವುದಿಲ್ಲವಾದುದರಿಂದಲೂ ಜ್ಞಾನಿಗಳ ಸನ್ಯಾಸವೆಂಬದೊಂದು ಬೇರೆ ಏಕೆಂದು ತೋರಬಹುದು. ಜ್ಞಾನಿಗಳ ಸನ್ಯಾಸವು ಜೀವನ್ಮುಕ್ತಿಸುಖಕ್ಕೆ ಸಾಧನವಾಗುವುದು. ತತ್ವವನ್ನು ತಿಳಿದುಕೊಳ್ಳುವುದಕ್ಕೆ ಸಾಧಕರ ಸನ್ಯಾಸವು ಹೇಗೋ ಹಾಗೇ ಜೀವನ್ಮುಕ್ತಿ ಸುಖವನ್ನು ಪಡುವುದಕ್ಕೆ ಜ್ಞಾನಿಗಳ ಸನ್ಯಾಸವನ್ನು ಮಾಡಬೇಕು.

ಇನ್ನು ಜೀವನ್ಮುಕ್ತಿಯೆಂದರೇನು? ಅದಕ್ಕೆ ಪ್ರಮಾಣವೇನು? ಅದನ್ನು ಪಡೆಯುವುದು ಹೇಗೆ? ಅದನ್ನು ಪಡೆಯುವುದರಿಂದ ಪ್ರಯೋಜನವೇನು? ಎಂದರೆ ಬದುಕಿರುವ ಮನುಷ್ಯನಿಗೆ ನಾನು ಮಾಡುತ್ತೇನೆ ನಾನು ಅನುಭವಿಸುತ್ತೇನೆ ನಾನು ಸುಖಿ, ನಾನು ದುಃಖಿ. ಮೊದಲಾದ ಮನಸ್ಸಿನ

ಧರ್ಮಗಳು ಕ್ಲೇಶರೂಪವಾಗಿ ಅವನನ್ನು ಕಟ್ಟಿ ಕೆಡಹುವವು. ಆ ಕಟ್ಟನ್ನು ಕಳಚಿಕೊಳ್ಳುವುದೇ ಜೀವನ್ಮುಕ್ತಿ. ಸಾಕ್ಷಿರೂಪನಾದ ಆತ್ಮನಿಗೆ ಬಿದ್ದಿರುವ ಕಟ್ಟನ್ನು ಕಳಚುವುದೋ? ಅಥವ ಮನಸ್ಸಿಗೆ ತೊಡಕಿಕೊಂಡಿರುವ ಕಟ್ಟನ್ನು ಕಳಚುವುದೋ? ಎಂದರೆ—ಆತ್ಮನಿಗೆ ಬಿದ್ದಿರುವ ಕಟ್ಟನ್ನು ಕಳಚುವುದೆಂಬಮಾತು ಒಪ್ಪುವುದಿಲ್ಲ. ಏಕೆಂದರೆ ಆತ್ಮನು ಕಟ್ಟಿಗೆ ಸಿಕ್ಕುವುದೇ ಇಲ್ಲ. ತತ್ವಜ್ಞಾನವಾಗುವುದಕ್ಕೆ ಮುಂಚೆ ಆತ್ಮನೇ ಕಟ್ಟಿಗೆ ಸಿಕ್ಕಿರುವಂತೆ ತೋರುವುದು. ಜ್ಞಾನವಾಗುತ್ತಲೆ ಆತ್ಮನನ್ನು ಯಾವಕಟ್ಟೂ ಸುತ್ತಿಕೊಂಡಿಲ್ಲವೆಂದು ಗೊತ್ತಾಗುವುದು. ಇನ್ನು ಮನಸ್ಸಿಗೆ ತೊಡಕಿಕೊಂಡಿರುವ ಕಟ್ಟನ್ನು ಕಳಚುವುದು ಆಗುವಮಾತೇ ಅಲ್ಲ. ಏಕೆಂದರೆ, ನಾನು ಮಾಡುತ್ತೇನೆ ನಾನು ಅನುಭವಿಸುತ್ತೇನೆ (ಎಂಬ) ಈ ಮುಂತಾದವುಗಳೆಲ್ಲ ಮನಸ್ಸಿನ ಧರ್ಮಗಳು. ನೀರಿನ ತಣ್ಪನ್ನು ಕಳೆಯುವುದಕ್ಕಾದರೆ ಮತ್ತು ಬೆಂಕಿಯ ಬಿಸಿಯನ್ನು ಹೋಗಲಾಡಿಸುವುದಕ್ಕಾದರೆ ಮಾಡುತ್ತೇನೆ ಅನುಭವಿಸುತ್ತೇನೆ ಎಂಬ ಮೊದಲಾದ ಮನಸ್ಸಿನ ಧರ್ಮಗಳನ್ನು ಇಲ್ಲದಂತೆ ಮಾಡುವುದಕ್ಕಾದೀತು. ನೀರಿಗೆ ತಂಪು ಹೇಗೆ ಹುಟ್ಟುಗುಣವೋ ಬೆಂಕಿಗೆ ಬಿಸಿಯು ಹೇಗೆ ಹುಟ್ಟುಗುಣವೋ ಹಾಗೆಯೇ ಮನಸ್ಸಿಗೆ ಮಾಡುತ್ತೇನೆ ಅನುಭವಿಸುತ್ತೇನೆ ಮೊದಲಾದವುಗಳು ಹುಟ್ಟುಗುಣಗಳು. ಹೀಗೆಂದು ಯಾರಾದರು ಆಕ್ಷೇಪಿಸುವುದಾದರೆ. ಕೇಳಿರಿ? ಹುಟ್ಟುಗುಣಗಳನ್ನು ಎಷ್ಟುಮಾತ್ರವೂ ಇಲ್ಲದಂತೆಮಾಡುವುದಕ್ಕಾಗದಿದ್ದರೂ ಅದರ ಆಟವನ್ನು ನಿಲ್ಲಿಸುವುದಕ್ಕೆ ಬರುವುದುಂಟು? ಮಣ್ಣು ಬೆರಸಿ ಬಿಡುವುದರಿಂದ ನೀರಿನ ತಂಪು ತೋರದಂತೆ ಮಾಡಬಹುದು. ಮಣಿಯ ಅಥವಾ ಮಂತ್ರದ ಪ್ರಭಾವದಿಂದ ಬೆಂಕಿಯಲ್ಲಿ ಬಿಸಿಕಾಣದಂತೆ ಮಾಡಬಹುದು. ಹಾಗೆಯೇ ಯೋಗಾಭ್ಯಾಸದಿಂದ ಮನಸ್ಸಿನ ಎಲ್ಲಾವೃತ್ತಿಗಳ ಆಟವನ್ನು ನಿಲ್ಲಿಸಿ ಬಿಡಬಹುದು. ಮನಸ್ಸಿನ ವೃತ್ತಿಗಳನ್ನು ತಡೆದುಬಿಟ್ಟರೆ. ಸುಖ ದುಃಖ ಮೊದಲಾದವುಗಳ ಅನುಭವಗಳೇ ತೋರದೇ ಹೋಗಬಹುದಾದುದರಿಂದ ಈ ಜನ್ಮದಲ್ಲಿ ಸುಖ ದುಃಖಮೊದಲಾದ ಫಲಗಳನ್ನು ಕೊಡುವುದಕ್ಕೆ ನಿಂತಿರುವ ಕರ್ಮವು ತನ್ನ ಫಲವನ್ನು ಕೊಡುವುದಕ್ಕಾಗಿ ದೇಹವನ್ನೂ ಇಂದ್ರಿಯಗಳನ್ನೂ ಮುಂದುಮಾಡಿ ತತ್ವಜ್ಞಾನದ ಆಟವನ್ನೇ ನಿಲ್ಲಿಸುವುದಿಲ್ಲವೋ? ಎಂದರೆ ಇಲ್ಲ. ಮ-

ನಸ್ಸಿನ ವೃತ್ತಿಗಳನ್ನೆಲ್ಲಾ ತಡೆದುಕೊಂಡು ಜೀವನ್ಮುಕ್ತಿಸುಖವನ್ನು ಅನುಭವಿಸುವುದೆಂಬುದೂ ಅವನ ಪ್ರಾರಬ್ಧದೊಳಗೇ ಸೇರಿರುವುದು. ಹಾಗೆ ಅವನ ಪ್ರಾರಬ್ಧಕರ್ಮದ ಬಲದಿಂದಲೇ ಅವನಿಗೆ ಜೀವನ್ಮುಕ್ತಿಸುಖವು ವುಂಟಾಗುವಾಗ ಅದಕ್ಕಾಗಿ ಮನುಷ್ಯನ ಪ್ರಯತ್ನವೇಕೆ ಬೇಕೆಂದರೆ—ವ್ಯವಸಾಯ ಮತ್ತು ವ್ಯಾಪಾರಗಳಿಗೆ ಬೇಕಾಗುವಂತೆ ಇದಕ್ಕೂ ಪ್ರಯತ್ನವು ಬೇಕು. ಪ್ರಾರಬ್ಧಕರ್ಮವೆಂಬುದು ಕಣ್ಣಿಗೆ ಕಾಣುವಹಾಗಿಲ್ಲ. ಕಣ್ಣಿಗೆ ಕಂಡಹಾಗೆ ಸಾಧನಗಳನ್ನು ಉಪಯೋಗಿಸಿದ ಹೊರತು ವ್ಯಾಪಾರದಲ್ಲಾಗಲಿ ವ್ಯವಸಾಯದಲ್ಲಾಗಲಿ ಫಲವು ತೋರಲಾರದು. ಹಾಗೆಯೇ ಜೀವನ್ಮುಕ್ತಿಸುಖಕ್ಕೂ ಪ್ರಯತ್ನವು ಬೇಕೇ ಬೇಕು. ಮನುಷ್ಯನು ಪ್ರಯತ್ನ ಮಾಡಿದರೂ ಒಂದೊಂದು ವೇಳೆ ವ್ಯವಸಾಯ ಮೊದಲಾದವುಗಳಲ್ಲಿ ಫಲವು ತೋರದೇ ಹೋಗುವುದುಂಟು, ಹಾಗಾಗಬೇಕಾದರೆ ಅದಕ್ಕೆ ಇನ್ನೇನೋ ಒಂದು ಬೇರೇ ಪ್ರಬಲವಾದ ಕರ್ಮವು ಅಡ್ಡಿಯಾಗಿರುವುದೆಂದು ತಿಳಿಯಬೇಕು. ಆ ಪ್ರಬಲವಾದ ಕರ್ಮವು ಬೆಳೆಗೆ ಅನುಕೂಲವಾದ ಮಳೆಯನ್ನು ಕೊಡದೇ ಇರುವುದೇ ಮೊದಲಾದ ರೂಪದಲ್ಲಿ ಕಾಣಿಸಿಕೊಂಡು ಫಲಕ್ಕೆ ಅಡ್ಡಬಂದಿರುವುದು. ಆ ಪ್ರತಿಬಂಧವನ್ನು ಅದರ ಎದುರಾಳಿಯಾದ ಮತ್ತು ಅದಕ್ಕಿಂತ ಪ್ರಬಲವಾದ ಪರ್ಜನ್ಯಜಪ ಮೊದಲಾದವುಗಳಿಂದ ಹಿಮ್ಮೆಟ್ಟಿಸಬಹುದು. ಈ ಕರ್ಮವು ಅನುಕೂಲವಾದ ಮಳೆಯನ್ನು ಕಣ್ಣಿಗೆ ಕಾಣುವಹಾಗೆ ಕೊಟ್ಟು ಬೆಳೆಗೆ ಇದ್ದ ಅಡ್ಡಿಯನ್ನು ಕಳೆಯುವುದು. ಪ್ರಾರಬ್ಧಕರ್ಮವು ಎಷ್ಟೇ ಬಲವತ್ತರವಾಗಿದ್ದರೂ ಯೋಗಾಭ್ಯಾಸ ರೂಪವಾದ ಪುರುಷಪ್ರಯತ್ನವೇನೂ ಅದಕ್ಕೆ ಎಷ್ಟುಮಾತ್ರವೂ ಕಡಮೆಯಿಲ್ಲ. ಪ್ರಾರಬ್ಧಕರ್ಮವು ತತ್ವಜ್ಞಾನಕ್ಕಿಂತ ಹೇಗೆ ಪ್ರಬಲವೋ ಹಾಗೆ ಆ ಪ್ರಾರಬ್ಧಕ್ಕಿಂತಲೂ ಯೋಗಾಭ್ಯಾಸವು ಹೆಚ್ಚಿನದು. ಆದುದರಿಂದಲೇ ಉದ್ದಾಲಕ ಮತ್ತು ವೀತಹವ್ಯ ಮೊದಲಾದ ಯೋಗಿಗಳು, ತಮ್ಮ ತಮ್ಮ ಮನಸ್ಸು ಬಂದಾಗ ದೇಹವನ್ನು ಬಿಟ್ಟಿರುತ್ತಾರೆ. ಅಲ್ಪಾಯುಗಳಾದ ನಮಗೆ ಅಂಥಾ ಯೋಗವು ಈಗ ಸಾಧ್ಯವಾಗದೇ ಹೋದರೂ ಕಾಮಕ್ರೋಧ ಮೊದಲಾದ ಚಿತ್ತವೃತ್ತಿಗಳನ್ನು ತಡೆದುಕೊಳ್ಳುವಷ್ಟುಮಾತ್ರದ ಯೋಗವೇನೂ ಅಸಾಧ್ಯವಲ್ಲ. ಶಾಸ್ತ್ರದಲ್ಲಿ ಹೇಳಿರುವ ಪ್ರಯತ್ನವು ಅಷ್ಟು ಪ್ರಬಲವಾದುದೆಂದು ಒಪ್ಪಿಕೊ-

ತ್ಸಪೇ ಹೋದರೆ ಚಿಕಿತ್ಸೆ ಮೊದಲುಗೊಂಡು ಮೋಕ್ಷಶಾಸ್ತ್ರದವರಿಗಿನವುಗ ಲ್ಲಾ ಕೆಲಸಕ್ಕೆ ಬಾರದಂತೆಯೇ ಆಗಿಬಿಡುವುವು. ಒಂದೊಂದುವೇಳೆ ಯಾವಾ ಗಲಾದರೂ ಪುರುಷಪ್ರಯತ್ನವು ಫಲಿಸದ ಹೋದಮಾತ್ರಕ್ಕೇ ಅದರಲ್ಲಿ ಹುರುಳಿಲ್ಲವೆಂದು ಹೇಳಬಾರದು. ಯಾವಾಗಲೋ ಒಂದುಸಲ ಸೋತು ಹೋದಮಾತ್ರಕ್ಕೇ ರಾಜರೆಲ್ಲಾ ಆನೆಗಳನ್ನೂ ಕುದುರೆಗಳನ್ನೂ ಪದಾತಿ ಯನ್ನೂ ಕಡೆಗಣ್ಣಿಂದನೋಡುವರೇನು? ಅಜೀರ್ಣವಾದೀತೆಂದು ಯಾರಾ ದರೂ ಊಟವನ್ನೇ ಬಿಡುತ್ತಾರೆಯೋ? ತಿರುಪದವರು ಬಂದಾರೆಂದು ಅಡಿಗೆ ಯನ್ನೇ ಮಾಡದೇ ಇರುವುದುಂಟೇ? ಶಾಸ್ತ್ರದಲ್ಲಿ ಹೇಳಿರುವ ಪ್ರಯತ್ನವು ಬಹು ಪ್ರಬಲವಾದುದೆಂಬ ವಿಚಾರವು ವಸಿಷ್ಠರಿಗೂ ಶ್ರೀರಾಮನಿಗೂ ನಡೆ- ದ ಮಾತುಗಾರಿಕೆಯಿಂದ ಗೊತ್ತಾಗುತ್ತದೆ. ನೋಡಿರಿ,—

ವಸಿಷ್ಠರು. ರಾಮ, ಈ ಸಂಸಾರದಲ್ಲಿ ಎಲ್ಲರೂ ಯಾವಾಗಲೂ ಮ- ಕ್ಕಳು ಬೇಕಾದರೂ, ಹಣವು ಬೇಕಾದರೂ, ಸ್ವರ್ಗಲೋಕ ಬೇಕಾದರೂ, ಬ್ರಹ್ಮಲೋಕ ಬೇಕಾದರೂ ಕ್ರಮವಾಗಿ ಪುತ್ರಕಾಮೇಷ್ಟಿಯಾಗ ವ್ಯವ ಸಾಯ ಮತ್ತು ವ್ಯಾಪಾರ ಜ್ಯೋತಿಷ್ಟೋಮ ಮತ್ತು ಬ್ರಹ್ಮೋಪಾಸನೆ ಮೊದಲಾದ ತಮ್ಮ ಬಲವಾದ ಪ್ರಯತ್ನದಿಂದಲೇ ಎಲ್ಲವನ್ನೂ ಪಡೆಯು ತ್ತಾರೆ. ಶಾಸ್ತ್ರಗಳನ್ನು ಮೀರಿ ಮತ್ತೊಬ್ಬರ ಹಣಕಾಸನ್ನು ಎತ್ತಿಹಾ ಕುವುದು ಕಂಡಕಂಡ ಹೆಂಗಸರಮೇಲೆ ಕಣ್ಣುಹಾಕುವುದು ಮೊದಲಾದ ಯತ್ನಗಳನ್ನು ನಡೆಸಿದವರಿಗೆ ನರಕವೇಗತಿ.

ಶಾಸ್ತ್ರದಲ್ಲಿ ಹೇಳಿದಂತೆ ನಿತ್ಯನೈಮಿತ್ತಿಕ (ಮೊದಲಾದ) ಕರ್ಮಗ ಳನ್ನು ನಡೆಸಿದವರಿಗೆ ಸ್ವರ್ಗಮೊದಲಾದವುಗಳಿಗಿಂತ ಹೆಚ್ಚಿನಮೋಕ್ಷವೇ ಸಿಕ್ಕುವುದು. ಚಿಕ್ಕಂದಿನಿಂದಲೂ ಒಳ್ಳೆಯವರ ಜೊತೆಯಲ್ಲಿದ್ದುಕೊಂಡು ಗುಣವಂತನಾಗಿ ಶಾಸ್ತ್ರದಂತೆ ಚೆನ್ನಾಗಿನಡೆದುಕೊಂಡರೆ ಆ ಪುರುಷ ಪ್ರಯತ್ನದಿಂದ ಶ್ರೇಯಸ್ಸಾಗಿಯೇ ಆಗುವುದು.

ಶ್ರೀರಾಮ. ವಸಿಷ್ಠರೇ? ಹಿಂದೆ ಧರ್ಮಗಳನ್ನೂ ಅಧರ್ಮಗಳನ್ನೂ ಮಾಡಿದವಾಸನೆಯು ನನ್ನನ್ನು ಹೇಗೆ ಹೇಗೆ ಸೆಳೆದುಕೊಂಡು ಹೋಗುತ್ತ ಯೋ ನಾನು ಹಾಗೆ ಹಾಗೆನಡೆಯುತ್ತಿದ್ದೇನೆ. ನಾನೇನು ಮಾಡಲಿ?

ವಸಿಷ್ಠರು. ಅಯ್ಯಾ ಶ್ರೀರಾಮ, ಆದುದರಿಂದಲೇ ನೀನು ನಿನ್ನ

ಪ್ರಯತ್ನದಿಂದ ತಂದುಕೊಂಡ ವಾಸನೆಯಿಂದಲೇ ಬಹು ಹೆಚ್ಚಿನ ಶ್ರೇಯ-ಸ್ಸನ್ನು ಪಡೆಯುತ್ತಿ. ನೀನು ಹಿಂದಿನ ಅಭ್ಯಾಸಗಳ ವಾಸನೆಗೊಳಗಾಗಿರು ತ್ತೀಯಷ್ಟೆ. ಅದಕ್ಕೆ ಸಿಕ್ಕಿಬಿದ್ದಿರುವುದನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಮನಸ್ಸಿನಿಂದಲೂ ಮಾತಿನಿಂದಲೂ ದೇಹದಿಂದಲೂ ಈಗ ನೀನು ಉತ್ಸಾಹ ದಿಂದ ಪ್ರಯತ್ನಮಾಡಬೇಕಾಗಿದೆ. ಹಿಂದಿನ ಅಭ್ಯಾಸದ ವಾಸನೆಗಳಲ್ಲಿ ಒಳ್ಳೆಯವೆಂದೂ, ಕೆಟ್ಟವೆಂದೂ, ಎರಡುಬಗೆ. ಈಗ ನಿನ್ನನ್ನು ಎರಡು ಬಗೆಯ ವಾಸನೆಗಳು ಸೆಳೆಯುತ್ತಿರುವುವೋ? ಅಥವಾ ಅವುಗಳಲ್ಲಿ ಯಾವು ದಾದರೂ ಒಂದೇನೋ? ಒಂದೇ ಆದರೆ ಅದೇನು ಒಳ್ಳೆಯದೊ ಕೆಟ್ಟದೋ? ಒಳ್ಳೆಯ ವಾಸನೆಯು ನಿನ್ನನ್ನು ಸೆಳೆಯುತ್ತಿದ್ದರೆ ಇನ್ನೊಂದು ಪ್ರಯತ್ನ ವಿಲ್ಲದೆ ಅದರಿಂದಲೇ ಮೋಕ್ಷವನ್ನು ಪಡೆಯುತ್ತಿ. ಕೆಟ್ಟವಾಸನೆಗಳೇನಾದ-ರೂ ನಿನ್ನನ್ನು ಸೆಳೆದು ಸಂಕಟದಲ್ಲಿ ಕೆಡವುತ್ತಿದ್ದರೆ ಆ ಕೆಟ್ಟವುಗಳಿಗೆ ವಿರೋಧಿಗಳಾದ ಒಳ್ಳೆಯ ಅಭ್ಯಾಸಗಳನ್ನು ನೀನೇ ಬೆಳೆಸಿಕೊಂಡು ಅವುಗಳಿಂದ ಕೆಟ್ಟವುಗಳನ್ನು ಗೆಲ್ಲಬೇಕು. ನಿನ್ನನ್ನು ಬಯಲಿಗೆ ಎಳೆಯ ಬೇಕೆಂದು, ಹಗೆಗಳು, ದಂಡೆತ್ತಿಬಂದರೆ, ಸೈನಿಕರನ್ನು ಮುಂದಟ್ಟಿ ಹೊರ ಗಣ ಮಾರಿಯನ್ನು ಹೊರಗೇ ಹೋಗುವಂತೆ ಮಾಡು. ಹಾಗೆ ನಿನ್ನ ಕೆಟ್ಟ ವಾಸನೆಗಳನ್ನು ಬೇರೆಯವರನ್ನು ಮುಂದುಮಾಡಿ ಹಿಮ್ಮೆಟ್ಟಿಸುವುದಕ್ಕಾ ಗುವದಿಲ್ಲ. ನಿನ್ನ ಕೆಟ್ಟವಾಸನೆಗಳನ್ನು ನೀನೇ ನಿನ್ನ ಒಳ್ಳೆಯ ವಾಸನೆಗ-ಳಿಂದಲೇ ಹಿಮ್ಮೆಟ್ಟಿಸಬೇಕು. ವಾಸನೆಯೆಂಬ ಪ್ರವಾಹಕ್ಕೆ ಒಳ್ಳೆಯದೊಂದು ದಾರಿ. ಕೆಟ್ಟದೊಂದುದಾರಿ. ವಾಸನೆಯು ಒಳ್ಳೆಯ ದಾರಿಯಲ್ಲಿ ಹರಿದರಂತೂ ಸರಿಯೆ ಆಯಿತು, ಕೆಟ್ಟದಾರಿಯನ್ನು ಹಿಡಿದರೆ ಮಾತ್ರ ಶಾಸ್ತ್ರದಲ್ಲಿ ಹೇ ಳಿರುವ ಪ್ರಯತ್ನದಿಂದ ಅದನ್ನು ತಿರುಗಿಸಿತಂದು ಅದನ್ನು ಒಳ್ಳೆಯದಾರಿಗೆ ಬಿಡಬೇಕು. ಕಂಡವರ ಗಂಟನ್ನು ಹಾರಿಸುವುದು ಮತ್ತು ಕಂಡ ಕಂಡ ಹೆಂಗಸರನ್ನು ಬಯಸುವುದು ಮೊದಲಾದ ಕೆಟ್ಟದಾರಿಗಳನ್ನು ಹಿಡಿಯು ತ್ತಿರುವ ವಾಸನೆಯನ್ನು ಬಲಾತ್ಕಾರದಿಂದ ತಿರುಗಿಸಿ ಶಾಸ್ತ್ರಾರ್ಥ ವಿಚಾ ಮತ್ತು ದೇವತಾರ್ಚನೆ ಮೊದಲಾದ ಒಳ್ಳೆದಾರಿಗೆ ನೂಕಬೇಕು. ಮನಸ್ಸು ಮಕ್ಕಳಹಾಗೆ ಇರುತ್ತದೆ. ಮಕ್ಕಳು ಮಣ್ಣು ಮುಕ್ಕುತ್ತಿದ್ದರೆ ಯಾರಾ ದರೂ ಅದನ್ನು ಬಿಡಿಸಿ ಹಣ್ಣುಕೊಟ್ಟರೆ ಆದನ್ನೆ ಬಾಯಲ್ಲಿ ಇಟ್ಟುಕೊಳ್ಳು

ಪಷ್ಟೆ. ಮತ್ತು ಕೊರಳಲ್ಲಿರುವ ಮುತ್ತಿನಹಾರವನ್ನು ಹರಿಯಬೇಕೆಂದು ಕೈಹಾಕಿದರೆ ಮೆಲ್ಲಗೆ ಚೆಂಡುಕೊಟ್ಟು ಕೈಬಿಡಿಸುವಷ್ಟೆ. ಹಾಗೆ ಮನಸ್ಸು ಕೆಟ್ಟವರ ಜೊತೆಯಲ್ಲಿ ಕೆಟ್ಟ ಹಾದಿಯನ್ನು ಹಿಡಿದು ಕಷ್ಟಕ್ಕೆ ಗುರಿಯಾಗುತ್ತಿದ್ದರೆ ಒಳ್ಳೆಯವರ ಜೊತೆಯನ್ನು ಕೊಟ್ಟು ಅದನ್ನು ಒಳ್ಳೆಯ ದಾರಿಗೆ ತಂದುಬಿಡುವುದಕ್ಕಾಗುತ್ತದೆ? ಹಣ್ಣನ್ನು ಕೊಡದೇಹೋದರೆ ಮಣ್ಣನ್ನೆ ಮುಕ್ಕುತ್ತಲೂ ಚೆಂಡನ್ನು ಕೊಡದೇ ಹೋದರೆ, ಮುತ್ತಿನ ಹಾರವನ್ನೇ ಹರಿಯುತ್ತಲೂ ಮಕ್ಕಳು ಚೇಷ್ಟೆಮಾಡುವಂತೆ ಪ್ರಯತ್ನ ದಿಂದ ಒಳ್ಳೆಯದಾರಿಗೆ ತಿರುಗಿಸದೇಹೋದರೆ, ಮನಸ್ಸು ಕೆಟ್ಟಹಾದಿಯನ್ನೇ ಹಿಡಿದು ಕೆಟ್ಟುಹೋಗುವುದು, ಮನಸ್ಸಿಗೆ ಚಪಲತೆ ಬಹಳ. ಅದು ಒಳ್ಳೆಯ ವಾಸನೆಯನ್ನು ಬಿಡಿಸುತ್ತಲೇ ಕೆಟ್ಟವಾಸನೆಯನ್ನು ಹಿಡಿಯುತ್ತದೆ. ಕೆಟ್ಟ ವಾಸನೆಯನ್ನು ಬಿಡಿಸುತ್ತಲೇ ಒಳ್ಳೆಯ ವಾಸನೆಗೆ ತಿರುಗುತ್ತದೆ. ಹೀಗೆ ಚಪಲವಾಗಿರುವ ಮನಸ್ಸಿಗೆ ಚಪಲವಾಗಿರುವ ಪಶುವಿನಹೋಲಿಕೆ ಒಪ್ಪುತ್ತದೆ. ಬಹು ಚಪಲತನದಿಂದ ಹೊರಗೆ ಅಲೆಯುತ್ತಿರುವ ಒಂದು ಪಶುವನ್ನು ಗೊಂತಿಗೆ (ಹಕ್ಕೆಗೆ) ತಿರುಗಿಸಿ ತರಬೇಕಾದರೆ, ಎರಡು ಉಪಾಯಗಳಿವೆ. ಕೈಯಲ್ಲಿ ಹಸೀಹುಲ್ಲಿನ ಸಿವುಡನ್ನು ಹಿಡಿದುಕೊಂಡು ತೋರಿಸುವುದು ಅಥವಾ ಮೈಯನ್ನು ತೂರಿಸುವುದು ಮೊದಲಾದುದು ಒಂದುಬಗೆ. ಬಾಯಲ್ಲಿ ಬೆದರಿಸುತ್ತ ಕೋಲು ಮೊದಲಾದವುಗಳಿಂದ ಹೊಡೆಯುವುದು ಇನ್ನೊಂದು ಬಗೆ. ಇವೆರಡರಲ್ಲಿ ಮೊದಲನೇ ಉಪಾಯವನ್ನು ಮಾಡಿದರೆ ಎಂದರೆ ಹುಲ್ಲಿನ ಸಿವುಡನ್ನು ತೋರಿಸುತ್ತ ಅಥವಾ ಮೈತೂರಿಸುತ್ತ ಕರೆತಂದರೆ ತಂಟೆಮಾಡದೆ ಒಂದೇಸಲಕ್ಕೆ ಸರಾಗವಾಗಿ ಗೊಂತಿಗೆ (ಹಕ್ಕೆಗೆ) ಬಂದು ಸೇರಿಕೊಳ್ಳುತ್ತದೆ. ಎರಡನೇ ಉಪಾಯವನ್ನು ಮಾಡಿದರೆ ಎಂದರೆ ಬಾಯಲ್ಲಿ ಬೆದರಿಸುತ್ತ ಕೋಲಿನಿಂದ ಹೊಡೆಯುತ್ತ ಗೊಂತಿನ ಕಡೆಗೆ ಓಡಿಸಿದರೆ ಅದು ಅತ್ತಲೂ ಇತ್ತಲೂ ಸುತ್ತಾಡಿ ಗೋಳಾಡಿ ಮೆಲ್ಲ ಮೆಲ್ಲಗೆ ಒಳಕ್ಕೆ ಬರುತ್ತದೆ. ಹಾಗೆಯೇ ಹೊರ ಹೊರಗೆ ಚಪಲತನದಿಂದ ಹರಿದಾಡುವುದಕ್ಕೆ ಹೋಗುವ ಮನಸ್ಸನ್ನು ಒಳಮುಖವಾಗಿ ಮಾಡಬೇಕಾದರೆ ಹಗೆಗಳು ಗೆಳೆಯರು ಮೊದಲಾದವರ ಮೇಲೆಲ್ಲಾ ಒಂದೇರೀತಿಯಾಗಿ ಪ್ರೇಮವನ್ನೇ ಮಾಡುವಂತೆ ತಿಳಿಯಹೇಳುವುದು ಒಂದನೇ ಉಪಾಯ. ಅದನ್ನು ಪ್ರಾಣಾ

ಯಾಮ ಮೊದಲಾದವುಗಳಿಂದ ಬಲಾತ್ಕಾರವಾಗಿ ಒಳಗಡೆಗೆ ನುಗ್ಗಿಸುವುದು ಎರಡನೇ ಉಪಾಯ. ತಿಳಿಯಹೇಳುವುದರಿಂದ ಒಮ್ಮೆಗೇ ಅದನ್ನು ಒಳ-ಮುಖವಾಗಿ ಮಾಡಿ ಬಿಡಬಹುದು. ಎರಡನೆಯದಾದ ಹಠಯೋಗದಿಂದ ಲಾದರೆ ನಮ್ಮ ಉದ್ದೇಶವು, ಮೆಲ್ಲ ಮೆಲ್ಲಗೆ ಸಾಧ್ಯವಾಗುವುದು. ತಿಳಿಯ ಹೇಳುವ ಉಪಾಯದಿಂದ, ಮನಸ್ಸು ಬೇಗ ಒಳ್ಳೆಯ ವಾಸನೆಗಳನ್ನು ಹಿಡಿದು ಕೊಂಡರೆ ನಿನ್ನ ಅಭ್ಯಾಸವು ಸಾರ್ಥಕವಾಯಿತೆಂದು ತಿಳಿಯಬೇಕು. ಆ ಒಳ್ಳೇ ವಾಸನೆಗಳನ್ನು ಬೆಳಸಿಕೊಳ್ಳುವಾಗ ಆ ವಾಸನೆಗಳು ಪೂರ್ಣ ವಾಯಿತೇ ಹೇಗೆ ಎಂಬ ವಿಚಾರವನ್ನೇನೂ ಮನಸ್ಸಿಗೆ ತಂದುಕೊಳ್ಳದೆ ಆ ಒಳ್ಳೆಯ ವಾಸನೆಗಳನ್ನು ಬೆಳೆಸಿಕೊಳ್ಳುತ್ತಲೇ ಇರಬೇಕು. ಶುಭವಾಸ-ನೆಗಳು ಎಷ್ಟು ಬೆಳೆದರೆ ಅಷ್ಟು ಒಳ್ಳೇದೇ ಹೊರತು ಅದರಿಂದ ಏನೇನೂ ಬಾಧಕವಿಲ್ಲ. ಒಬ್ಬನು ಒಂದು ಮಂತ್ರವನ್ನು ಸಹಸ್ರಸಂಖ್ಯೆಯಾಗುವ ವರಿಗೂ ಜಪಿಸಬೇಕಾಗಿರುತ್ತೆಂದು ಇಟ್ಟುಕೊಳ್ಳೋಣ. ಅವನು ನೂರು ಸಂ-ಖ್ಯೆಗೆ ಒಂದು ಬೆರಳು ಮಡಿಚಿಕೊಳ್ಳುತ್ತಾ ಹೋಗುತ್ತಾನೆ. ಹೀಗೆ ಕೆಲ-ವುಸಲ ಆಗುವುದರಲ್ಲಿ ಅವನಿಗೆ ತಾನು ಒಂದುಸಲ ಹೆಚ್ಚಿಗೆ ಮಡಿಚಿಕೊಂ-ಡು ಬಿಟ್ಟೆನೋ ಏನೋ ಎಂದು ಸಂಶಯಬಂದರೆ ಅವನು ಇನ್ನೊಂದುಸಲ ನೂರು ಸಂಖ್ಯೆಯವರಿಗೆ ಜಪಿಸುತ್ತಾನೆ. ಮೊದಲು ಒಂದುಸಲ ಅವನೇನಾದರೂ ಹೆಚ್ಚಿಗೆ ಮಡಿಚಿಕೊಂಡಿದ್ದರೆ ಈಗ ಅದು ಸರಿಯಾಗಿ ಸಹಸ್ರವಾಗಿ ಜಪವು ಪೂರ್ಣವಾಗುತ್ತದೆ. ಮೊದಲೇ ನಿಜವಾಗಿ ಸಹಸ್ರ ಜಪವಾಗಿಯೇ ಹೋಗಿದ್ದರೆ ಈಗ ಅದರಮೇಲೆ ನೂರು ಹೆಚ್ಚಾದುದರಿಂದ ಸಹಸ್ರ ಜಪ-ಕ್ಕೇನೂ ಬಾಧಕವಿಲ್ಲ. ಎಲ್ಲಿಯವರೆಗೆ ತತ್ತ್ವಜ್ಞಾನವಾಗಿರುವುದಿಲ್ಲವೋ ಅಲ್ಲಿಯವರೆಗೆ ಗುರುಗಳೂ ಶಾಸ್ತ್ರಗಳೂ ಹೇಳಿದಂತೆ ಒಳ್ಳೆ ಅಭ್ಯಾಸಗಳ-ನ್ನು ನಡಿಸಬೇಕು. ಅವುಗಳಿಂದ ಮನಸ್ಸಿನ ದೋಷಗಳೆಲ್ಲಾ ಹೋಗಿ, ತತ್ತ್ವಜ್ಞಾನವಾದನೆ, ಆಮೇಲೆ ಒಳ್ಳೇ ಅಭ್ಯಾಸಗಳನ್ನು ಬಿಟ್ಟು ವಾಸನೆ-ಗಳನ್ನೆಲ್ಲಾ ತಡೆಯಬೇಕು. ಹೀಗೆ ಕಾಮಕ್ರೋಧ ಮೊದಲಾದ ವಾಸನೆಗ-ಳನ್ನು ಬಿಗಿಬಿಡಿಸುವುದಕ್ಕಾಗುವುದರಿಂದ ಜೀವನ್ಮುಕ್ತಿಯೆಂಬುದೊಂದು ಉಂಟೋ ಇಲ್ಲವೋ ಎಂದು ಹಿಂದು ಮುಂದು ನೋಡಬೇಡ, ಇದೇ ಜೀವ-ನ್ಮುಕ್ತಿ.

ಜೀವನ್ಮುಕ್ತಿಯ ವಿಚಾರವನ್ನು, ಶ್ರುತಿಗಳೂ ಸ್ಮೃತಿಗಳೂ ಬೇಕಾದಷ್ಟು ಹೇಳುತ್ತವೆ. ಮುಕ್ತನು ಮುಕ್ತನಾಗುತ್ತಾನೆಂದು ಕಠವಲ್ಲಿ ಮೊದಲಾದವುಗಳಲ್ಲಿ ಹೇಳಿರುತ್ತದೆ. ಬದುಕಿರುವಾಗಲೇ ಕಾಮಕ್ರೋಧ ಮೊದಲಾದವುಗಳ ಓಟವನ್ನು ತಡೆದುಕೊಂಡು ಅವುಗಳಿಂದ ಸಂಪೂರ್ಣವಾಗಿ ಮುಕ್ತನಾದವನು ದೇಹವನ್ನು ಬಿಟ್ಟಮೇಲೆ ಮುಂದಿನಜನ್ಮಗಳಿಗೆ ಕಾರಣವಾದ ಪುಣ್ಯಪಾಪಗಳ ಬಲೆಯನ್ನೆಲ್ಲಾ ಕಳಚಿಕೊಂಡು ಸಂಪೂರ್ಣವಾಗಿ ಮುಕ್ತನಾಗಿ ಬಿಡುವನು. ಜ್ಞಾನವಾಗುವುದಕ್ಕೆ ಮೊದಲು ಕಾಮಕ್ರೋಧ ಮೊದಲಾದವುಗಳ ಹಾವಳಿಯನ್ನು ನಿಲ್ಲಿಸಿ ಅವುಗಳತಾಪವು ತಮ್ಮಮೇಲೆ ನಾಟದಂತೆ ಮಾಡಿಕೊಂಡು, ಸಾಧಕರು ಅವುಗಳಿಂದ ಮುಕ್ತರಾಗಿರುವುದು ನಿಜ. ಆದರೂ ಅವರು ತಮ್ಮಲ್ಲಿ ಹುಟ್ಟಿದ ಕಾಮಕ್ರೋಧಗಳನ್ನು ತಮ್ಮ ಯತ್ನದಿಂದ ತಡೆಯುತ್ತಿದ್ದರೂ ಜೀವನ್ಮುಕ್ತಿ ಸುಖವನ್ನು ಅನುಭವಿಸಬೇಕೆಂಬ ಜ್ಞಾನಿಗಳು ಮನಸ್ಸಿನ ವೃತ್ತಿಯನ್ನೇ ತಡೆದು ಬಿಡುವುದರಿಂದ, ಕಾಮಕ್ರೋಧಗಳು ಹುಟ್ಟುವುದಕ್ಕೇ ದಾರಿ ಇಲ್ಲದಂತಾಗುವುದು. ಆದುದರಿಂದ ಅವರು ಕಾಮಕ್ರೋಧಗಳಿಂದ ಸಂಪೂರ್ಣವಾಗಿ ಮುಕ್ತರಾದಂತಾಯಿತು. ಇನ್ನು ಮುಂದಿನ ಜನ್ಮದ ವಿಚಾರವನ್ನು ತೆಗೆದುಕೊಂಡರೆ ಪ್ರಳಯದಲ್ಲಿ ದೇಹತ್ಯಾಗಮಾಡಿದವರು ಕೆಲವುಕಾಲಮಾತ್ರ ಮುಂದಿನ ಜನ್ಮದ ತೊಡಕಿಲ್ಲದೆ ಇರುವರು. ಜ್ಞಾನಿಗಳು ದೇಹವನ್ನು ಬಿಟ್ಟಮೇಲೆ, ಇನ್ನೆಂದೆಂದಿಗೂ ಅವರಿಗೆ ದೇಹದ ಬಂಧವಿಲ್ಲದ್ದರಿಂದ, ಅವರು ಸಂಪೂರ್ಣವಾಗಿ ಮುಕ್ತರಾದಂತಾಯಿತು. ಬೃಹದಾರಣ್ಯಕದಲ್ಲಿಯೂ ಈ ಅಭಿಪ್ರಾಯವು ಬಂದಿರುತ್ತದೆ. ಕಣ್ಣಿದ್ದರೂ ಕಾಣದವನಂತೆಯೂ, ಕಿವಿಯಿದ್ದರೂ ಕೇಳದನಂತೆಯೂ, ಮನಸ್ಸಿದ್ದರೂ ಗ್ರಹಿಸದವನಂತೆಯೂ, ಇರಬೇಕೆಂದು ಬೇರೆ ಶ್ರುತಿಯಲ್ಲಿಯೂ ಇದೆ. ಸ್ಮೃತಿಗಳಲ್ಲಿಯೂ, ಜೀವನ್ಮುಕ್ತ, ಸ್ಥಿತಪ್ರಜ್ಞ, ಭಗವದ್ಭಕ್ತ, ಗುಣಾತೀತ, ಬ್ರಾಹ್ಮಣ, ಅತಿವರ್ಣಾಶ್ರಮಿ ಮೊದಲಾದ ಹೆಸರುಗಳಿಂದ ಅಲ್ಲಲ್ಲಿ ಈ ವಿಚಾರವೂ ಬಂದಿರುವುದು. ವಸಿಷ್ಠರಿಗೂ, ಶ್ರೀರಾಮನಿಗೂ ನಡೆದಿರುವ, ಮಾತುಗಾರಿಕೆಯಲ್ಲಿ ಜೀವನ್ಮುಕ್ತನ ಮಾತು ಬಂದಿದೆ. ನೋಡಿರಿ?

ವಸಿಷ್ಠ. ಜ್ಞಾನಪ್ರಾಪ್ತಿಯಾಗುತ್ತಲೇ ಭೇದಬುದ್ಧಿಯೆಂಬುದು

ಹಾರಿಹೋಗುತ್ತದೆ. ಅವರು ದೇಹವನ್ನು ಬಿಡುತ್ತಲೇ ಅವರಿಗೆ ವಿದೇ
ಮುಕ್ತಿಯಾಗುತ್ತದೆ. ತಮಗೆ ಜ್ಞಾನಪ್ರಾಪ್ತಿಯಾದಮೇಲೆ ಈ ಲೋ
ಸಂಬಂಧವಾದ ಮತ್ತು ಪರಲೋಕ ಸಂಬಂಧವಾದ ಕರ್ಮಗಳನ್ನೆಲ್ಲಾ
ಬಿಟ್ಟು ಜ್ಞಾನದಲ್ಲಿಯೇ ಮನಸ್ಸನ್ನಿಟ್ಟುಕೊಂಡಿರುವವರಿಗೆ ಬದುಕಿರುವಾ
ಗಲೇ ಮುಕ್ತಸುಖವು ತೋರುತ್ತದೆ.

ಜೀವನ್ಮುಕ್ತರಿಗೆ ದೇಹವೂ ಇಂದ್ರಿಯಗಳೂ ಇರುತ್ತವೆ. ವಿದೇ
ಮುಕ್ತರಿಗೆ ಅವು ಇರುವುದಿಲ್ಲ, ಇಷ್ಟೇ ಭೇದವೇ ಹೊರತು ಅನುಭವದ
ಲ್ಲೇನೂ ಅವೆರಡಕ್ಕೂ ಭೇದವಿಲ್ಲ. ಭೇದಬುದ್ಧಿಯು ವಿದೇಹ ಮುಕ್ತಿಸ್ಥಿ
ಯಲ್ಲಿಯೂ ಇಲ್ಲ. ಜೀವನ್ಮುಕ್ತಸ್ಥಿತಿಯಲ್ಲಿಯೂ ಇಲ್ಲ.

ಶ್ರೀರಾಮ. ಸ್ವಾಮಿ ವಿದೇಹಮುಕ್ತನ ಮತ್ತು ಜೀವನ್ಮುಕ್ತ
ಲಕ್ಷಣಗಳನ್ನು ಹೇಳಿರಿ. ಶಾಸ್ತ್ರಸಮ್ಮತವಾದ ದೃಷ್ಟಿಯಿಂದ ನಾನ
ಹಾಗೆಯೇ ಪ್ರಯತ್ನಮಾಡುತ್ತೇನೆ.

ವಸಿಷ್ಠರು. ಈ ಕಾಣುವಂಥ ಬೆಟ್ಟ, ನದಿ, ಸಮುದ್ರ, ಮೊ
ಲಾದ ಜಗತ್ತನ್ನೂ, ಇದನ್ನು ತಿಳಿಯುವ ದೇಹವೂ ಇಂದ್ರಿಯಗಳ
ಮೊದಲಾದ ಎಲ್ಲವನ್ನೂ ಮಹಾಪ್ರಳಯದಲ್ಲಿ ಈಶ್ವರನು, ತನ್ನೊಳ
ಸೆಳೆದುಕೊಂಡು ಬಿಡುವನು. ಆಗ ಅವುಗಳೊಂದೂ ಇಲ್ಲದಂತಾಗಿ ಬಿ
ವುವು. ಜೀವನ್ಮುಕ್ತರಿಗೆ ಇವು ಈಗಲೇ ಇದ್ದೂ ಇಲ್ಲದಂತಾಗುವವು. ಜೀ
ನ್ಮುಕ್ತರಿಗೆ ದೇಹವೂ, ಇಂದ್ರಿಯಗಳೂ ಸರಿಯಾಗಿರುವುವು. ಬೆಟ್ಟ ನ
ಮೊದಲಾದವುಗಳನ್ನು ಈಶ್ವರನು ಒಳಕ್ಕೆ ಸೆಳೆದುಕೊಳ್ಳದೇ ಇರುವು
ರಿಂದ ಅವು ಎಲ್ಲರಿಗೂ ಎಂದಿನಂತೆ ಚೆನ್ನಾಗಿ ಕಾಣುತ್ತಿರುವುವು. ಜೀ
ನ್ಮುಕ್ತನು ತನ್ನ ಮನಸ್ಸನ್ನು ಅವುಗಳ ಮೇಲೆಹಾಕಿ ಆ ರೂಪವಾ
ವೃತ್ತಿಯನ್ನು ಪಾಡಿಕೊಳ್ಳದೇ ಇರುವುದರಿಂದ ಅವನ ಭಾವಕ್ಕೆ ಗಾ
ನಿದ್ರೆಯಲ್ಲಿ ಹೇಗೋ ಹಾಗೆ ಅವೆಲ್ಲಾ ಇದ್ದೂ ಇಲ್ಲದಂತಾಗುವವು. ಅ
ಲಕ್ಷ್ಯದಲ್ಲಿ ತಾನಾಗಿ ಬೆಳಗುವಂಥ ಜ್ಞಾನಾಕಾಶ ಒಂದು ಮಾತ್ರ ಉಳಿ
ಕೊಂಡಿರುತ್ತವೆ. ಅಜ್ಞಾನಿಗಳಿಗೆ ಗಾಢನಿದ್ರೆಯಲ್ಲಿ ಆಗಿನ ಕಾಲದ ವೃತ್ತಿ
ಮನಸ್ಸು ಯಾವರೂಪವನ್ನೂ ಪಡೆಯದೇ ಇದ್ದರೂ ಆಗ ಆ ಸ್ಥಿತಿಯ
ಅವನಿಗೆ ಮುಂದೆ ಅನೇಕ ವೃತ್ತಿಗಳಾಗುವ ಬೀಜವಿದ್ದೇ ಇರುತ್ತ

ಆದಕಾರಣ ಅದು ಜೀವನ್ಮುಕ್ತಸ್ಥಿತಿಯೆನಿಸಿಕೊಳ್ಳುವುದಿಲ್ಲ, ಜ್ಞಾನಿಯಾಗಿ ಈ ಸ್ಥಿತಿಯನ್ನು ಪಡೆಯುವವನು ಜೀವನ್ಮುಕ್ತನು.

ಸಂಸಾರಿಗಳಾದವರಿಗೆ ಯಾರಾದರೂ ಹೂ ಗಂಧ ಮೊದಲಾದವುಗಳನ್ನು ಕೊಟ್ಟು ಉಪಚರಿಸಿದರೆ ಮುಖವು ಹಿಗ್ಗುತ್ತದೆಯಷ್ಟೆ? ಜೀವನ್ಮುಕ್ತರಿಗೆ ಯಾರು ಎಂಥಾ ಉಪಚಾರವನ್ನು ಮಾಡಿದರೂ, ಅವರಿಗೆ ಆ ಹರ್ಷದಿಂದ ಮುಖದ ಕಾಂತಿ ಹೆಚ್ಚುವದಿಲ್ಲ. ತಮ್ಮ ಹಣಕಾಸನ್ನು ಯಾರಾದರೂ ಕಸುಕೊಂಡರೆ ಮತ್ತು ನೀನೆಷ್ಟರವನೆಂದು ತಿರಸ್ಕರಿಸಿದರೆ ಹೀಯ್ಯಾಳಿಸಿದರೆ ಸಂಸಾರಿಗಳ ಮುಖವು ದೈನ್ಯದಿಂದ ಬಾಡುವಂತೆ ಜೀವನ್ಮುಕ್ತರ ಮುಖದ ಕಾಂತಿಯು ದೀನತೆಯನ್ನು ಪಡೆದು ತಗ್ಗುವುದಿಲ್ಲ. ಜೀವನ್ಮುಕ್ತರು ಹೊಟ್ಟೆಗಾಗಿ ಹೊಸದಾಗಿ ಒಂದು ಉದ್ಯೋಗವನ್ನು ಹಿಡಿಯದೆ ಪ್ರಾರಬ್ಧಕರ್ಮದಿಂದ ದೊರೆತದ್ದರಿಂದಲೋ ಭಿಕ್ಷಾನ್ನದಿಂದಲೋ ದೇಹವನ್ನಿಟ್ಟುಕೊಂಡಿರುವರು. ಅವರು ಉಪಚಾರದಿಂದ ಹಿಗ್ಗದೇ ಇರುವುದಕ್ಕೂ, ಅಪಚಾರದಿಂದ ತಗ್ಗದೇ ಇರುವುದಕ್ಕೂ ಕಾರಣವೇನೆಂದರೆ, ಸಮಾಧಿಯ ಪ್ರಾಬಲ್ಯದಿಂದ ಅವರಿಗೆ ಹೂ ಗಂಧ ಮೊದಲಾದುವುಗಳು ತೋರುವುದೇ ಇಲ್ಲ. ಒಂದುವೇಳೆ ಸಮಾಧಿ ಇಳಿದಾಗ ಹಾಗೂ ಹೀಗೂ ಅವು ಅವರಿಗೆ ಕಂಡರೂ ಅವರಲ್ಲಿರುವ ಪ್ರಬಲವಾದ ವಿವೇಕವು ಇದು ಬೇಕಾದುದೆಂಬ ಮತ್ತು ಇದು ಬೇಡವಾದುದೆಂಬ ಭಾವನೆಯನ್ನು ತರದೆ ಇರುವುದರಿಂದ ಅವರಲ್ಲಿ ಹರ್ಷವೂ ವಿಷಾದವೂ ಹುಟ್ಟುವುದೇ ಇಲ್ಲ. ಜೀವನ್ಮುಕ್ತರು ಮನಸ್ಸಿನಲ್ಲಿ ವೃತ್ತಿಗಳಾಗಗೊಡುವುದೇ ಇಲ್ಲ. ಅವರಹೊರತು ಇತರರಿಗೆ ವೃತ್ತಿಗಳಾಗದೆ ಇರುವುದೆಂಬುದು ಗಾಢನಿದ್ರೆಯಲ್ಲಿಯೇ ಸರಿ. ಆದಕಾರಣ ಇತರರ ದೃಷ್ಟಿಯಿಂದ ನೋಡಿದರೆ ಅವರು ಯಾವಾಗಲೂ ಗಾಢನಿದ್ರೆಯಲ್ಲಿದ್ದಂತೆ ತಿಳಿಯಬೇಕಾಗುವುದು. ಆದರೆ ನಿಜವಾಗಿ ಅವರದು ಗಾಢನಿದ್ರೆಯಲ್ಲ. ನಿದ್ರೆಯಲ್ಲಿ ಎಲ್ಲರಿಗೂ ಕಣ್ಣು ಕಿವಿ ಮೊದಲಾದ ಇಂದ್ರಿಯಗಳು ಹಿಂದಕ್ಕೆ ಸರಿದುಕೊಂಡು ಶಟಸ್ಥವಾಗಿರುವವು. ಜೀವನ್ಮುಕ್ತರು ಮನಸ್ಸನ್ನು ತಡೆದುಕೊಂಡಿರುವಾಗ ಅವರ ಕಣ್ಣು, ಕಿವಿ, ಮೊದಲಾದ ಇಂದ್ರಿಯಗಳು ತಮ್ಮ ತಮ್ಮ ಸ್ಥಳಗಳಲ್ಲಿಯೇ ಇರುವುದರಿಂದ ಅವರನ್ನು ಗಾಢನಿದ್ರೆಯಲ್ಲಿಯೂ ಎಚ್ಚತ್ತಿರುವವರೆಂದು ಹೇಳಬಹುದು. ಹೀಗೆ ಅವರ ಕಣ್ಣು ಕಿವಿ ಮೊದ

ಲಾದ ಇಂದ್ರಿಯಗಳು ತಮ್ಮತಮ್ಮ ಸ್ಥಳಗಳಲ್ಲಿಯೇ ಇದ್ದರೂ ಅವು ತಮ್ಮ
ತಮ್ಮ ವಿಷಯಗಳನ್ನು ಗ್ರಹಿಸದೆ ಎಂದರೆ, ಕಣ್ಣು ರೂಪವನ್ನು ಗ್ರಹಿ
ಕಿವಿ ಸದ್ದನ್ನು ಆಲಿಸದೆ ಇರುವುದರಿಂದ ಅವರಿಗೆ ಜಾಗ್ರದವಸ್ಥೆಯೆಂಬುದ
ಇಲ್ಲ. ಸಾಮಾನ್ಯವಾಗಿ ಜ್ಞಾನಿಗಳಿಗೆ ಒಂದೊಂದುವೇಳೆ ನಾನು ಜ್ಞಾ
ಎಂಬ ಅಭಿಮಾನವೂ, ತನ್ನ ಸುಖಸಾಧನಗಳಲ್ಲಿ ಬಯಕೆಯೂ, ತೋರಬ
ಹುದಾದರೂ, ಮನಸ್ಸಿನ ವೃತ್ತಿಯನ್ನೇ ತಡೆಗಟ್ಟಿಕೊಳ್ಳುವವರಲ್ಲಿ
ಈ ದೋಷವು ತೋರುವುದಕ್ಕೂ ಅವಕಾಶವಿಲ್ಲದುದರಿಂದ, ಜೀವನ್ಮುಕ್ತ
ಮನಸ್ಸಿನಲ್ಲಿ ಯಾವ ವಾಸನೆಯೂ ಇರುವುದಿಲ್ಲ. ಸಮಾಧಿಯಿಂದ ಎದ್ದಮೇ
ಅವರಿಗೆ ಎಲ್ಲರಂತೆ ಊಟ ಉಡಿಗೆ ಬೇಕೆನಿಸಿದರೂ ನಾಸ್ತಿಕರು ಮೊ
ಲಾದವರ ಜೊತೆ ಬೇಡವೆನಿಸಿದರೂ, ಹುಲಿ, ಹಾವು, ಮೊದಲಾದುವುಗಳನ
ಕಂಡಾಗ ಅವರು ಸರಕ್ಕನೆ ಹಿಂಜರಿದು ತಮಗಾದ ಹೆದರಿಕೆಯನ್ನು ಹೊರಗೆ
ಡವಿದರೂ, ಹೊಟ್ಟೆಕಿಚ್ಚಿನಿಂದ ಇತರ ಯೋಗಿಗಳಿಂತ ಹೆಚ್ಚಿನ ಅನ
ಷ್ಠಾನವನ್ನು ಮಾಡಿದರೂ, ಹಿಂದೆ ಹೀಗೆಲ್ಲಾ ಮಾಡಿದ ಅಭ್ಯಾಸ ಬಲದಿಂ
ಈಗಲೂ ಹೀಗೆ ಮಾಡುವಂತೆ ಕಂಡರೂ, ಜೀವನ್ಮುಕ್ತರ ಮನಸ್ಸು ನೆಲೆ
ನಿಂತಿರುವುದರಿಂದ ಅವರ ಮನಸ್ಸಿನಲ್ಲಿ ಕೊಳೆ ಇರುವುದಿಲ್ಲ. ಒಳಗೆ ಅದ
ಶುದ್ಧವಾಗಿಯೇ ಇರುವುದು. ಆಕಾಶದಲ್ಲಿ ಹೊಗೆ ಧೂಳಿ ಮೋಡ ಮೊದಲ
ದುವುಗಳೆಲ್ಲಾ ಇದ್ದರೂ ಅದಕ್ಕೆ ಯಾವುದೂ ಅಂಟದೆ ಸ್ವಚ್ಛವಾಗಿಯೆ
ಇರುವಂತೆ ಜೀವನ್ಮುಕ್ತರ ಮನಸ್ಸು ಸ್ವಚ್ಛವಾಗಿಯೇ ಇರುವುದು.

ಲೋಕದಲ್ಲಿ ಬದ್ಧರಾದ ಜನರು ಶಾಸ್ತ್ರೋಕ್ತವಾದ ಕರ್ಮವನ
ಮಾಡುತ್ತ ಅದನ್ನು ನಾವು ಮಾಡುತ್ತೇವೆಂದೂ ಚಿತ್ಸ್ವರೂಪವಾದ ಆ
ನನ್ನು ಕರ್ತನೆಂದೂ ತಿಳಿಯುವರು. ಮತ್ತು ಸ್ವರ್ಗ ಮೊದಲಾದವುಗಳ
ನ್ನು ಪಡೆಯುತ್ತೇವೆಂಬ ಉತ್ಸಾಹದಿಂದ ಅದರಲ್ಲಿ ಆಸಕ್ತರಾಗುವರ
ಆ ಥಾ ಕರ್ಮವನ್ನು ಮಾಡದೇ ಇರುವಾಗ ಅವರು ಆ ಕರ್ಮವನ್ನು ನಾ
ಬಿಟ್ಟೆವೆಂದೂ ಅಹಂಕಾರ ಪಡುವರು. ಮತ್ತು ನಮಗೆ ಸ್ವರ್ಗವು ತಪ್ಪಿತ
ಲ್ಲಾ ಎಂಬ ವಿಷಾದವನ್ನು ಹಚ್ಚಿಕೊಳ್ಳುವರು. ನಿಷಿದ್ಧ ಕರ್ಮಗಳಲ್ಲಿಯು
ವ್ಯಾವಹಾರಿಕ ಕರ್ಮಗಳಲ್ಲಿಯೂ ಹೀಗೆಯೇ ಜೀವನ್ಮುಕ್ತನಿಗೆ ಬೇ
ಮತ್ತು ಇಂದ್ರಿಯ ಮೊದಲಾದವುಗಳು ಆತ್ಮನೆಂಬ ಭ್ರಾಂತಿಯೂ ಇರ

ವಿಲ್ಲ. ಹರ್ಷವಿಷಾದಗಳ ಸೋಂಕೂ ಇರುವುದಿಲ್ಲ. ಅವನು ಒಬ್ಬನನ್ನು ಬಯ್ಯುವದಕ್ಕೂ ಹೋಗುವದಿಲ್ಲ. ಹೊಡೆಯುವದಕ್ಕೂ ಹೋಗುವುದಿಲ್ಲ. ಆ ಕಾರಣ ಅವನಿಂದ ಯಾರಿಗೂ ಸಂತಾಪವಾಗುವದಿಲ್ಲ. ಅವನು ಹೀಗಿರುವುದರಿಂದಲೇ ಯಾರೂ ಅವನಮೇಲೆ ಬಾಯಿಮಾಡುವುದಕ್ಕೂ ಕೈಮಾಡುವುದಕ್ಕೂ ಬರುವುದೂ ಇಲ್ಲ. ಒಂದುವೇಳೆ ಯಾವನಾದರೊಬ್ಬ ದುಷ್ಟನು ಬಂದು ಮೇಲೆಬಿದ್ದರೂ ಅವನ ಮನಸ್ಸು ತಳಮಳಿಸುವದಿಲ್ಲವಾದುದರಿಂದ ಅವನಿಗೆ ಸಂತಾಪವಾಗುವದಿಲ್ಲ. ಇವನು ನನ್ನ ಹಗೆ, ಇವನು ನನಗೆ ಗೆಳೆಯ. ಇದು ನನಗೆ ಮಾನ ಇದು ನನಗೆ ಅವಮಾನ ಎಂಬ ಭೇದಬುದ್ಧಿಯುಳ್ಳ ಅವನಲ್ಲಿ ತಣ್ಣಗಾಗಿ ಹೋಗಿರುವುದು. ಅವನಿಗೆ ಅರವತ್ತುನಾಲ್ಕು ವಿದ್ಯೆಗಳು ನೀರುಕುಡಿದಹಾಗೆ ಬರುತ್ತಿದ್ದರೂ, ನಾನು ಅವುಗಳನ್ನೆಲ್ಲಾ ಬಲ್ಲವನೆಂಬ ಅಭಿಮಾನವೂ ಅವನಿಗಿರುವುದಿಲ್ಲ. ಮತ್ತು ಆ ವಿದ್ಯೆಗಳನ್ನು ಅವನು ಬಳಸಿಕೊಳ್ಳುವುದೂ ಇಲ್ಲ. ಅವನಿಗೆ ಎಲ್ಲರಂತೆ ಮನಸ್ಸೆಂಬುದೊಂದಿದ್ದರೂ ಅವನು ಅದನ್ನು ವೃತ್ತಿರೂಪವಾಗಗೊಡದೆ ಇರುವುದರಿಂದ ಮನಸ್ಸೇ ಇಲ್ಲದವನಾಗಿರುವನು. ಆದುದರಿಂದಲೇ ಅವನಿಗೆ ಯಾವಚಿಂತೆಯೂ ಇಲ್ಲ. ಧ್ಯಾನದಲ್ಲಿ ಅವನ ಮನಸ್ಸು ವಾಸನೆಯ ಪ್ರಾಬಲ್ಯದಿಂದ ಆತ್ಮಾಕಾರ ವೃತ್ತಿಯಾದರೂ, ಅದು ಲೌಕಿಕವಾದ ವಿಷಯಾಕಾರವಲ್ಲದ್ದರಿಂದ ಅದೊಂದು ಚಿಂತೆಯೆನಿಸಿಕೊಳ್ಳುವುದಿಲ್ಲ. ನೆರೆಹೊರೆಯವರಲ್ಲಿ ಮದುವೆಯೋ ಮುಂಜಿಯೋ ಆದರೆ ತಾನು ಅವರ ಮನೆಗೆ ಹೋಗಿ ಅವರ ಮನಸ್ಸನ್ನು ಸಂತೋಷಗೊಳಿಸುವದಕ್ಕಾಗಿ ಅವರ ಕೆಲಸಗಳನ್ನು ಹಚ್ಚಿಕೊಂಡು ಓಡಾಡಿದರೂ ತನಗೆ ಆ ಮಹಾಸಮಾರಂಭದ ಲಾಭನಷ್ಟಗಳ ಮತ್ತು ಆಗುಹೋಗುಗಳ ಕೊರತೆ ಹತ್ತದೇ ಇರುವಂತೆ ಅವನು ತನ್ನ ಮನೆಯ ಕೆಲಸದಲ್ಲಿಯೂ ಹಾಗೆಯೇ ಎಲ್ಲಕ್ಕೂ ಹೊರಗಾಗಿರುವನು. ಅವನ ಶಾಂತಿಗೆ ದುಃಖವಾಗದೇ ಇರುವಿಕೆಯೊಂದೇ ಕಾರಣವಲ್ಲ. ಅವನಲ್ಲಿ ಸ್ವರೂಪಾನುಸಂಧಾನವು, ತುಂಬಿತುಳುಕುತ್ತಿರುವುದರಿಂದ ಅವನು ಹಾಗಿರುವನು, ಇದು ಜೀವನ್ಮುಕ್ತನ ಲಕ್ಷಣ.

ಇನ್ನು ವಿದೇಹಮುಕ್ತನ ಲಕ್ಷಣವನ್ನು ಕೇಳು. ಜೀವನ್ಮುಕ್ತನ ದೇಹವು, ಮೃತವಾದರೆ, ಗಾಳಿಯು ಅಲ್ಲಾಡುವುದನ್ನು ಬಿಟ್ಟು ಸುಮ್ಮನೆ

ಇರುವಂತೆ ಜೀವನ್ಮುಕ್ತನು ತನಗೆ ಹೊದಿಕೆಯಾಗಿದ್ದ ಸಂಸಾರವನ್ನು ಕಳಚಿಕೊಂಡು ತನ್ನ ಸ್ವಸ್ವರೂಪದಲ್ಲಿರುವನು.

ಹೀಗೆ ಮುಕ್ತನಾದವನಿಗೆ ಹೋಗುವುದು ಬರುವುದು ನಾಶವಾಗುವುದು ಇವು ಯಾವುವೂ ಇರುವುದಿಲ್ಲ. ಅವನನ್ನು ಇರುವವನೆಂದಾಗಲಿ ಇಲ್ಲದವನೆಂದಾಗಲಿ, ದೂರವೆಂದಾಗಲಿ ಹತ್ತಿರವೆಂದಾಗಲಿ, ನಾನೆಂದಾಗಲಿ ಮತ್ತೊಬ್ಬನೆಂದಾಗಲಿ, ಕರೆಯುವುದಕ್ಕಿಲ್ಲ. ಆ ಸ್ಥಿತಿಯಲ್ಲಿ ಯಾವ ವಿಧವಾದ ಚಲನೆಯೂ ಇಲ್ಲವೆ, ಇಷ್ಟೆಂದು ಗೊತ್ತುಮಾಡುವುದಕ್ಕಾಗದ, ಬೆಳಕೆಂದಾಗಲಿ ಕತ್ತಲೆಯೆಂದಾಗಲಿ ಹೇಳುವುದಕ್ಕಾಗದ, ಯಾವ ನಾಮರೂಪಗಳಿಂದಲೂ ತೋರಿಸಿಕೊಳ್ಳದ, ಒಂದಾನೊಂದು ಸ್ವರೂಪವು ಉಳಿದುಕೊಳ್ಳುವುದು.

ಇಂಥ ವಿದೇಹಮುಕ್ತಿಗೆ ಸರಿಯಾದುದೆಂದೂ, ಅಷ್ಟೇ ಉತ್ತಮವಾದುದೆಂದೂ, ಶಾಸ್ತ್ರಗಳಲ್ಲಿ ಹೇಳಿರುವ ಜೀವನ್ಮುಕ್ತಿಯಲ್ಲಿಯೂ ಎಷ್ಟೆಷ್ಟು ನಿರ್ವಿಕಲ್ಪವು ಹೆಚ್ಚುವುದೋ ಅಷ್ಟಷ್ಟು ಅದು ಮೇಲೆನಿಸಿಕೊಳ್ಳುವುದು. ಭಗವದ್ಗೀತೆಯ ಎರಡನೇ ಅಧ್ಯಾಯದಲ್ಲಿ ಸ್ಥಿತಪ್ರಜ್ಞಾ ಮಾತು ಬಂದಿದೆ ಕೇಳಿರಿ?

ಅರ್ಜುನ. ತತ್ವಜ್ಞಾನವು ಎರಡು ಬಗೆಯಾಗಿರಬಹುದು. ಹಾದರಗಿತ್ತಿಯಾದ ಹೆಂಗಸು ಬೇರೆಬೇರೆ ಮನೆಕೆಲಸಗಳನ್ನೆಲ್ಲಾ ಸಾಗಿಸುತ್ತಿದ್ದರೂ ಮನಸ್ಸಿನಲ್ಲಿ ತನ್ನ ವಿಟಪುರುಷನನ್ನೇ ನೆನೆಯುತ್ತ ಮಾಡುವ ಕೆಲಸಗಳನ್ನು ಅಷ್ಟಷ್ಟಕ್ಕೇ ಮರೆಯುವಂತೆ ಹೆಚ್ಚಿನ ವೈರಾಗ್ಯದಿಂದ ಕೂಡಿ ಯೋಗಾಭ್ಯಾಸದ ಬಲದಿಂದ, ಮನಸ್ಸನ್ನು ವಶಮಾಡಿಕೊಂಡು ತತ್ವಜ್ಞಾನವನ್ನು ಪಡೆದುಕೊಂಡವನು ಯಾವಾಗಲೂ ಆ ಹಾದರಗಿತ್ತಿಯು ತನ್ನ ವಿಟಪುರುಷನನ್ನೇ ಹಂಬಲಿಸುತ್ತಿರುವಂತೆ ತನ್ನ ಆತ್ಮಸ್ವರೂಪವನ್ನೇ ಧ್ಯಾನಿಸುತ್ತಿರುವನು. ಹೀಗೆ ಜ್ಞಾನವು ದೃಢವಾಗಿರುವುದೊಂದು ಬಗೆ. ಹಾಗಿರುವವರೇ ಸ್ಥಿತಪ್ರಜ್ಞರು. ಅಷ್ಟು ವೈರಾಗ್ಯವೂ ಅಷ್ಟು ಯೋಗಾಭ್ಯಾಸದ ಬಲವೂ ಇಲ್ಲದೇ ಇದ್ದರೂ ಯಾವುದೋ ಒಂದು ಪುಣ್ಯದ ಬಲದಿಂದ ಓದುವೇಳೆ ತತ್ವಜ್ಞಾನವಾದರೂ, ಅವನು ಆ ಹಾದರಗಿತ್ತಿಯು ತನ್ನ ಮನೆಗೆಲಸಗಳನ್ನು ಮರೆಯುವಂತೆ ಆ ಜ್ಞಾನವನ್ನು ಅಷ್ಟಷ್ಟಕ್ಕೆ ಮರೆಯುತ್ತಿರಬಹುದು. ಹೀಗೆ ಜ್ಞಾನವು ದೃಢವಾಗಿಲ್ಲದೆ ಇ

ವುನೊಂದುಬಗೆ. ಈ ಎರಡನೇ ಬಗೆಯವರ ಮಾತು ಹಾಗಿರಲಿ, ಸ್ಥಿತಪ್ರಜ್ಞಾನ ವಿಚಾರವನ್ನು ಹೇಳು. ಅವರು ಕೆಲವುವೇಳೆ ಸಮಾಧಿಯಲ್ಲಿ ಅಂತರ್ಮುಖರಾಗಿಯೂ, ಕೆಲವುವೇಳೆ ಸಮಾಧಿಯಿಳಿದಮೇಲೆ ಬಹಿರ್ಮುಖರಾಗಿಯೂ ಇರಬಹುದಷ್ಟೆ † ಸಮಾಧಿಯಲ್ಲಿರುವಾಗ ಅವರ ಮಾತು ಹೇಗೆ? ಸಮಾಧಿಯಿಂದ ಎದ್ದಮೇಲೆ ಅವರು ಹೇಗಿರುವರು? ಅವರ ನಡೆನುಡಿಗಳು ಹೇಗೆ? ಆಗ ಅವರು ಮೂಢರಂತೆಯೇ ಇರುವರೋ ಅಥವ ಅವರದೊಂದು ಬೇರೇ ಬಗೆಯೋ?

ಭಗವಂತ. ಅವರು ಬಯಕೆಗಳನ್ನೆಲ್ಲಾ ಕಳೆದುಕೊಂಡಿರುವರು. ಬಯಕೆಗಳು ಹೊರಗಣಬಯಕೆ, ಒಳಗಣಬಯಕೆ, ವಾಸನಾ ರೂಪವಾದ ಬಯಕೆ, ಎಂದು ಮೂರುಬಗೆ. ಒಬ್ಬನು ತಿನ್ನುವುದಕ್ಕೆಂದು ಕಡುಬು ಕಜ್ಜಾಯಗಳನ್ನು ತಂದಿಟ್ಟುಕೊಂಡಿರುತ್ತಾನೆ. ಹೀಗೆ ಸಿದ್ಧಮಾಡಿಕೊಂಡಿರುವ ಇವುಗಳ ಬಯಕೆಯೇ ಹೊರಗಣ ಬಯಕೆ. ಕಡುಬು ಕಜ್ಜಾಯಗಳು ಸಿಕ್ಕಲಿಲ್ಲ. ಆದರೆ ಮನಸ್ಸಿಗೆ ಅವು ಬೇಕೆನಿಸಿವೆ. ಈ ಮನಸ್ಸಿನ ಬಯಕೆಯೇ ಒಳಗಣಬಯಕೆ. ದಾರಿಯಲ್ಲಿ ನಮ್ಮ ಪ್ರಯತ್ನವಿಲ್ಲದೆ ಹುಲ್ಲು ಕಟ್ಟಿಗೆ ಮೊದಲಾದುವುಳು ಕಾಣುವಾಗ ಅವುಗಳನ್ನು ನಾವು ಕೈಕೊಳ್ಳುವುದೇ ವಾಸನಾರೂಪವಾದ ಬಯಕೆ.

ಸ್ಥಿತಪ್ರಜ್ಞರು ಮನಸ್ಸಿಗೆ ವೃತ್ತಿಗಳೇ ಆಗಗೊಡದೆ ಇರುವುದರಿಂದ ಅವರಿಗೆ ಯಾವ ಬಯಕೆಯೂ ಇಲ್ಲ. ಆದರೆ ಅವರ ಮುಖದಲ್ಲೇನೋ ಸಂತೋಷದ ಕಳೆ ಇರುತ್ತದೆ. ಅದು ಬಯಕೆಗಳನ್ನೆಲ್ಲಾ ಪಡೆದ ತೃಪ್ತಿಯ ಕಳೆಯಲ್ಲ. ಎಲ್ಲಾ ಬಯಕೆಗಳನ್ನು ಆತ್ಮಸ್ವರೂಪದಲ್ಲಿ ಹಾಕಿ ಹೋಮ ಮಾಡಿ ಬಿಟ್ಟಿರುವುದರ ಪ್ರಭಾವ. ಅವರ ಬುದ್ಧಿಯು ಪರಮಾನಂದ ರೂಪವಾಗಿ ಆತ್ಮಸ್ವರೂಪದ ಕಡೆಗೆ ತಿರುಗಿರುವುದರಿಂದ ಅವರ ಮುಖದಮೇಲೆ ಆ ಪ್ರಸನ್ನತೆ ಬಂದಿರುವುದು. ಸ್ಥಿತಪ್ರಜ್ಞನು ಸಮಾಧಿಯಲ್ಲಿರುವಾಗ ಅವನ ಆನಂದವು ಸಂಪ್ರಜ್ಞಾತ ಸಮಾಧಿಯಂತೆ ವೃತ್ತಿರೂಪವಾದ ಮನಸ್ಸಿನಿಂದ ಆಗುತ್ತಿರುವುದಿಲ್ಲ. ತಾನೇ ತಾನಾಗಿ ಬೆಳಗುತ್ತಿರುವ ಚಿದ್ರೂಪವಾದ ಆತ್ಮಸ್ವರೂಪದಿಂದ ಆಗುತ್ತಿರುವುದು. ಅವನ ಮುಖದಿಂದ ಹೊರಸೂಸುತ್ತಿರುವ ಸಂತೋಷವು, ಒಳಗಿರುವ ನಿಜಾನಂದ ಪ್ರಭೆಯೇ ಹೊರತು, ಮಥ-

ಸ್ಸಿನ ವೃತ್ತಿಯ ಪರಿಣಾಮವಲ್ಲ. ಸಮಾಧಿಯಲ್ಲಿರುವವನ ಮಾತು ಹೀಗಿರು ವುದು. ಇನ್ನು ಸಮಾಧಿಯಿಂದ ಎದ್ದವರ ಮಾತು ಹೇಗೆ ಇರುವುದೆಂದರೆ:— ಅವರ ಮನಸ್ಸು ದುಃಖದಿಂದ ತಳಮಳಿಸುವುದಿಲ್ಲ. ಸುಖದಿಂದ ಅತ್ಯಾಸೆಪಡು ವುದಿಲ್ಲ. ನಾವು ಏನಾದರೊಂದನ್ನು ನಮಗೆ ಬೇಕಾದುದೆಂದು ತಿಳಿದು, ಅದು ಹೋಯಿತಲ್ಲ ಎಂದು ರಜೋಗುಣಕ್ಕೆ ಸಿಕ್ಕಿಬಿದ್ದು ಪೇಚಾಡುವ ಮನಸ್ಸಿನ ವೃತ್ತಿಯೇ ದುಃಖ. ಇಂಥ ಪೇಚಾಟವು ಬಂದಾಗ ಅಯ್ಯೋ ನಾನ ಎಂಥಾ ಪಾಪಿ, ಎಂದು ತಮೋಗುಣವನ್ನು ತೋರಿಸಿಕೊಂಡು ಅಳುವ ಭ್ರಾಂತಿರೂಪವಾದ ಚಿತ್ತವೃತ್ತಿಯೇ ತಳಮಳವು. ಸಾಮಾನ್ಯವಾಗಿ ನೋಡಿದರೆ ಈ ತಳಮಳವು ಯೋಗ್ಯವಾಗಿಯೇ ಕಂಡರೂ ಇದು ಹಿಂದಿನ ಜನ್ಮದಲ್ಲಿಯೇ ಹುಟ್ಟಿದ್ದರೆ ಆ ಪಾಪವನ್ನು ಮಾಡಗೊಡದೆ ಅದಕ್ಕೊಂದು ತಡೆಯಾಗಿ ಉಪಕಾರವನ್ನು ಮಾಡುತ್ತಿತ್ತು. ಈಗ ಆ ಗೋಳು ಕೆಲಸಕ್ಕೆ ಬರುವುದಿಲ್ಲವಾದುದರಿಂದ ಅದು ಭ್ರಾಂತಿಯೆನಿಸುವುದು.

ಸುಖವೆಂದರೆ, ತನಗೊಂದು ರಾಜ್ಯವು ಕೈಸೇರಿದಾಗ ಅಥವಾ ಗಂಡು ಮಗು ಹುಟ್ಟಿದಾಗ ಸತ್ವಗುಣದಿಂದ ಪ್ರೀತಿಯನ್ನು ತೋರಿಸುವಂಥ ಅನು ಕೂಲವಾದ ಚಿತ್ತವೃತ್ತಿ. ಈ ಸುಖವು ಒಮ್ಮೆ ತೋರಿದರೆ, ಮುಂದೆ ಇಂಥ ಸುಖಗಳಾಗುವುದಕ್ಕೆ, ಕಾರಣಗಳಾದಂಥ ಪುಣ್ಯಗಳಿಲ್ಲದೆ ಸಾಧ ಸುಮ್ಮ ಸುಮ್ಮನೆ ಅದನ್ನು ಬಯಸುವಂಥ ತಾಮಸವೃತ್ತಿಯೇ ಅತ್ಯಾಶೆ ಎಂಥವರಿಗಾದರೂ ಅವರವರ ಪ್ರಾರಬ್ಧವನ್ನನುಸರಿಸಿ, ಸುಖದುಃಖಗಳಾಗು ವುದು ತಪ್ಪಿದ್ದೇ ಅಲ್ಲ. ಸಮಾಧಿಯಿಂದ ಎದ್ದವರ ಮನಸ್ಸು ವೃತ್ತಿಗಳಾಗು ತ್ತಿರುವುದರಿಂದ ಅವರಿಗೆ ಸುಖದುಃಖಗಳೆರಡೂ ಆಗುತ್ತವೆ. ಆದರು ವಿವೇಕಿ ಗಳಾದುದರಿಂದ ದುಃಖದಿಂದ ತಳಮಳವೂ, ಸುಖದಿಂದ ಅತ್ಯಾಶೆಯೂ, ಅ ರಲ್ಲಿ ವ್ಯವಹರಿಸುವುದಿಲ್ಲ. ಒಂದರಲ್ಲಿ ಅತ್ಯಾಸಕ್ತಿ, ಒಂದಕ್ಕೆ ಹೆದರುವುದು ಒಂದರ ಮೇಲೆ ಸಿಟ್ಟು, ಇಂಥವುಗಳು ಪ್ರಾರಬ್ಧಕರ್ಮಕ್ಕೆ ಸಂಬಂಧಪಟ್ಟ ವುಗಳಲ್ಲ. ತಮೋಗುಣಸಂಬಂಧವಾದವುಗಳು, ಅವುಗಳು ಅವನಲ್ಲಿ ತ ಲೆಹಾಕುವದಿಲ್ಲ. ಹೀಗೆ ಇರುವಂಥ ಸ್ಥಿತಪ್ರಜ್ಞನು, ತನ್ನ ಅನುಭವವನ್ನು ಹೇಳಿಕೊಟ್ಟು ಶಿಷ್ಯರನ್ನು ತಿದ್ದುವುದಕ್ಕಾಗಿ ತಳಮಳಗೊಳ್ಳದೇ ಇರುವುದು ಅತ್ಯಾಶೆಯಾದವೆ. ಇರುವುದು ಮೊದಲಾದವುಗಳನ್ನು ಸೂಚಿಸುವ ಮಾತು

ಗನನ್ನಾಡುತ್ತಿರುವನು. ಒಬ್ಬನಲ್ಲಿ ಹೆಚ್ಚಿನ ಗೆಳೆತನವನ್ನು ಬಳೆಸುವುದು ಒಬ್ಬರ ಮುಖಸ್ತುತಿ ಮಾಡುವದು ಒಬ್ಬರ ಮೇಲೆ ಹಗೆತನಮಾಡುವುದು, ಇವುಗಳು ಅವನಿಗೆ ಇರುವುದಿಲ್ಲ. ಇನ್ನೊಬ್ಬರಿಗೆ ಒಳ್ಳೆಯದಾದರೆ ಅಥವಾ ಕೆಟ್ಟದಾದರೆ ಅವುಗಳು ತನಗೆ ಆದಂತೆ ಮಾಡಿಕೊಳ್ಳುವಂಥ ಹೆಚ್ಚಿನ ಗೆಳೆಯತನವೂ, ತಾಮಸವೃತ್ತಿಯೇ. ಹೆಂಡತಿಯನ್ನಾಗಲಿ, ಮಕ್ಕಳನ್ನಾಗಲಿ, ಯಾವುದೊಂದು ವಸ್ತುವನ್ನೇ ಆಗಲಿ, ಒಲಿಸಿಕೊಳ್ಳಬೇಕೆಂಬುದು ಅವನಿಗಿಲ್ಲವಾದುದರಿಂದ ಅವರ ವಿಷಯಕವಾದ ಮುಖಸ್ತುತಿಯು ತಾಮಸವಾಗುವುದು. ಅಸೂಯೆಯನ್ನು ಹುಟ್ಟಿಸಿ ದುಃಖಕ್ಕೆ ಕಾರಣವಾಗುವ ಹಾಗೆ ಇರುವಂಥ ಇತರರ ವಿದ್ಯೆ ಮೊದಲಾದವುಗಳನ್ನು ನಿಂದಿಸುವ ಹಗೆತನವೂ ಅದು ಇತರರನ್ನು ತಿದ್ದುವುದಕ್ಕಾಗಿ ಹುಟ್ಟಿದ್ದಲ್ಲವಾದ್ದರಿಂದ ಅದು ತಾಮಸವೇ. ಇಂಥಾ ತಾಮಸವೃತ್ತಿಗಳು ವಿವೇಕಿಯಾದ ಸ್ಥಿತಪ್ರಜ್ಞನಲ್ಲಿ ಹೇಗೆ ಕಾಣಿಸಿಕೊಂಡಾವು? ಆಮೆಯು ತನ್ನ ಅವಯವಗಳನ್ನು ಎಲ್ಲಾ ಕಡೆಗಳಿಂದಲೂ ಸುಕ್ಕಿಸಿ ಒಳಗಡೆಗೆ ಮುದುರಿಕೊಳ್ಳುವಂತೆ, ಸ್ಥಿತಪ್ರಜ್ಞನು ಸಮಾಧಿಯಿಂದ ಎದ್ದಮೇಲೆ ಕಣ್ಣು ಕಿವಿ ಮೊದಲಾದ ತನ್ನ ಇಂದ್ರಿಯಗಳನ್ನೆಲ್ಲಾ ನೋಟ, ಸದ್ದು ಮೊದಲಾದ ವಿಷಯಗಳ ಕಡೆಗೆ ಮುಮ್ಮುಖವಾಗಿ ಹರಿಯಬಿಡದೆ, ಹಿಮ್ಮುಖವಾಗಿಟ್ಟುಕೊಂಡಿರುವನು. ಹೀಗೆ ಸಮಾಧಿಯಿಂದ ಎದ್ದವರಿಗೆ ಯಾವ ತಾಮಸವೃತ್ತಿಗಳೂ ಇರುವುದಿಲ್ಲ. ಸಮಾಧಿಯಲ್ಲಿರುವವರಿಗಂತೂ ವೃತ್ತಿಗಳೇ ಇರುವುದಿಲ್ಲ. ಇನ್ನು ತಾಮಸತ್ವದ ಮಾತೆಲ್ಲಿಯದು? ಕೆಲವು ವಿಷಯಗಳು ಪ್ರಾರಬ್ಧ ಫಲವಾಗಿ ಸುಖವನ್ನೂ ದುಃಖವನ್ನೂ ಕೊಡುವುದಕ್ಕೆ ತಾವಾಗಿ ಸಿದ್ಧವಾಗುವುವು. ಹುಣ್ಣಿಮೆಯ ಬೆಳದಿಂಗಳಿಗಾಗಿಯಾಗಲಿ, ಅಮಾವಾಸ್ಯೆಯ ಕತ್ತಲೆಗಾಗಿಯಾಗಲಿ, ನಾವೇನೂ ಪ್ರಯತ್ನ ಪಡುವುದಿಲ್ಲ. ಪ್ರಾರಬ್ಧವು ಅವುಗಳನ್ನು ತಾನಾಗಿಯೇ ನಮ್ಮ ಮುಂದೆ ತಂದು ಒಡ್ಡುತ್ತದೆ. ಹೊಲ ಮನೆ ಮೊದಲಾದ ಕೆಲವು ವಿಷಯಗಳನ್ನು ನಾವು ಪ್ರಯತ್ನದಿಂದ ಪಡೆಯುತ್ತೇವೆ. ತನ್ನ ಮುಂದೆ ಹಾಲು ಚೆಲ್ಲಿದಹಾಗೆ ಇರುವ ಬೆಳದಿಂಗಳನ್ನೂ ಕಾಡಿಗೆಯ ಬೆಟ್ಟದಂತೆ ಇರುವ ಕಗ್ಗತ್ತಲೆಯನ್ನೂ ಉಪಭೋಗಿಸದೆ ಇರಬೇಕಾದರೆ ಇಂದ್ರಿಯಗಳನ್ನೆಲ್ಲಾ ಹಿಮ್ಮುಖಮಾಡಿ ಒಳಕ್ಕೆ ಸೆಳೆದುಕೊಂಡು, ಸಮಾಧಿಯನ್ನು ತಂದುಕೊಂಡ ಹೊರ-

ತು ಆಗುವದಿಲ್ಲ. ಹೊಲ ಮನೆಗಳ ಉಪಭೋಗವನ್ನು ತಪ್ಪಿಸಿಕೊ
ಬೇಕಾದರೆ, ಅವುಗಳಿಗಾಗಿ ಕೆಲಸಮಾಡುವುದನ್ನು ಬಿಟ್ಟರಾಯಿತು. ಆ
ಮೇಲಿನ ಅನುರಾಗ ಮಾತ್ರ ಹೋಗುವುದಿಲ್ಲ. ಮನಸ್ಸು ಆ ಸುಖದ ಕಡೆ
ಜೋಲುತ್ತಲೇ ಇರುತ್ತದೆ. ಅವನಿಗೆ ಪರಮಾತ್ಮನ ದರ್ಶನವಾದರೆ ಮಾತ್ರ
ಆ ಆನಂದದ ಮುಂದೆ ಇವುಗಳೆಲ್ಲಾ ಎಷ್ಟು ತೀರ ಕ್ಷುದ್ರವಾದವುಗಳೆಂಬು
ತೋರಿ ಆಮೇಲೆ ಆ ಅನುರಾಗವು ಅಲ್ಲಿಯೇ ಹೈಗರೆಯುತ್ತದೆ. ಪರಮಾ
ತ್ಮನ ದರ್ಶನವನ್ನು ಮಾಡಬೇಕೆಂದು ಉಳಿದ ಕೆಲಸಗಳನ್ನೆಲ್ಲಾ ಬಿಟ್ಟು
ಮನಸನ್ನು ಹಿಂದಿರುಗಿಸಿಕೊಂಡು ಅದನ್ನು ಸಮಾಧಿಯಲ್ಲಿ ನಿಲ್ಲಿಸುವುದ
ಪಂಡಿತರು ಎಷ್ಟು ಪ್ರಯತ್ನಮಾಡಿದರೂ, ಇಂದ್ರಿಯಗಳು ರೇಗಿ ಆ ಮ
ಸ್ಸನ್ನು ಕಿತ್ತು ಹೊತ್ತುಕೊಂಡು ಓಡುವುವು. ಅವುಗಳನ್ನೆಲ್ಲಾ ಮ
ಹಿಂದಕ್ಕೆ ಅಟ್ಟಿಕೊಂಡುಬಂದು ಪರಮಾತ್ಮನಲ್ಲಿಯೇ ನಿಲ್ಲಿಸಿಕೊಂಡಿರು
ರು. ಸ್ಥಿತಪ್ರಜ್ಞರು ಇರುವುದು ಹೇಗೆ.

ಈ ರೀತಿಯಲ್ಲಿ ಸಮಾಧಿಯ ಅಭ್ಯಾಸವನ್ನು ಮಾಡದೆ, ಮನಸ್ಸಿ
ವಿಷಯಗಳ ಸಹವಾಸದಲ್ಲಿ ಇರಲು ಅವಕಾಶಕೊಟ್ಟರೆ, ಅದಕ್ಕೆ ವಿಷಯ
ರುಚಿಯೇ ಹತ್ತುತ್ತದೆ. ಆ ರುಚಿಗೆ ಮರುಳಾಗಿ ಆಮೇಲೆ ಅನು ಬೇಕೆ
ಬಯಕೆ ಹುಟ್ಟುತ್ತದೆ. ಅದು ಸಿಕ್ಕದೆ ಹೋಗುತ್ತಲೇ ಸಿಟ್ಟುಬರುತ್ತ
ಆ ಸಿಟ್ಟುಬರುತ್ತಲೇ ಏನುಮಾಡಬಹುದು ಏನುಮಾಡಬಾರದು ಎಂಬ ವಿವೇ
ಕವು ಹಾರಿಹೋಗುತ್ತದೆ. ವಿವೇಕವು ಮರೆಯಾಗುತ್ತಲೇ ತತ್ತ್ವಾ
ಸಂಧಾನವು ತಲೆಕೆಳಗಾಗುತ್ತದೆ. ಇಷ್ಟಾಗುತ್ತಲೇ ಮೇಲೆ ಮೇಲೆ ಅ
ತ್ಮ ವಿಷಯಗಳಿಂದ ಆಗುವ ತಪ್ಪು ತಿಳಿವಳಿಕೆಯು ಬಂದು ಬಂದು ಜ್ಞಾನ
ಕ್ಕೆ ಅಡ್ಡಗೋಡೆಯಾಗಿ ನಿಂತು, ಅವನಿಗೆ ಮೋಕ್ಷವು ಸಿಕ್ಕದಂತೆ ಮಾಡು
ತ್ತದೆ.

ನನಗೆ ಇದು ಬೇಕು. ಇದು ಬೇಡವೆನಿಸದಂತೆ ಮನಸ್ಸನ್ನು ಹಿ
ಡಿದಿಟ್ಟುಕೊಂಡಿದ್ದರೆ, ಅವರಿಗೆ ಬಂಧವಿಲ್ಲ. ಸಮಾಧಿಯಲ್ಲಿ ಬಹುಕಾ
ಇದ್ದು ಸಮಾಧಿಯಿಂದ ಎದ್ದಮೇಲೆ ವಿಷಯಗಳೊಡನೆ ವ್ಯವಹಾರ ಮಾಡಿದ
ಸಮಾಧಿಯ ವಾಸನಾ ಬಲದಿಂದ ಅವರ ಮನಸ್ಸು ಶುದ್ಧವಾಗಿಯೇ ಉಳಿ
ಕೊಂಡಿರುವುದು. ಸ್ಥಿತಪ್ರಜ್ಞರ ನಡೆನುಡಿಗಳು ಹೀಗೆ. ತತ್ತ್ವಜ್ಞಾ

...ಗುವುದಕ್ಕೆ ಮೊದಲು ಸಾಧಕರು ಬೇಕು ಬೇಡವೆಂಬ ಭಾವನೆಗಳನ್ನು ...ಲ್ಲದಂತೆ ಮಾಡಿಕೊಂಡಿರುವದು ನಿಜ. ಸಾಧಕರಿಗೂ ಸ್ಥಿತಪ್ರಜ್ಞರಿಗೂ ...ೀದವೇನೆಂದರೆ-ಸಾಧಕರು ಆ ಭಾವನೆಗಳನ್ನು ಬಲಾತ್ಕಾರದಿಂದ ತಡೆದು ...ಕ್ಕೊಂಡಿರುತ್ತಾರೆ. ಸ್ಥಿತಪ್ರಜ್ಞರಿಗೆ ಅವುಗಳು ಹುಟ್ಟುಗುಣದಂತೆ ಆಗಿ ...ಟ್ಟಿರುತ್ತವೆ. ಈ ಪ್ರಕಾರವಾಗಿ ಭೇದಭಾವನೆಗಡೆಗೊಡದೆ ಎಡೆಬಿಡದೇ ...ತ್ಮಾನುಸಂಧಾನದಲ್ಲಿರುವ ಈ ಸ್ಥಿತಿಯನ್ನೇ ಜೀವನ್ಮುಕ್ತಿಯೆಂದು ಕರೆ-...ಯುವರು.

ಭಗವದ್ಗೀತೆಯು ಹನ್ನೆರಡನೇ ಅಧ್ಯಾಯದಲ್ಲಿ ಭಗವದ್ಭಕ್ತನ ವಿಚಾರವು ...ದಿದೆ ನೋಡಿರಿ. ಯಾವ ಪ್ರಾಣಿಯ ಮೇಲೆಯೂ ಅವನಿಗೆ ಹಗೆತನವಿಲ್ಲ, ...ಲ್ಲಾ ಪ್ರಾಣಿಗಳಮೇಲೆಯೂ ಅವನಿಗೆ ಪ್ರೀತಿಯೇ ಇರುವುದು. ಅವನು ...ರು ದಯಾಳು, ಅವನಿಗೆ ನಾನು ನನ್ನದೆಂಬುವುದಿಲ್ಲ. ಅವನು ಯಾವಾಗ-...ೂ ಮನಸ್ಸನ್ನು ಪರಮಾತ್ಮನಲ್ಲಿಯೇ ಇಟ್ಟಿದ್ದು ಇನ್ನೊಂದು ಕಲ್ಪನೆಯು-... ಒಳಕ್ಕೆ ಬಿಟ್ಟುಕೊಳ್ಳದೆ ಇರುವ ಅಭ್ಯಾಸವಿರುವುದರಿಂದ ಅದರ ವಾಸನೆ ...ಂದ ಅವನು ಸಮಾಧಿಯಿಂದ ಎದ್ದಮೇಲೂ, ಅವನಿಗೆ ಸುಖದುಃಖಗಳು ...ಟುವದಿಲ್ಲ. ಯಾರೇನೆಂದರೂ ಅವನು ತಡೆದುಕೊಳ್ಳುವನು. ಅವನ ...ಪ್ತಿಗೆ ಎಂದಿಗೂ ಕೊರತೆಯೇ ಇಲ್ಲ. ಅವನ ಮನಸ್ಸು ಅತ್ತಿತ್ತ ಹೊ-...ಯ್ದಾಡದೆ ಯಾವಾಗಲೂ ಪರಮಾತ್ಮನನ್ನೇ ಹೊಂದಿಕೊಂಡಿರುವುದು. ಅವ-...ಿಂದ ಜನರಿಗೆ ಸಂತಾಪವಿಲ್ಲ. ಜನರಿಂದ ಅವನು ಸಂತಾಪ ಗೊಳ್ಳುವದಿಲ್ಲ. ...ರ್ಷ ರೋಷ ಭಯ ಸಂತಾಪ ಇವುಗಳು ಅವನನ್ನು ಬಿಟ್ಟಿರುವುವು. ...ವನಿಗೆ ಯಾವ ಬಯಕೆಯೂ ಇಲ್ಲ. ಅವನು ಯಾವಾಗಲೂ ನಿರ್ಮಲನಾ-...ಯವನು. ಅವನು ಒಳ್ಳೇ ಸಮರ್ಥನು, ಆದರೂ ಅವನು ಯಾವ ಕೆಲಸ-...ಕ್ಕೆ ಕೈಹಾಕುವದಿಲ್ಲ. ಯಾವ ವ್ಯಥೆಯೂ ಅವನಕಡೆಗೆ ಇಣಿಕಿ ನೋಡು-...ವಿಲ್ಲ. ಅವನಿಗೆ ಬೇಕಾದುದೊಂದು ಸಿಕ್ಕಿತೆಂದು ಸಂತೋಷವಿಲ್ಲ. ಬೇಡ...ದುದೊಂದು ಬಂದು ಗಂಟುಬಿತ್ತೆಂದು ಅದರಮೇಲೆ ಅವನಿಗೆ ದ್ವೇಷವಿಲ್ಲ. ...ಕಾಗಿದ್ದದ್ದು ಹೋಯಿತೆಂಬ ಕೊರತೆಯೂ ಇಲ್ಲ. ಇಂಥಾದ್ದೊಂದು ...ಕ್ಕಲೆಂಬ ಬಯಕೆಯೂ ಇಲ್ಲ. ಅವನಲ್ಲಿ ಶುಭಕರ್ಮಗಳೂ ಇಲ್ಲ. ಅಶುಭ ...ರ್ಮಗಳೂ ಇಲ್ಲ. ಅವನು ಹಗೆಗಳಲ್ಲಿಯೂ, ಗೆಳೆಯರಲ್ಲಿಯೂ, ಒಂದೇಸ-

ಮನಾಗಿರುವನು. ಮಾನವನ್ನೂ ಅವಮಾನವನ್ನೂ ಸಮಾನವಾಗಿ ಕಾ
ವನು. ಶೀತೋಷ್ಣ ಮೊದಲಾದವುಗಳು ಬಂದರೆ ಏನುಬಂದರೂ ಬರಲಿ
ವನು. ಯಾವದರಲ್ಲಿಯೂ ಅವನಿಗೆ ಆಸಕ್ತಿಯಿಲ್ಲ, ಅವನಿಗೆ ಹೊಗ
ಬಗುಳಿಕೆ ಎರಡೂ ಒಂದೇಸಮ, ಅವನಮಾತು ಮಿತ, ಅವನಿಗೆ ಸಿಕ್ಕಿದ
ಕ್ಕೆ ತೃಪ್ತಿ, ಅವನಿರುವುದಕ್ಕೆ ಇಂಥಾದ್ದೊಂದು ಸ್ಥಾನವೆಂಬ ನೆಲೆಯಿ
ಅವನ ಬುದ್ಧಿಯು ಎಂದಿಗೂ ಕದಲದೇ ಇರುವುದು. ಈ ಗುಣಗಳ
ಜ್ಞಾನಿಯು ಪ್ರಯತ್ನದಿಂದ ಇಟ್ಟುಕೊಳ್ಳಬೇಕಾಗಿಲ್ಲ. ಇವುಗಳು ಅ
ಹುಟ್ಟುಗುಣಗಳಾಗಿಯೇ ಇರುವುವು.

ಇನ್ನು ಹದಿನಾಲ್ಕನೇ ಅಧ್ಯಾಯದಲ್ಲಿ ಗುಣಾತೀತನ ವ
ಇರುವುದು.

ಅರ್ಜುನ. ಕೃಷ್ಣ! ಸತ್ವ ರಜ ತಮ ಎಂಬ ಮೂರುಗುಣಗಳಿಂ
ಜಗತ್ತಿನ ಸಂಸಾರ ಗುಣಗಳನ್ನೆಲ್ಲಾ ಮೀರಿದವನೆಂದರೆ, ಸಂಸಾರವ
ದಾಟಿದವನೆಂದು ಅರ್ಥವಾಯಿತು. ಅವನು ಜೀವನ್ಮುಕ್ತನೇ ಸರಿ, ಇತ
ಗುಣಾತೀತರನ್ನು ಬೇರೆಮಾಡಿ ತಿಳಿಯಬೇಕಾದರೆ, ಆ ಗುಣಾತೀತನ ಲ
ಗಳೇನು? ಅವನ ನಡವಳಿಕೆ ಹೇಗಿರುತ್ತದೆ? ಅವನು ಯಾವ ಉಪಾಯ
ಈ ಮೂರೂ ಗುಣಗಳನ್ನು ದಾಟಿರುತ್ತಾನೆ?

ಭಗವಂತ. ಸತ್ವ ರಜ ತಮ ಎಂದು ಗುಣಗಳು ಮೂರು.
ಎಚ್ಚತ್ತಿರುವಾಗಲೂ, ಕನವರಿಸುತ್ತಿರುವಾಗಲೂ, ತೋರುತ್ತಿರು
ಗಾಢನಿದ್ರೆಯಲ್ಲಿರುವಾಗಲೂ, ಸಮಾಧಿಯಲ್ಲಿರುವಾಗಲೂ, ಇವು ಕ
ಕೊಳ್ಳುವುದಿಲ್ಲ. ಪಾಮರರಾದ ಜನರು ಎಚ್ಚತ್ತಿರುವಾಗ ಇವು ತ
ಬೇಕೆಂದು ಕೋರಿದಾಗ ಇವುಗಳನ್ನು ಇರಲೆನ್ನುತ್ತಾರೆ. ಇವು ತ
ಬೇಡವೆಂದು ತೋರಿದಾಗ ಇವುಗಳನ್ನು ಹೋಗಲೆನ್ನುತ್ತಾರೆ. ಗುಣಾ
ತರು ತಮಗೆ ಬೇಕಾದುದೆಂಬ ಮತ್ತು ಬೇಡವಾದುದೆಂಬ ಭಾವನೆಗ
ತಂದುಕೊಳ್ಳದೆ ಇರುವುದರಿಂದ ಅವರು ಇವುಗಳನ್ನು ಇರಲೆನ್ನುವುದೂ
ಹೋಗಲೆನ್ನುವುದೂ ಇಲ್ಲ. ಇಬ್ಬರು ಬಡಿದಾಡುತ್ತಿರುವಾಗ, ಮೂ
ರನೆಯವನೊಬ್ಬನು ವಿನೋದಕ್ಕಾಗಿ ಅದನ್ನು ನೋಡುತ್ತಿರುವಂತೆ, ಗು
ತೀತನು ಉಪೇಕ್ಷೆಯಿಂದಿರುವನು. ಗುಣಗಳು ಗುಣಗಳೊಡನೆ ವ್ಯ

ತ್ತವೆಂದೂ, ತನಗೆ ವ್ಯವಹಾರದ ಸಂಬಂಧವಿಲ್ಲವೆಂದೂ, ಅವನು ಯೋ-
ಸುವನು. ಈ ವಿವೇಕದಿಂದಲೇ ಅವನು ಉದಾಸೀನನಾಗಿರುವನು. ಗು-
ಗಳು ಮಾಡುವುದನ್ನು ತಾನು ಮಾಡುತ್ತೇನೆಂದು ತನ್ನ ಮೇಲೆ ಹಾಕಿ
ಕೊಂಡರೆ ತಾನು ತನ್ನ ಆತ್ಮಸ್ಥಿತಿಯಿಂದ ಕದಲಿದ ಹಾಗಾಯಿತು. ಗುಣಾ
ತನು ಎಂದಿಗೂ ಕದಲುವುದಿಲ್ಲ. ಅವನ ನಡವಳಿಕೆ ಹೀಗೆ. ಇನ್ನು ಹಾಗೆ
ಣಗಳನ್ನು ಮೀರುವುದಕ್ಕೆ ಸಾಧನಗಳೇನೆಂದರೆ? ಸುಖವನ್ನೂ ದುಃಖವ-
ನ್ನೂ ಸಮವಾಗಿ ಭಾವಿಸುವುದು. ಯಾವಾಗಲೂ ಆತ್ಮಸ್ವರೂಪಾನುಸಂ-
ಧಾನದಲ್ಲಿರುವುದು. ಅನನ್ಯ ಭಕ್ತಿಯಿಂದ ಧ್ಯಾನವನ್ನು ಬೆಳಸಿಕೊಳ್ಳುತ್ತ
ಜ್ಞಾನವನ್ನು ದೃಢಮಾಡಿಕೊಳ್ಳುತ್ತ ಪರಮಾತ್ಮ ಸೇವೆಯಲ್ಲಿಯೇ ಇರು
ವುದು. ಇವೇ ಸಾಧನಗಳು.

ವ್ಯಾಸರೇ ಮೊದಲಾದವರು ಬ್ರಾಹ್ಮಣನ ಲಕ್ಷಣವನ್ನು ವರ್ಣಿಸಿರುವ
ರೀತಿ ಹೇಗೆಂದರೆ? ಬ್ರಾಹ್ಮಣನೆಂದರೆ ಬ್ರಹ್ಮಸ್ವರೂಪವನ್ನು ತಿಳಿದು ವಿದ್ವ
ತ್ಸನ್ಯಾಸಿಯಾದವನೆಂದರ್ಥ. ಜೀವವಿರುವಷ್ಟರ ಪ್ರಾರ್ಥಕ್ಕೆ ಅನ್ನ ನೀರು,
ಹೊಟ್ಟೆ ಮೈಮುಚ್ಚಿಕೊಳ್ಳುವುದಕ್ಕೆ ಬಂದಿಷ್ಟು ಹರಕು ಅರಿವೆ,
ಮಲಗಿಕೊಳ್ಳುವುದಕ್ಕೆ ಒಂದಿಷ್ಟು ನೆಲ, ಇಷ್ಟಾದರೆ ಸರಿ. ಅವನು ಅವುಗಳ
ಗುಣದೋಷಗಳನ್ನೇನೂ ನೋಡುವುದಕ್ಕೆ ಹೋಗುವುದಿಲ್ಲ. ಹೊಟ್ಟೆ ತುಂ
ಬಿದರಾಯಿತು, ಮೈಮುಚ್ಚಿದರಾಯಿತು, ಬಿದ್ದಿರುವಷ್ಟು ಸ್ಥಳವಾದರಾಯಿ-
ತು, ಅವುಗಳ ಗುಣದೋಷಗಳ ವಿಚಾರದಿಂದ ಏನೂ ಉಪಯೋಗವಿಲ್ಲವಾದ್ದ
ರಿಂದ ಆ ವಿಚಾರವು ಮನಸ್ಸನ್ನು ಹೊಲಸು ಮಾಡುವುದೆಂದು ಅವನ ಅಭಿ
ಪ್ರಾಯ. ಗುಣದೋಷಗಳನ್ನು ನೋಡುತ್ತ ಹೋಗುವುದೇ ದೋಷವೆಂದೂ
ಎರಡನ್ನೂ ಬಿಟ್ಟಿರುವುದೇ ಗುಣವೆಂದೂ ಭಾಗವತದಲ್ಲಿಯೂ ಹೇಳಿದೆ.
ಬ್ರಹ್ಮಸ್ವರೂಪವನ್ನು ತಿಳಿಯಹೇಳುವುದರ ಮೂಲಕ ಪ್ರಾಣಿಗಳಿಗೆ ಅನು-
ಗ್ರಹ ಮಾಡುವಂಥ ಶ್ರೇಷ್ಠತ್ವವನ್ನು ನೆನಪುಗೊಟ್ಟು ಶ್ರದ್ಧೆಯನ್ನು
ಹುಟ್ಟಿಸುವುದಕ್ಕಾಗಿ ಅವನು ಕೌಪೀನವನ್ನೂ ಹೊದಿಕೆಯನ್ನೂ ದಂಡವನ್ನೂ
ಧರಿಸಿರುವನು. ಇವು ಅವನ ಸುಖಕ್ಕೂ ಆಗುವವು, ಒಂದು ಬಗೆಯಲ್ಲಿ ಇದ
ರಿಂದ ಜನಗಳಿಗೂ ಉಪಕಾರವಾದಂತಾಗುವುದು. ಅವನು ಮತ್ತೊಬ್ಬರ
ಮೇಲೆ ಮುನಿದು ಸಿಟ್ಟುಮಾಡಿದರೂ ಅವನ ಮನೆಗೆಲಸಗಳ ಯೋಗಕ್ಷೇಮವನ-

ನ್ನು ಕೇಳುವುದಿಲ್ಲ. ಉಳಿದ ಮಾತುಗಳನ್ನೆಲ್ಲಾ ಬಿಟ್ಟು ಆತ್ಮಸ್ವರ
ಒಂದನ್ನೇ ಗಟ್ಟಿಯಾಗಿ ಹಿಡಿದಿರುವನು. ಬ್ರಹ್ಮಸ್ವರೂಪಸಂಬಂಧವ
ಮಾತು, ಉಳಿದ ಮಾತುಗಳೆಂಬ ಮಾತಿನೊಳಗೆ ಸೇರುವುದಿಲ್ಲ. ಆದುದರಿ
ಆ ವಿಷಯವನ್ನು ಬೆಳೆಸುವುದು ಅವನಿಗೆ ಹಿತವೇ ಆಗಿರುವುದು. ಇದೊಂ
ಮಾತನ್ನು ಬಿಟ್ಟು ಇತರರ ಮನೆಗೆಲಸಗಳ ಮಾತೊಂದುಕಡೆ ಇರಲಿ. ತರ
ವ್ಯಾಕರಣ ಮೊದಲಾದ ಮಾತುಗಳನ್ನು ಬೆಳೆಸುವುದು ಕೂಡಾ ಅವನ ಮ
ಸ್ಸಿಗೆ ಬರುವುದಿಲ್ಲ. ಅವನು ತನ್ನ ಧ್ಯಾನಕ್ಕೆ ಯಾವ ಅಡ್ಡಿಯೂ ಬರ
ಇರಲೆಂದು ಒಂಟಿಯಾಗಿರುವನು. ಒಬ್ಬನಿರುವುದೇ ಅವನಿಗೆ ಸಮ್ಮ
ಇಬ್ಬರಾದರೆ ಒಂದು ಕುಟುಂಬವಾದಂತಾಯಿತು. ಮೂವರಾದರೆ ಒಂದ
ರು. ಅದಕ್ಕೂ ಹೆಚ್ಚಾದರೆ ಒಂದು ಪಟ್ಟಣವೇ ಆಯಿತು. ಅವನು ಪಟ್ಟಣ
ನ್ನಾಗಲಿ, ಊರನ್ನಾಗಲಿ, ಕೊನೆಗೆ ಕುಟುಂಬವನ್ನೂ ಕೂಡ ಮಾಡಿಕೊ
ಳ್ಳುವದಿಲ್ಲ. ಒಬ್ಬನೇ ಆಗಿರದೆ ಜೊತೆಗೆ ಒಬ್ಬಿಬ್ಬರು ಸೇರಿಬಿಟ್ಟರೆ ಧ
ನವು ಬೆಳೆಯದೆ ಒಬ್ಬರಿಗೊಬ್ಬರಿಗೆ ಊರಸುದ್ದಿಯೋ ಭಿಕ್ಷಾನ್ನದಸು
ಯೋ ಹೆಚ್ಚುವುದು. ಮತ್ತು ಒಬ್ಬರಿಗೊಬ್ಬರು ಕೂಡಿರುವುದರಿ
ಒಬ್ಬರಿಗೊಬ್ಬರಿಗೆ ಗೆಳೆತನವಾದರೂ ಬೆಳೆಯಬಹುದು. ಮತ್ಸರವಾದ
ಹುಟ್ಟಬಹುದು. ಹೀಗಿರುವ ಆ ಬ್ರಾಹ್ಮಣನು ಯಾರೊಬ್ಬರನ
ಹರಸುವ ಗೋಜಿಗೆ ಹೋಗುವುದಿಲ್ಲ. ಸಂಸಾರಿಗಳಾಗಿರುವವರೆಲ್ಲರೂ
ಮಗೆ ಯಾರಾದರೂ ಅಡ್ಡಬಿದ್ದರೆ ಆಶೀರ್ವಾದವಾಡಿಯೇ ಮಾಡುವ
ಆಶೀರ್ವಾದ ವೆಂದರೇನು, ಯಾರು ಏನನ್ನು ಬಯಸಿ ಅಡ್ಡಬೀಳುವ
ಅವರಿಗೆ ಅದು ಸಿಕ್ಕಲೆಂಬ ತನ್ನ ಅಭಿಪ್ರಾಯವನ್ನು ತೋರಿಸುವು
ಈ ಆಶೀರ್ವಾದವನ್ನು ಮಾಡುವ ಶೋಕನ್ನು ಕಟ್ಟಿಕೊಂಡರೆ
ಯಾರ ಮನಸ್ಸಿನಲ್ಲಿ ಏನೇನು ಬಯಕೆಗಳಿರುವವೆಂಬುದನ್ನೆಲ್ಲಾ
ಬೇಕಾದ ಅಗತ್ಯಹುಟ್ಟಿ ಇದರಿಂದ ಲೋಕವಾಸನೆ ಹೆಚ್ಚುತ್ತದೆ.
ಜ್ಞಾನಕ್ಕೆ ಹಾನಿ. ಲೋಕವಾಸನೆ ಶಾಸ್ತ್ರವಾಸನೆ ಮತ್ತು ದೇಹವಾ
ಇವುಗಳನ್ನು ಹಚ್ಚಿಕೊಳ್ಳದ ಹಾಗೆ ನಡೆಯಬೇಕು. ಲೋಕವಾಸನೆ
ದರೆ, ಕ್ಷುದ್ರವಾದ ಪ್ರಾಪಂಚಿಕ ವಿಚಾರಗಳು ಬಲವಾಗೋಣ. ಶಾಸ್ತ್ರ
ಸನೆಯುಂಡರೆ, ಬೇರೆಬೇರೆ ಶಾಸ್ತ್ರಗಳ ಬೇರೆಬೇರೆ ಮಾತುಗಳು

ಕತ್ತಿರೋಣ. ದೇಹವಾಸನೆ ಎಂದರೆ, ದೇಹವೇ ನಾನೆಂದು ಆಗಾಗ ತೋ-
ರೋಣ. ಈ ಮೂರು ವಾಸನೆಗಳಿಗೂ ಅವಕಾಶವನ್ನು ಕೊಡಬಾರದು.
ಮೇಲೆ ಹೇಳಿದಂಥ ಬ್ರಾಹ್ಮಣನಾದವನು ತನಗೆಂದಾಗಲಿ, ಇನ್ನೊಬ್ಬರಿ
ಗೆಂದಾಗಲಿ, ಹೊಲಮನೆಗಳನ್ನು ಪಡೆಯುವ ಮತ್ತು ರಕ್ಷಿಸುವ ಕೆಲಸಕ್ಕೆ
ಕೈಹಾಕುವದಿಲ್ಲ. ಬ್ರಹ್ಮಸ್ವರೂಪವನ್ನು ತಿಳಿದಂಥ ಮುಕ್ತಪುರುಷನಿಗೆ,
ಆಶೀರ್ವಾದಮಾಡುವುದೂ ಕೆಲಸಗಳಿಗೆ ಕೈಹಾಕುವದೂ ತಕ್ಕದ್ದಲ್ಲ.
ಆಶೀರ್ವಾದವನ್ನು ಮಾಡದೇಹೋದರೆ ಅಡ್ಡಬಿದ್ದವರು ಮನಸ್ಸಿನಲ್ಲಿ ನೊಂದು
ಕೊಂಡಾರೆಂದು ಸಂಶಯಪಡಕೆಲಸವಿಲ್ಲ. ತನಗೆ ಲೋಕವಾಸನೆ ಹತ್ತದಂ-
ತೆಯೂ, ಅಡ್ಡಬಿದ್ದವನು ಮನಸ್ಸಿನಲ್ಲಿ ನೊಂದುಕೊಳ್ಳದಂತೆಯೂ, ಅವನು
ನಾರಾಯಣಶಬ್ದವನ್ನು ಉಚ್ಚರಿಸುವನು. ಕೆಲಸಕ್ಕೆ ಕೈಹಾಕುವ
ವಿಷಯವನ್ನು ತೆಗೆದುಕೊಂಡರೆ ಅದು ಎಂಥಾ ಕೆಲಸವಾದರೂ ಆಗಲಿ
ಅವನ ಭಾಗಕ್ಕೆ ಕೆಟ್ಟದ್ದೇ. ಬೆಂಕಿಯನ್ನು ಹೊಗೆಯು ಸುತ್ತಿಕೊಂಡಿರು
ವಂತೆ ಎಲ್ಲಾ ಕೆಲಸಗಳನ್ನೂ ದೋಷವು ಆವರಿಸಿಕೊಂಡೇ ಇರುವುದೆಂದು
ಸ್ಮೃತಿಯು ಹೇಳುವುದು. ಈ ಬ್ರಾಹ್ಮಣನು ಒಬ್ಬರಿಗೆ ಆಶೀರ್ವಾದ
ಮಾಡದಿರುವವುದಿಷ್ಟೇ ಅಲ್ಲ. ಯಾರಿಗೂ ನಮಸ್ಕಾರವನ್ನೂ ಮಾಡುವುದಿ-
ಲ್ಲ. ವಿವಿದಿಷಾ ಸನ್ಯಾಸಿಗಳು ತಮಗಿಂತ ಹಿಂದೆಯೇ ಸನ್ಯಾಸಸ್ವೀಕಾರಮಾಡಿ
ತಮ್ಮಂತೆ ಧರ್ಮವನ್ನು ನಡೆಸಿಕೊಂಡು ಬರುತ್ತಿರುವವರನ್ನು ಕಂಡರೆ ಅವ
ರಿಗೆ ಮಾತ್ರ ಅಡ್ಡಬೀಳಬೇಕೆಂದೂ ಇತರರಮುಂದೆ ಎಂದೆಂದೂ ಬಗ್ಗತಕ್ಕ
ದ್ದಿಲ್ಲವೆಂದೂ ಹೇಳಿವೆ. ಆದರೆ ಒಬ್ಬ ಸನ್ಯಾಸಿಯನ್ನು ಕಾಣುತ್ತಲೇ
ಈ ಸನ್ಯಾಸಿಯು ತನಗಿಂತಲೂ ಮೊದಲೇ ಸನ್ಯಾಸಿಯಾದವನೋ ಈಚೆ-
ಗಾದವನೋ ಎಂಬ ವಿಚಾರವನ್ನು ಗೊತ್ತುಮಾಡಿಕೊಳ್ಳುವುದರಲ್ಲಿಯೂ,
ಮತ್ತು ಅವನು ಧರ್ಮವನ್ನು ಎಷ್ಟರಮಟ್ಟಿಗೆ ಕಾಪಾಡಿಕೊಂಡಿರುವ
ನೆಂಬುದನ್ನು ತಿಳಿದುಕೊಳ್ಳುವುದರಲ್ಲಿಯೂ, ಮನಸ್ಸು ಹರಿದಾಡುವುದು.
ಇದರಿಂದಲೇ ಎಷ್ಟೋ ಸನ್ಯಾಸಿಗಳು ಅಡ್ಡಬೀಳುವ ಮಾತಿಗಾಗಿ ಒಬ್ಬರಿ
ಗೊಬ್ಬರು ಬಡಿದಾಡುವುದೂ ವುಂಟು. ಬ್ರಹ್ಮನಿಷ್ಠನಾದ ಸನ್ಯಾಸಿಯು
ಅಡ್ಡಬೀಳತಕ್ಕದ್ದಿಲ್ಲವೆಂದು ಭಗವತ್ಪಾದರ ಅಭಿಪ್ರಾಯ.

ನಾಮರೂಪಾತೀತನಾದ ಪರಮಾತ್ಮನನ್ನು ಅನುಸಂಧಾನಮಾಡುತ್ತ

ತನ್ನ ಆನಂದದಲ್ಲಿರುವ * ಬ್ರಾಹ್ಮಣನು ಯಾರಿಗೆಂದು ಅಡ್ಡಬೀಳಬೇಕು? ಹೀಗೆ ಅಡ್ಡಬೀಳುವ ಮಾತು ಮನಸ್ಸಿನ ಹರಿದಾಟಕ್ಕೆ ಕಾರಣವಾದೀತೆಂ ಬುದರಮೇಲೆ ಅಡ್ಡಬೀಳತಕ್ಕದ್ದಿಲ್ಲವೆಂದು ಹೇಳಿದರೂ ಎಲ್ಲಾ ಕಡೆಯಲ್ಲಿ ಯೂ ಸಮತ್ವ ಬುದ್ಧಿಯಿಂದ ಈಶ್ವರನೇ ಜೀವರೂಪದಿಂದ ದೇಹದಲ್ಲಿರುವ ನೆಂಬ ಭಾವನೆಯಿಂದ ಮನುಷ್ಯಮಾತ್ರದವರಿಗೇಕೆ, ಕುದುರೆ, ಹೊಲೆಯ, ಹಸು, ಕತ್ತೆ, ಮೊದಲಾದ ಯಾವಪ್ರಾಣಿಗಳಿಗೆ ಅಡ್ಡಬಿದ್ದರೂ ಅದು ತಪ್ಪಿಲ್ಲ. ಬ್ರಾಹ್ಮಣನು ಸ್ತುತಿಯನ್ನು ಮಾಡುವದಿಲ್ಲ. ಇಲ್ಲಿ ಸ್ತುತಿ ಎಂದರೆ ಮನುಷ್ಯರ ವಿಷಯವಾದಸ್ತುತಿ. ದೇವರವಿಷಯವಾದ ಸ್ತುತಿಯಲ್ಲ ಹಣವನ್ನು ಬಯಸುವವರು ಹಣಗಾರನನ್ನು ಆದರದಿಂದ ಹೊಗಳುವಂತೆ ಈಶ್ವರನನ್ನು ಹೊಗಳಿದರೆ ಯಾರುತಾನೇ ಮುಕ್ತರಾಗುವದಿಲ್ಲ. ಅವನಿಗೆ ಹೊತ್ತು ಹೊತ್ತಿಗೆ ಹೊಟ್ಟೆಗೇನೂ ಸಿಕ್ಕದೇಹೋದರೂ ಆವನು ಅದ ಕೊರಗು ಹಚ್ಚಿಕೊಳ್ಳುವುದಿಲ್ಲ. ಅದು ಸಿಕ್ಕಿದಾಗ ಹಿಗ್ಗುವುದೂ ಇಲ್ಲ ಇದನ್ನು ಮಾಡಬೇಕೆಂದೂ ಇದನ್ನು ಬಿಡಬೇಕೆಂದೂ ಶಾಸ್ತ್ರದಲ್ಲಿ ಹೇಳಿರುವ ಯಾವ ಆಜ್ಞೆಯೂ ಅವನ ಮೇಲೆ ಹಾಯುವುದಿಲ್ಲ. ವೇದಗಳೂ ಶಾಸ್ತ್ರ ಗಳೂ ಎಲ್ಲವೂ ಗುಣಗಳಿಗೆ ಕಟ್ಟುಬಿದ್ದಿರುವವರಿಗೇ ಹೇಳಿದ್ದೆಂದೂ ನೀನು ಗುಣಗಳನ್ನೆಲ್ಲಾ ದಾಟು, ಎಂದೂ ಶ್ರೀ ಭಗವಂತನೇ ಅರ್ಜುನನಿಗೆ ಹೇಳಿರು ವನು. ಆದುದರಿಂದ ಗುಣಗಳಿಗೆ ಕಟ್ಟುಬಿದ್ದಿರುವವರ ಮೇಲೆಯೇ ಅವು ಅಧಿಕಾರವೆಲ್ಲಾ. ಬ್ರಾಹ್ಮಣನು ಗುಣಗಳ ಕಟ್ಟನ್ನು ಎಡಗಾಲಿನಿಂದ ಕಿತ್ತು ಬಿಸಾಟವನಾದುದರಿಂದ ಅವನಮುಂದೆ ಅವುಗಳ ಬಾಯಿ ನಡೆಯುವದಿಲ್ಲ ಮಾಡಬೇಕು ಮಾಡಬಾರದೆಂಬುವೆಲ್ಲಾ ಏನು? ಮನುಷ್ಯನು ಮುಖ್ಯವಾಗಿ ಯಾವಾಗಲೂ ಪರಮಾತ್ಮನ ಧ್ಯಾನದಲ್ಲಿರಬೇಕೆಂದೂ, ಕ್ಷಣವಾದರೂ ಅದನ್ನು ಮರೆಯಬಾರದೆಂದೂ ಹೇಳುವಿಕೆಗಳು ಆಜ್ಞೆಯೊಳಗೆ ಸೇರಿದವುಗಳು. ಬ್ರ ಹ್ಮನಿಷ್ಠನು ಯಾವಾಗಲೂ ಧ್ಯಾನದಲ್ಲಿಯೇ ಇರುವವನಾದುದರಿಂದ ಅವನಿಗಿದ ನ್ನು ಬೇರೆ ಹೇಳಬೇಕಾದುದೇನೂ ಉಳಿವಿಲ್ಲ. ಅವನ ಬಳಿಯಲ್ಲಿ ಸೇರಿದ ರಾಜಕಾರ್ಯಗಳ ಸುದ್ದಿ ಹೊಲ ಮನೆ ಸುದ್ದಿ ಇಂಥವುಗಳಂತೂ ತಲೆ ಎತ್ತು ಹಾಗಿಲ್ಲ. ಅವನು ರಜೋಗುಣ ಮತ್ತು ತಮೋಗುಣಗಳೇ ಪ್ರಧಾನವು ಇಂಥಾ ಮಾತುಗಳನ್ನು ಕೇಳಿದರೆ ಹಾವನ್ನು ಕಂಡರೆ ಹೇಗೋ ಹಾಗೆ ಹೆದ

ನು. ಸನ್ಮಾನವೆಂದರೆ ಅವನಿಗೆ ನರಕಕ್ಕೆ ಸಮಾನ. ಇತರರಿಂದ ಪೂಜೆಮೊದಲಾದುವುಗಳನ್ನು ಮಾಡಿಸಿಕೊಳ್ಳುತ್ತ ಹೋದರೆ, ಅದರಮೇಲೆ ಪ್ರೀತಿಹುಟ್ಟಿ ತನ್ನ ಉದ್ದೇಶ್ಯಕ್ಕೆ ಭಂಗಬಂದೀತೆಂದು ಅವನಿಗೆ ಅಂಜಿಕೆ. ಅಸನ್ಮಾನದಿಂದ ತಪಸ್ಸುಹೆಚ್ಚುವುದೆಂದೂ, ಸನ್ಮಾನದಿಂದ ತಪಸ್ಸು ಕುಂದುವದೆಂದೂ, ಪೂಜೆಮಾಡಿಸಿಕೊಂಡಂಥ ಬ್ರಾಹ್ಮಣನು ಹಾಲುಹಿಂಡಿದ ಹಸುವಿನಹಾಗೆ ಸೊರಗುವನೆಂದೂ ಈ ಕಾರಣದಿಂದಲೇ ಯೋಗಿಯಾದವನು ಉತ್ತಮರ ಧರ್ಮಪಂಥವನ್ನು ತಾನು ನಿಂದಿಸದೆ ತನ್ನೊಳಗೆ ಜನರು ಸೇರದೇ ಇರುವಂತೆಯೂ ಅವರು ತನ್ನನ್ನು ತುಚ್ಛವಾಗಿ ಕಾಣುವಂತೆಯೂ ನಡೆಯಬೇಕೆಂದು ಸ್ಮೃತಿಯಲ್ಲಿ ಹೇಳಿದೆ. ಬ್ರಾಹ್ಮಣನಾದಮನುಷ್ಯನು ಸ್ತ್ರೀಯನ್ನು ಕಂಡರೆ ಹೆಣವನ್ನು ಕಂಡರೆಹೇಗೋ ಹಾಗೆ ಹಿಂಜರಿಯುವನು. ಸ್ತ್ರೀಯರಲ್ಲಿ ಎರಡು ಬಗೆಯ ದೋಷಗಳಿವೆ. ಅವರ ಸಹವಾಸವು ಕೂಡದೆಂದು ಶಾಸ್ತ್ರದಲ್ಲಿ ಹೇಳಿರುವುದೊಂದು, ದೇಹರಚನೆಯ ಜುಗುಪ್ಸೆಯೊಂದು. ತಾಯಿ ಸೊಸೆ ಮಗಳು, ಮೊದಲಾದವರೊಡನೆ ಕೂಡ ಒಂದೇ ಹಾಸಿಗೆಯಮೇಲೆ ಕುಳಿತುಕೊಳ್ಳಕೂಡದೆಂದೂ ಪ್ರಬಲವಾದ ಇಂದ್ರಿಯಗಳು ಒಂದೊಂದು ವೇಳೆ ಎಂಥಾ ತಿಳಿದವನನ್ನಾದರೂ ಅಡ್ಡದಾರಿಗೆಳೆಯುವುವೆಂದೂ ಸ್ಮೃತಿಕಾರರೇ ಹೇಳಿರುವುದರಿಂದ ಸ್ತ್ರೀಯರ ಸಹವಾಸದಿಂದ ಹಿಮ್ಮೆಟ್ಟಿಸುವುದಕ್ಕೆ ಶಾಸ್ತ್ರಕ್ಕೇನೂ ತಕ್ಕಷ್ಟು ಸಾಮರ್ಥ್ಯವಿಲ್ಲ. ಒಂದೊಂದುವೇಳೆ, ಪ್ರಾರಬ್ಧದ ಕೈ ಮೇಲಾಯಿತೆಂದರೆ ಶಾಸ್ತ್ರವು ಅಂತರ್ಧಾನವಾಗಬೇಕಾಗಿಬರುತ್ತದೆ. ಸ್ತ್ರೀಯರ ಕಡೆಗೆ ಹೋಗುವ ಮನಸ್ಸನ್ನು ಹಿಂದಕ್ಕೆ ನೂಕಬೇಕಾದರೆ, ದೇಹರಚನೆಯ ಜುಗುಪ್ಸೆಯೇ ಸರಿ. ಚರ್ಮ, ರಕ್ತ, ಮಾಂಸ, ಎಲುಬು ದುರ್ಗಂಧ ಇವುಗಳ ಹೊರತು ಸ್ತ್ರೀಯಲ್ಲಿ ಇನ್ನೇನೂ ಇಲ್ಲವೆಂಬ ಅಂಶವನ್ನೂ, ಆ ಹೊಲಸಿನಲ್ಲಿ ಬಿದ್ದು ಹೊರಳುವವರು, ಹುಳಗಳಿಗೆ ಸಮಾನರೆಂಬುದನ್ನೂ, ವಿಚಾರದಿಂದ ಮನಸ್ಸಿಗೆ ತಂದುಕೊಂಡರೆ ಎಂಥವನಾದರೂ ಸ್ತ್ರೀಯೆಂದರೆ ಹಿಂದೆಗೆಯಬೇಕಾಗುವುದು. ಬ್ರಹ್ಮನಿಷ್ಠನು ಈ ವಿಚಾರವನ್ನು ಲಕ್ಷ್ಯದಲ್ಲಿಟ್ಟುಕೊಂಡೇ ಸ್ತ್ರೀಯನ್ನು ಹೆಣದಂತೆ ಕಾಣುವನು. ಇನ್ನು ಸ್ತ್ರೀಯರೇ ಏಕೆ? ನಾಲ್ಕುಮಂದಿಯಲ್ಲಿ ಇರುವುದೆಂಬುದೇ ಅವನ ಮನಸ್ಸಿಗೆ ಬರುವುದಿಲ್ಲ. ಸಂಸಾರಿಗಳ

ಗಾದರೆ ಒಬ್ಬರೇ ಇರುವುದೆಂದರೆ, ಭಯವಾದರೂ ಆಗುವುದು. ಅಥವ ಹೊತ್ತು ಹೋಗುವುದಿಲ್ಲವೆಂದಾದರೂ ತೋರುವುದು, ಆದಕಾರಣ ಅವರಿಗೆ ಜೊತೆ ಬೇಕು? ನಾಲ್ಕು ಮಂದಿಯ ನಡುವೆ ಇದ್ದರೆ ಅವರಿಗೆ ಹೆದರಿಕೆಗೂ ಅವಕಾಶವಿಲ್ಲ. ವಿನೋದದಿಂದ ಹೊತ್ತು ಕಳೆಯುವುದಕ್ಕೂ ಆಗುತ್ತದೆ. ಯೋಗಿಯ ಮಾತು ಹಾಗಲ್ಲ. ಸಂಸಾರಿಯ ಸ್ಥಿತಿಯು, ಯೋಗಿಗೆ ವಿರುದ್ಧ. ಯೋಗಿಯು ಒಂಟಿಯಾಗಿದ್ದರೆ ಮಾತ್ರ, ಏನೊಂದೂ ಅಡ್ಡಬರದೆ ಅವನ ಧ್ಯಾನವು ಸಾಗಿ ಆಕಾಶವೆಲ್ಲಾ ಪರಮಾನಂದರೂಪನಾದ ಆತ್ಮನಿಂದ ತುಂಬಿಕೊಂಡಿರುವಂತೆ ಕಾಣುವುದರಿಂದ ಅವನಿಗೆ ಹೆದರಿಕೆಯಾಗಲಿ, ಆಲಸ್ಯವಾಗಲಿ ಶೋಕವಾಗಲಿ, ಮೋಹವಾಗಲಿ, ತೋರುವುದಕ್ಕೆ ಕಾರಣವಿಲ್ಲ. ನಾಲ್ಕು ಮಂದಿಯಲ್ಲಿ ಸೇರಿದರೆ ಧ್ಯಾನವು ನಡೆಯದೆ ರಾಜಕಾರ್ಯದ ಸುದ್ದಿ, ಹೊಲಮನೆಗಳ ಸುದ್ದಿ ಮೊದಲಾದವುಗಳೇ ಹಬ್ಬಿಕೊಂಡು ಅವುಗಳ ಗಡಿಬಿಡಿಯಲ್ಲಿ ಆನಂದರೂಪನಾದ ಆತ್ಮನ ಸ್ಫೂರ್ತಿಗೆ ದಾರಿಯಿಲ್ಲದೆ ಮನಸ್ಸಿಗೆ ಕ್ಲೇಶವಾಗುವುದು. ಇನ್ನು ಅತಿವರ್ಣಾಶ್ರಮಿಯ (ಅವಧೂತನ) ವಿಚಾರವನ್ನು ಸೂತಸಂಹಿತೆಯ ಮುಕ್ತಿ ಖಂಡದ ಐದನೇ ಅಧ್ಯಾಯದಲ್ಲಿ ಪರಮೇಶ್ವರನೇ ವರ್ಣಿಸಿರುತ್ತಾನೆ. ಅದೇನೆಂದರೆ ಬ್ರಹ್ಮಚಾರಿಗಿಂತ ಗೃಹಸ್ಥನೂ ಗೃಹಸ್ಥನಿಗಿಂತ ವಾನಪ್ರಸ್ಥನೂ, ವಾನಪ್ರಸ್ಥನಿಗಿಂತ ಸನ್ಯಾಸಿಯೂ, ಸನ್ಯಾಸಿಗಿಂತ ಅತಿವರ್ಣಾಶ್ರಮಿಯೂ, ಶ್ರೇಷ್ಠರು. ಅತಿವರ್ಣಾಶ್ರಮಿಯು ಸರ್ವರಿಗೂ ಗುರು. ಅವನು ಯಾರಿಗೂ ಶಿಷ್ಯನಲ್ಲ. ಗುರುಗಳಿಗೆಲ್ಲ ಗುರುವಾದ ಅವನಿಗೆ ಸಮಾನರೇ ಈ ಲೋಕದಲ್ಲಿಲ್ಲ. ಇನ್ನು ಹೆಚ್ಚಿನವರು ಎಲ್ಲಿಂದ ಬಂದಾರು? ಅವನು ಶರೀರಗಳಿಗಿಂತಲೂ, ಇಂದ್ರಿಯಗಳಿಗಿಂತಲೂ, ಬೇರೆಯಾಗಿ, ಎಲ್ಲಕ್ಕೂ ಸಾಕ್ಷಿಯಾಗಿ ತಾನಾಗಿ ಬೆಳಗುತ್ತಿರುವಂಥ, ಆತ್ಮಸ್ವರೂಪವನ್ನು ತಿಳಿದುಕೊಂಡಿರುವನು. ಶ್ರವಣಮಾತ್ರದಿಂದಲೇ ಅವನಿಗೆ ಈ ಜ್ಞಾನವಾಗಿರುವುದು. ಆತ್ಮನು ಜಾಗ್ರತ್ ಸ್ವಪ್ನ ಸುಷುಪ್ತಿಯೆಂಬ, ಅವಸ್ಥೆಗಳ ಕಟ್ಟಿಗೆ ಸಿಕ್ಕದೆ, ಅವುಗಳ ಆಟವನ್ನು ನೋಡುವವನೆಂದು, ಅವನು ಚನ್ನಾಗಿ ಗೊತ್ತು ಮಾಡಿಕೊಂಡಿರುವನು. ಅವನ ಮನಸ್ಸಿನಲ್ಲಿ ಬರುವ ವಿಚಾರಗಳೇನೆಂದರೆ? ತಿಳಿವಳಿಕೆ ಇಲ್ಲದವರು, ದೇಹದಲ್ಲಿ ವರ್ಣಾಶ್ರಮ ಮೊದಲಾದವುಗಳನ್ನು ಕಲ್ಪಿಸಿಕೊಂಡಿರುವರು. ಜ್ಞಾನರೂಪನಾದ ನನಗೆ ಅವು ಎಂದಿಗೂ

ಇಲ್ಲ. ಸೂರ್ಯನು ಹುಟ್ಟಿದನೆಂದರೆ, ಜನರು ತಮಗೆ ತಾವೇ ಎದ್ದು ಕೆಲಸಮಾಡುವಂತೆ ನಾನು ನನ್ನಷ್ಟಕ್ಕೆ ಸುಮ್ಮನೆ ಇರುವುದರ ಪ್ರಭಾವದಿಂದಲೇ ಪ್ರಪಂಚವೆಲ್ಲಾ ಆಡುತ್ತಿರುವುದು. ಭಂಗಾರದಲ್ಲಿ ಹಾರ ಕಡಗ ಮೊದಲಾದವುಗಳು ಕಲ್ಪಿತವಾಗಿರುವಂತೆ ನನ್ನಲ್ಲಿ ಜಗತ್ತು ಯಾವಾಗಲೂ ಕಲ್ಪಿತವಾಗಿದೆ. ಕಪ್ಪೆಚಿಪ್ಪಿನಲ್ಲಿ, ಅಜ್ಞಾನದಿಂದ ಬೆಳ್ಳಿ ಕಾಣುವಂತೆ, ಜಗತ್ತೆಲ್ಲಾ ನನ್ನಲ್ಲಿ ಕಾಣುತ್ತಿದೆ. ಹೊಲೆಯನ ದೇಹದಲ್ಲಿಯೂ, ಪಶುಪಕ್ಷಿಮೊದಲಾದವುಗಳ ದೇಹದಲ್ಲಿಯೂ, ಬ್ರಾಹ್ಮಣನ ದೇಹದಲ್ಲಿಯೂ, ಇತರ ಕಡೆಗಳಲ್ಲಿಯೂ, ಭೇದದೃಷ್ಟಿಯಿಲ್ಲದೆ ತುಂಬಿಕೊಂಡಿರುವ ಆಕಾಶದಂತೆ ಸರ್ವವ್ಯಾಪಿಯಾಗಿರುವ ಪರಮಾತ್ಮನು ನಾನು. ಕನಸಿನೊಳಗೆ ಕಾಣುವ ಜಗತ್ತು ಹೇಗೆ ಸುಳ್ಳೋ ಹಾಗೇ ಎಚ್ಚರವಾಗಿರುವಾಗ ಕಾಣುವ ಈ ಪ್ರಪಂಚವೂ ಸುಳ್ಳು. ನಾನು ಇಂದ್ರಿಯಗಳಲ್ಲ, ಪ್ರಾಣಗಳಲ್ಲ, ಮನಸ್ಸಲ್ಲ, ಬುದ್ಧಿಯಲ್ಲ, ಅಹಂಕಾರವಲ್ಲ, ಚಿತ್ತವಲ್ಲ, ಮಾಯೆಯಲ್ಲ, ಆಕಾಶಮೊದಲಾದ ಜಗತ್ತಲ್ಲ, ಮಾಡುವವನಲ್ಲ, ಉಣ್ಣುವವನಲ್ಲ, ಉಣ್ಣಿಸುವವನಲ್ಲ, ಸಚ್ಚಿದಾನಂದಸ್ವರೂಪನಾದ ಬ್ರಹ್ಮವು ನಾನು. ನೀರು ಅಲ್ಲಾಡುವುದರಿಂದ ಸೂರ್ಯನು ಅಲ್ಲಾಡುವಂತೆ ಕಾಣುವಹಾಗೆ ಅಹಂಕಾರದ ಸಂಸಾರದಿಂದ ಆತ್ಮನಿಗೆ ಸಂಸಾರದ ಸಂಬಂಧವು ತೋರುವುದು. ಆದಕಾರಣ ವರ್ಣ ಆಶ್ರಮ ಮೊದಲಾದ ಭಾರವನ್ನು ಆತ್ಮನಮೇಲೆ ಹೊರಿಸುವುದು ತಪ್ಪು, ಆತ್ಮಜ್ಞಾನಿಗೆ ವರ್ಣವೂ ಇಲ್ಲ. ಆಶ್ರಮವೂ ಇಲ್ಲ. ಮಾಡಬೇಕಾದುದೂ ಇಲ್ಲ. ಮಾಡಬಾರದಾದುದೂ ಇಲ್ಲ. ಬಿಡಬೇಕಾದುದೂ ಇಲ್ಲ. ಹಿಡಿಯಬೇಕಾದುದೂ ಇಲ್ಲ. ಇಂಥ ಬ್ರಹ್ಮಜ್ಞಾನಿಗಳ ನಿಷ್ಠೆಯನ್ನು ಮಾಂಸಮಯವಾದ ಕಣ್ಣುಗಳಿಂದ ಕಾಣುವುದಕ್ಕೆ ಆಗುವುದಿಲ್ಲ. ಜನರೆಲ್ಲರೂ ಮರೆತಿರುವ ವಿಷಯವನ್ನು ಅತಿವರ್ಣಾಶ್ರಮಿಯು, ತಪ್ಪದಂತೆ ನೆನಪಿಟ್ಟುಕೊಂಡಿರುವನು. ಜನರು ಯಾವಾಗಲೂ ಯಾವುದನ್ನು ನೆನಪಿಟ್ಟುಕೊಂಡಿರುವರೋ ಅದನ್ನು ಅತಿವರ್ಣಾಶ್ರಮಿಯು ಸಂಪೂರ್ಣವಾಗಿ ಮರೆತಿರುವನು. ಹೀಗೆ ಜೀವನ್ಮುಕ್ತಿಸ್ಥಿತಿಯೊಂದಿರುವುದೆಂಬ ವಿಷಯದಲ್ಲಿ ಶ್ರುತಿಗಳಲ್ಲಿಯೂ ಸ್ಮೃತಿಗಳಲ್ಲಿಯೂ ಬೇಕಾದಷ್ಟು ಆಧಾರವಿರುವುದು.

ಇಲ್ಲಿಗೆ ಶ್ರೀ ವಿದ್ಯಾರಣ್ಯಕೃತವಾದ ಜೀವನ್ಮುಕ್ತಿ ವಿವೇಕದಲ್ಲಿ

ಪ್ರಮಾಣ ಪ್ರಕರಣವು ಮುಗಿದುದು.

ಶ್ರೀಃ.

## —* ಮನೋನಾಶ ಪ್ರಕರಣ. *—

ಇನ್ನು ಜೀವನ್ಮುಕ್ತಿಗೆ ಸಾಧನವಾದಂಥ ಮನೋನಾಶದ ವಿಷಯವನ್ನು ವಿಚಾರ ಮಾಡೋಣ. ವಾಸನೆಗಳೆಲ್ಲಾ ದಿಕ್ಕುಗೆಟ್ಟು ಹೋದರೆ ಮನಸ್ಸು ತಾನಾಗಿ ನಾಶವಾಗಿಯೇ ಆಗುವುದಾದರೂ ಮನೋನಾಶಕ್ಕಾಗಿಯೇ ಬೇರೆಯಾಗಿ ಹೆಚ್ಚಿನ ಅಭ್ಯಾಸವನ್ನು ನಡೆಸಿದರೆ ವಾಸನೆಗಳು ಮತ್ತೆ ಬಂದು ಅಲ್ಲಿ ಹೊಕ್ಕೊಳ್ಳದಂತೆ ಆಗುತ್ತದೆ. ಸುಮ್ಮನೆ ಮೂಕತನ ಮತ್ತು ಕುರುಡುತನಗಳನ್ನು ಅಭ್ಯಾಸಮಾಡುವ ಮಾತ್ರದಿಂದಲೆ ವಾಸನೆಗಳು ತಿರುಗಿ ಬರದಂತೆ ಆಗುವದೆಂದು ಹೇಳುವಹಾಗಿಲ್ಲ. ಮನಸ್ಸೊಂದು ನಾಶವಾಯಿತೆಂದರೆ ಮೂಕತನ ಮತ್ತು ಕುರುಡತನ ಮೊದಲಾದವುಗಳ ಸ್ಥಿತಿಯು ತಾನಾಗಿ ತೋರಿಸಿಕೊಳ್ಳುವುದರಿಂದ ಅವುಗಳನ್ನು ಅಭ್ಯಾಸಮಾಡುವ ಪ್ರಯಾಸವೇ ಕಡಮೆಯಾಗುತ್ತದೆ. ಆದರೂ ಅದರಲ್ಲಿ ಅಷ್ಟಿಷ್ಟಾದರೂ ಮನೋನಾಶದ ಅಭ್ಯಾಸವಿದ್ದೇ ಇರುವುದೆಂದರೆ, ಇರಲಿ; ಅದು ಇರಲೇ ಬೇಕು. ಮನೋನಾಶವಾಗದೆ ಸುಮ್ಮನೆ ಬರೀ ಮೂಕತನ ಕುರುಡತನ ಮೊದಲಾದವುಗಳ ಸ್ಥಿತಿಯನ್ನು ಅಭ್ಯಾಸಮಾಡಿದ ಮಾತ್ರಕ್ಕೆ ಅವು ಚನ್ನಾಗಿ ಬೇರು ಬಿಟ್ಟುಕೊಳ್ಳುವದಿಲ್ಲ. ಆದುದರಿಂದ ಏನಾದರೂ ಮಾಡಿ ಮನಸ್ಸನ್ನು ಹೋಗಲಾಡಿಸಿಕೊಳ್ಳಬೇಕೆಂದು ಜನಕನ ಅಭಿಪ್ರಾಯ. “ಸಾವಿರಾರು ಮೊಳಕೆಗಳೂ ಲೆಕ್ಕವಿಲ್ಲದಷ್ಟು ಕೊಂಬೆಗಳೂ ಉಳ್ಳದ್ದಾಗಿ ಎಲ್ಲಿನೋಡಿದರೂ ಚಿಗುರುಗಳೂ ಹಣ್ಣುಗಳೂ ಇರುವಂತೆ ಕಾಣುತ್ತಿರುವ ಈ ಸಂಸಾರವೆಂಬ ಮರಕ್ಕೆ ಮನಸ್ಸೇ ಬೇರು. ಏನಾದರೊಂದುದ್ದೇಶ ಮಾಡುವದೇ ಅದರಸ್ವರೂಪ. ಆ ಉದ್ದೇಶವೆಂಬುದನ್ನು ಇಲ್ಲದಂತೆ ಮಾಡಿ ಸಂಸಾರವೆಂಬ ಮರವು ಒಣಗಿಬಿಡುವಂತೆ ಮಾಡುತ್ತೇನೆ. ತಿಳಿಯಿತು ತಿಳಿಯಿತು. ಕಳ್ಳನ ಪತ್ತೆಆಯಿತು. ಈ ಮನಸ್ಸೆಂಬ ಕಳ್ಳನನ್ನು ನೆಲಕ್ಕೆ ಒರಗಿಸಿ ಬಿಡುತ್ತೇನೆ. ನಾನು ಈ ಮನಸ್ಸಿನಿಂದಲೇ ಬಹುಕಾಲದಿಂದ ಹಾಳಾದೆನು.” ಎಂದು ಜನಕನು ಆಡಿ ತೋರಿಸಿರುವನು. “ಈ ಮನಸ್ಸೆಂಬ ಮರದಿಂದಲೆ ನಮಗೆ ಎಲ್ಲಾ ಉಪದ್ರವಗಳೂ ಆಗುತ್ತಿರುವುವು. ಇದನ್ನು ತಪ್ಪಿಸಿಕೊಳ್ಳುವುದಕ್ಕೆ ಮನಸ್ಸನ್ನು ಬಿಗಿಹಿಡಿಯುವುದೊಂದೇ ಉಪಾಯ. ಮನಸ್ಸಿನ ಏಳಿಗೆಯೇ ನಮ್ಮ ಹಾನಿ. ಮನಸ್ಸಿನ ನಾಶವೇ ನಮ್ಮ ಏಳಿಗೆ. ಜ್ಞಾನಿಗಳ ಮನಸ್ಸು ನಾಶವನ್ನು ಹೊಂದುವುದು. ಅಜ್ಞಾನಿಗಳಿಗೆ ಮನಸ್ಸೇ ಸಂಕೋಲೆಯಾಗಿರುವುದು. ಮನಸ್ಸು ಒಂದೇ ತತ್ವದಲ್ಲಿ ಎಡೆಬಿಡದೆ ಮುಳುಗಿ ಹೋಗಿರುವಂತೆ ಅದನ್ನು ಬಿಗಿಹಿಡಿಯುವವರಿಗೂ ಕಗ್ಗತ್ತಲೆಯಲ್ಲಿ ಬೇತಾಳಗಳು ಕುಣಿಯುವಂತೆ ಅದರಲ್ಲಿ ವಾಸನೆಗಳು ತಾಂಡವ ಮಾಡುತ್ತಿರುವವು. ಮನಸ್ಸಿನ ಸೊಕ್ಕನ್ನು ಮುರಿದು

ಇಂದ್ರಿಯಗಳೆಂಬ ಹಗೆಗಳನ್ನೆಲ್ಲಾ ಸೆರೆಹಿಡಿದು ಹಾಕಿದರೆ ಆಮೇಲೆ ವಿಷಯ ಸುಖವನ್ನ-ನುಭವಿಸಬೇಕೆಂಬ ವಾಸನೆಗಳು ಛಳಿಗಾಲದ ಕಮಲಗಳಂತೆ ಬಾಡುತ್ತವೆ. ಕೈಕೈ ಹಿಸುಕಿ-ಕೊಂಡು ಹಲ್ಲು ಹಲ್ಲು ಕಡಿದು ಮೈಮೈ ತಿಕ್ಕಾಡಿ ಮೊದಲು ತನ್ನ ಮನಸ್ಸನ್ನು ಗೆಲ್ಲಬೇಕು. ಈ ಪ್ರಪಂಚದಲ್ಲಿ ಯಾರು ಮನಸ್ಸಿಗೆ ಸೋತುಹೋಗುವದಿಲ್ಲವೋ ಅವರೇ ಗಂಡಸರೆಂಬ ಎಣಿಕೆಯಲ್ಲಿ ಬರುವುದಕ್ಕೆ ತಕ್ಕವರು. ಮನಸ್ಸೆಂಬ ಹೆಬ್ಬಾವು ಹೃದಯವೆಂಬ ಹುತ್ತದಲ್ಲಿ ಸುರಳಿಯಾಗಿ ಸುತ್ತಿಕೊಂಡು ವಿಷವನ್ನು ಕಕ್ಕುತ್ತ ಇರುವದು. ಅದರ ಆಟವಲ್ಲಾ ತಣ್ಣಗಾದಮೇಲೆ ಚಂದ್ರನಂತೆ ಅಖಂಡಾನಂದ ಸ್ವರೂಪವು ತಲೆಯೆತ್ತುವುದು. ಈ ಮನ-ಸ್ಸೆಂಬುದು ಮಾಯೆಯೆಂಬ ಗಾಲಿಯ ಅಚ್ಚು ಇದ್ದಹಾಗೆ ಇದೆ. ಈ ಅಚ್ಚನ್ನು ಅಲುಗ ಗೊಡದೆ ಗಟ್ಟಿಯಾಗಿ ತಡೆದುಬಿಟ್ಟರೆ ಅದರಿಂದ ಯಾವ ಬಾಧೆಯೂ ಆಗದೆ ಇರುವದು." ಎಂದು ವಸಿಷ್ಠರೂ ಹೇಳಿರುವರು. "ಯೋಗಿಗಳಿಗೆ ಮನಸ್ಸೊಂದು ಕೈಗೆ ಸಿಕ್ಕಿತೆಂದರೆ ಅವರಿನ್ನೇತಕ್ಕೂ ಹೆದರಬೇಕಾದುದಿಲ್ಲ. ಅದೊಂದಾದರೆ ದುಃಖವೆಲ್ಲಾ ಹೋಗಿ ಜ್ಞಾನವು ಬಂದು ಶಾಶ್ವತವಾದ ಶಾಂತಿ ದೊರೆಯುವುದು." ಎಂದು ಗೌಡಪಾದಾಚಾರ್ಯರು ಹೇಳಿ-ರುವರು. "ಕೃಷ್ಣ! ಈ ಮನಸ್ಸಿನ ಹುಟ್ಟುಗುಣವೇ ಬಹು ಚಪಲವಾದದ್ದು. ದೇಹದ ಮತ್ತು ಇಂದ್ರಿಯಗಳ ಹಿಡಿತಕ್ಕೆ ಇದು ಸಿಕ್ಕುವುದಿಲ್ಲ. ಬಹು ಬಲಶಾಲಿ; ಬಹು ಪುಷ್ಟಿ ಗೊಂಡಿರುವುದು; ಅದನ್ನು ಬಿಗಿಯುವುದೆಂಬುದು ಗಾಳಿಯನ್ನು ಗಂಟುಕಟ್ಟುವ ಕಷ್ಟದ ಕೆಲಸವೆಂದು ನನಗೆ ತೋರುತ್ತದೆ." ಎಂದು ಅರ್ಜುನನು ಹೇಳಿಕೊಂಡಿರುವನು. ಇದು ಹಠಯೋಗದ ವಿಷಯವಾಯಿತು. ಸುಮ್ಮನೆ ಕೂತು ಕೂತೇ ಮೇಲಿಂದ ಮೇಲೆ ಒಂದೇ ಕಡೆಯಲ್ಲಿಯೇ ನಿಲ್ಲಿಸುತ್ತಾ ಮನಸ್ಸನ್ನು ಗೆಲ್ಲುವದೆಂಬುದು ಆಗದಮಾತು. ಅದಕ್ಕೊಂದು ತಕ್ಕ ಯುಕ್ತಿಬೇಕು. ಅಂಕುಶ ವಿಲ್ಲದಿದ್ದರೆ ಧೂರ್ತಸ್ವಭಾವವುಳ್ಳ ಮದ್ದಾನೆಯನ್ನು ವಶಮಾಡಿಕೊಳ್ಳುವುದು ಹೇಗೆ ಆಗುವದಿಲ್ಲವೋ ಹಾಗೆ ಉಪಾಯ ವಿಲ್ಲದಿದ್ದರೆ ಮನಸ್ಸ-ನ್ನು ಹಿಡಿತದಲ್ಲಿಟ್ಟುಕೊಂಡಿರುವದಕ್ಕೆ ಆಗುವದಿಲ್ಲ. ಮನಸ್ಸನ್ನು ಗೆಲ್ಲಬೇಕಾದರೆ ಏನೇನು ಮಾಡಬೇಕೆಂಬುದನ್ನು ವಸಿಷ್ಠರು ಚನ್ನಾಗಿ ಹೇಳಿರುವರು. ಅದರಂತೆ ನಡೆದವನಿಗೆ ಮನವೂ ಕೈಗೆ ಸಿಕ್ಕುವುದು. ಮನಸ್ಸನ್ನು ಬಲಾತ್ಕಾರದಿಂದ ಹಿಡಿದುಕೊಳ್ಳುವುದೊಂದುಬಗೆ, ಉಪಾಯದಿಂದ ಹಿಡಿದುಕೊಳ್ಳುವುದೊಂದುಬಗೆ. ಇಂದ್ರಿಯಗಳಾಗಲೀ ಬುದ್ಧಿಯಾಗಲೀ ಅತ್ತಿತ್ತ ಹರಿದು ಹೋಗದಿರಲೆಂದು ಕಣ್ಣು, ಕಿವಿ, ಮೊದಲಾದವುಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡು ಬಿಡುವುದು ಬಲಾತ್ಕಾರದ ಪದ್ಧತಿ! ಹೀಗೆ ಮಾಡುವುದರಿಂದಲೂ ಒಂದೊಂದು ವೇಳೆ ಮನಸ್ಸು ಹೇಳಿದಂತೆ ಕೇಳುವಸ್ಥಿತಿಗೆ ಬರುವುದುಂಟು. ಉಪಾಯಗಳ ವಿಚಾರವನ್ನು ಮಾಡಿದರೆ ವೇದಾಂತಶಾಸ್ತ್ರವನ್ನು ತಿಳಿದುಕೊಳ್ಳುವದೂ, ಸಾಧುಗಳನ್ನು ಸೇವಿಸುವುದೂ, ವಾಸನೆಗಳನ್ನು ಕಳೆದುಕೊಳ್ಳುವುದೂ, ಉಸಿರಾಡುವುದನ್ನು ತಡೆದು ಕೊಳ್ಳುವುದೂ, ಇವುಗಳೆಲ್ಲಾ ಮನಸ್ಸನ್ನು ಗೆಲ್ಲುವುದಕ್ಕೆ ಬಹು ಒಳ್ಳೇ ಉಪಾಯಗಳು. ಯುಕ್ತಿಗಳಿರಲಾಗಿ ಬಲಾತ್ಕಾರದಿಂದ ಮನಸ್ಸನ್ನು ಜಗ್ಗುವುದಕ್ಕೆ ಹೋಗುವವರು

ಕತ್ತಲೆಯನ್ನು ಕಳೆಯುವುದಕ್ಕೆ ದೀಪವನ್ನು ತರುವುದನ್ನು ಬಿಟ್ಟು ಅಂಧಕಾರವನ್ನು ನೂಕಿ-ಕೊಳ್ಳುವಂಥ ಮೂರ್ಖರೇ ಸರಿ. ಬಲಾತ್ಕಾರದಿಂದಲೆ ಮನಸ್ಸನ್ನು ವಶಮಾಡಿಕೊಳ್ಳುವೆ-ವೆಂಬ ಪ್ರಯತ್ನ ಮಾಡುವವರು ಒಳ್ಳೇ ಮದಿಸಿದ ಗಂಡಾನೆಯನ್ನು ಕಮಲದ ನಾಳದೆ-ಯಿಂದ ಕಟ್ಟಿಹಾಕಿಬಿಡುವಂಥ ಸಾಹಸವನ್ನು ಮಾಡಿದವರಾಗುತ್ತಾರೆ. ಕಣ್ಣು ಕಿವಿ ಮೊದಲಾದ ಜ್ಞಾನೇಂದ್ರಿಯಗಳನ್ನೂ ನಾಲಗೆ ಕೈ ಮೊದಲಾದ ಕರ್ಮೇಂದ್ರಿಯಗಳನ್ನೂ ಜಗ್ಗಿ ಹಿಡಿದುಕೊಂಡು ಅವುಗಳನ್ನು ಸಡಿಲಗೊಡದೆ ತಡೆದುಕೊಳ್ಳುವ ಮಾತ್ರದಿಂದ ಮನಸ್ಸನ್ನು ಹಾಗೆಯೇ ಜಗ್ಗಿ ಹಿಡಿದು ಹಾಕಿಕೊಳ್ಳಬಹುದೆಂದು ಯೋಚಿಸುವುದು ಅವಿವೇ-ಕವೇ ಸರಿ. ಇಂದ್ರಿಯಗಳನ್ನು ಅಡಗೊಡದಂತೆ ಮಾಡಲಾದೀತು. ಮನಸ್ಸಿನ ಆಟವನ್ನು ನಿಲ್ಲಿಸಲಾದೀತೆ? ಆ ಮನಸ್ಸಿನ ನೆಲೆಮನೆಯಾದಂಥ ಹೃದಯಕಮಲದ ಆಟವನ್ನು ನಿಲ್ಲಿ-ಸುವುದಕ್ಕೆ ಯಾರಿಂದಾಗುತ್ತದೆ? ಆದಕಾರಣ ಮನಸ್ಸನ್ನು ಗೆಲ್ಲುವುದಕ್ಕೆ ವೇದಾಂತ ವಿದ್ಯೆ ಮೊದಲಾದ ಉಪಾಯಗಳೇ ತಕ್ಕವುಗಳು. ವೇದಾಂತ ವಿದ್ಯೆಯು ಕಾಣಬರುವವುಗ-ಳೆಲ್ಲಾ ಬರೀ ತೋರಿಕೆಯ ಮಾತ್ರದವುಗಳೆಂದೂ ಜ್ಞಾನಸ್ವರೂಪವು ಮಾತ್ರ ತಾನೇ ತಾನಾಗಿ ಬೆಳಗುವಂಥದ್ದೆಂದೂ ತಿಳಿಸಿ ಕೊಡುತ್ತದೆ. ಈ ತಿಳುವಳಿಕೆ ಉಂಟಾಯಿತೆಂದರೆ ತನಗೆ ಗೋಚರವಾಗುವ ಯಾವ ವಸ್ತುಗಳಿಂದಲೂ ಏನೂ ಪ್ರಯೋಜನ ವಿಲ್ಲವೆಂತಲೂ ಪ್ರಯೋ-ಜನಕರವಾದ ಜ್ಞಾನಸ್ವರೂಪವು ಗೋಚರವಾಗತಕ್ಕದ್ದಲ್ಲವೆಂತಲೂ ತಿಳಿದು ಕಟ್ಟಿಗೆಯುರಿದು ತೀರಿದಮೇಲೆ ಬೆಂಕಿಯು ತನಗೆ ತಾನೇ ತಣ್ಣಗಾಗುವಂತೆ ಮನಸ್ಸು ತಾನಾಗಿ ಕರಗಿ ಹೋಗುವುದು. ವೃತ್ತಿಗಳಾಗಗೊಡದಿದ್ದರೆ ಸರಿ; ಮನಸ್ಸು ತನಗೆ ಆಧಾರಭೂತವಾದ ಆತ್ಮಸ್ವರೂಪದಲ್ಲಿ ಅಡಗಿಕೊಳ್ಳುವದು. ಯಾವನಿಗೆ ಎಷ್ಟು ಹೇಳಿದರೂ ತತ್ವವು ಚನ್ನಾಗಿ ತಿಳಿಯುವದಿಲ್ಲವೊ ಯಾವನು ತಿಳಿದರೂ ಅದನ್ನು ಮರೆಯುತ್ತಾನೋ ಅಂಥವನಿಗೆ ಸಾಧುಗಳ ಸಹವಾಸವೇ ಉಪಾಯ. ಸಾಧುಗಳು ಆ ತತ್ವಾರ್ಥವನ್ನು ಪುನಃ ಪುನಃ ತಿಳಿಯಹೇಳಿ ನೆನಪಿಗೆ ತಂದುಕೊಡುವರು. ಯಾವನು ತಾನು ಎಲ್ಲರಿಗಿಂತಲೂ ಹೆಚ್ಚು ತಿಳಿದವನೆಂಬ ದುರಭಿಮಾನದಿಂದ ಕೂಡಿದವನಾಗಿ ಸಾಧುಗಳ ಮುಂದೆ ನಮ್ರತೆಯನ್ನು ತೋರಿಸುವದಕ್ಕೆ ಒಪ್ಪುವದಿಲ್ಲವೊ ಅವನಿಗೆ ಹಿಂದೆ ಹೇಳಿದಂತೆ ತನ್ನ ಆ ದುರ್ವಾಸನೆಯನ್ನು ಕಳೆದು ಕೊಳ್ಳುವುದೇ ಉಪಾಯ. ಆ ವಾಸನೆಗಳು ಚನ್ನಾಗಿ ವ್ಯಕ್ತವಾಗಿಕೊಂಡು ಹಿಂಬಾಲಿಸುವದನ್ನು ಪ್ರಬಲವಾಗಿ ಬಿಟ್ಟರೆ ಉಸಿರಾಡುವುದನ್ನು ತಡೆಯಬೇಕು. ಉಸಿರಾ-ಡುವುದೂ ಮತ್ತು ವಾಸನೆಗಳೂ ಎರಡೂ ಮನಸ್ಸನ್ನು ಕದಲಿಸುವಂತೆ ಮಾಡುವುವು. ಆದಕಾರಣ ಅವೆರಡನ್ನು ತಡೆದುಕೊಂಡರೆ ಮನಸ್ಸಿನ ಆಟವು ನಿಲ್ಲುವುದು. "ಒಂದರ ಹಿಂದೊಂದು ವೃತ್ತಿಗಳನ್ನು ತಪ್ಪದೆ ಹಡೆಯುತ್ತಿರುವ ಚಿತ್ತವೆಂಬ ಮರಕ್ಕೆ ಎರಡು ಬೀಜಗಳು; [illegible] ಬಲವಾದ ವಾಸನೆಯೊಂದು. [illegible] [illegible] ಆ [illegible] [illegible] ಮೂಲಕಾರಣವಾದ ಅಜ್ಞಾನವೇ ಕಟ್ಟಿಗೆ. ಈ ಅಜ್ಞಾನವು

ಮುಸುಕಿಕೊಂಡಿರುವ ಜ್ಞಾನವು ಪ್ರಾಣದ ಹರಿದಾಟದಿಂದ ಮುಸಕನ್ನು ಕಳೆದುಕೊಳ್ಳ-ದಾಗಿ ಬಾಚಬ್ರಿಡನೆ ಬಗೆಬಗೆಯಾದ ವೃತ್ತಿಗಳನ್ನು ಪಡೆಯುವದು. ಆದಕಾರಣ ಚಿತ್ತದ ವೃತ್ತಿಗಳೆಂಬುವಂಥ ಜ್ಞಾನದ ಜ್ವಾಲೆಗಳಿಂದ ದುಃಖದ ಮೇಲೆ ದುಃಖಗಳಾ-ಗುತ್ತವೆ. ಉಸುರಾಡುವಿಕೆಯು ಮನಸ್ಸನ್ನು ಹರಿದಾಡುವಂತೆ ಮಾಡುವದು. ಹೀಗೆ ಇನ್ನು ವಾಸನೆಯು ಮನಸ್ಸನ್ನು ಹರಿದಾಡುವಂತೆ ಮಾಡುವದೆಂತೆಂದರೆ:—ಒಂದೊಂದು ವಿಷಯ-ವನ್ನು ಎಷ್ಟೋ ಕಾಲ ಎಡೆಬಿಡದೆ ಅನುಭವ ಮಾಡಿ ಮಾಡಿರುವದರಿಂದ ಮನಸ್ಸು ಅತಿ ಚಂಚಲವಾಗಿ ಹುಟ್ಟುವಿಕೆಗೂ ಮುಪ್ಪಿಗೂ ಮತ್ತು ಸಾಯುವಿಕೆಗೂ ಕಾರಣವಾಗುತ್ತದೆ. ಈ ರೀತಿಯಲ್ಲಿ ಉಸಿರಾಡುವದೂ ಮತ್ತು ವಾಸನೆಯೂ ಮನಸ್ಸನ್ನು ಹರಿದಾಡುವಂತೆ ಮಾಡುವುದಿಷ್ಟೇ ಅಲ್ಲ. ಒಂದನ್ನೊಂದು ಹುರಿದುಂಬಿಸುವವು. ವಾಸನೆಯ ಜೋರಿನಿಂ-ದಲೇ ಉಸಿರಾಟವು ನಡೆಯುವುದು. ಉಸಿರಾಡುವಿಕೆಯಿಂದಲೇ ವಾಸನೆ ಬೆಳೆಯುವುದು. ಬೀಜದಿಂದ ಮೊಳಕೆ ಮತ್ತೆ ಅದರಿಂದ ಬೀಜ ಹೀಗಾಗುವಂತೆ ಮನಸ್ಸಿನ ಬೀಜದ ಸಂತತಿ-ಯು ಸಾಗುತ್ತಿರುವುದು. ಇವೆರಡರಲ್ಲಿ ಒಂದನ್ನು ನಾಶಮಾಡಿಬಿಟ್ಟರೆ ಎರಡೂ ನಾಶವಾಗಿ ಬಿಡುವವು. ಉಸಿರಾಡುವುದನ್ನು ತಡೆದುಕೊಳ್ಳಬೇಕಾದರೆ ಕೂತುಕೊಳ್ಳುವ ಪದ್ಧತಿ-ಯನ್ನೂ ಊಟದ ನಿಯಮವನ್ನೂ ಸಾಧಿಸುತ್ತ ತಪ್ಪದೆ ಪ್ರಾಣಾಯಾಮವನ್ನೂ ಮಾಡುತ್ತ ಗುರುಗಳು ಹೇಳಿಕೊಟ್ಟ ಉಪಾಯವನ್ನೂ ನಡೆಸಬೇಕು. ಯಾವದನ್ನೂ ಮನಸ್ಸಿಗೆ ಹಚ್ಚಿಕೊಳ್ಳದೆ ನಡೆಯುವುದರಿಂದಲೂ ಸಂಸಾರದಲ್ಲಿ ಆಸಕ್ತಿಯನ್ನು ತೋರಿಸದೆ ಇರುವದ-ರಿಂದಲೂ ದೇಹವು ಸೊರಗುವಸ್ಥಿತಿಯನ್ನು ಪಡೆಯುವುದರಿಂದಲೂ ವಾಸನೆಯು ಮತ್ತೆ ಅಲ್ಲಿಗೆ ಬರಲಿಚ್ಛಿಸುವದಿಲ್ಲ. ವಾಸನೆಗಳನ್ನು ಕಳೆದುಕೊಳ್ಳುವುದರಿಂದಲೂ ಉಸಿರಾಡು-ವದನ್ನು ತಡೆದುಕೊಳ್ಳುವದರಿಂದಲೂ ಚಿತ್ತದ ಚಿತ್ತತ್ವವೇ ಹೋಗುವುದು. ಮನಸ್ಸಿನ ಬೇಹಾಳವೇನೆಂದರೆ ಬೇರೊಂದು ವಸ್ತುವಿನ ವಿಷಯವನ್ನು ಮನಸ್ಸಿನೊಳಕ್ಕೆ ತಂದು ಕೊಂಡು ಅದನ್ನು ಒಳ್ಳೆಯದೆಂಬು ಭಾವನೆ ಮಾಡಿದರೆ ಚಿತ್ತವು ಮೈದುಂಬಿಕೊಂಡು ಏಳುವದು. ಏನನ್ನೂ ಮನಸ್ಸಿಗೆ ತಂದುಕೊಳ್ಳದೆ ಇದ್ದದ್ದನ್ನೆಲ್ಲಾ ಹೊರಕ್ಕೆ ಹಾಕಿ ಸುಮ್ಮನೆ ಇದ್ದರೆ, ಚಿತ್ತವು ತಲೆ ಎತ್ತುವುದೇ ಇಲ್ಲ. ಹೀಗೆ ಎಂದಿಗೂ ಏನನ್ನೂ ಚಿಂತಿಸದೆ ಹೋದರೆ ಆ ಮನಸ್ಸು ವಾಸನೆಗಳಿಲ್ಲದಂತಾಗುತ್ತದೆ. ಆಗ ಅದು ಮನಸ್ಸೆನಿಸಿಕೊಳ್ಳುವುದೇ ಇಲ್ಲ. ಮನಸ್ಸು ಮನಸ್ಸೆನಿಸಿಕೊಳ್ಳದಂತೆ ಆಗುವಸ್ಥಿತಿಯೇ ಎಲ್ಲಕ್ಕಿಂತ ಹೆಚ್ಚಿನ ಶಾಂತಿ, ಮನಸ್ಸು ಮನಸ್ಸೆನಿಸಿಕೊಳ್ಳದಂಥ ಸ್ಥಿತಿಗೆಬರುವವರಿಗೂ ನಿಜವಾದಶಾಂತಿ ದೊರೆಯುವದಿಲ್ಲ. ಮನ ಸ್ಸೆಂಬ ಪಿಶಾಚಿಯು ಯಾವನನ್ನು ಹಿಡಿದು ಕೊಂಡಿರುವದೋ ಅವನನ್ನು ಸ್ನೇಹಿತರಾಗಲೀ ನೆಂಟರಾಗಲೀ ಗುರುಗಳಾಗಲೀ ಮತ್ತೆ ಯಾರಾಗಲೀ ರಕ್ಷಿಸಲಾರರು. ಕೂತುಕೊಳ್ಳುವ ಪದ್ಧತಿಯನ್ನೂ ಊಟದ ನಿಯಮವನ್ನೂ ಸಾಧಿಸಬೇಕೆಂದು ಹೇಳಿದೆವಷ್ಟೆ. ಕೂತುಕೊ ಳ್ಳುವ ಪದ್ಧತಿಯ ವಿಚಾರವಾಗಿ ಪತಂಜಲಿ ಋಷಿಗಳು ಮೂರು ಸೂತ್ರಗಳನ್ನು ಹೇಳಿರು-ತ್ತಾರೆ. ಎಷ್ಟು ಹೊತ್ತು ಬೇಕಾದರೂ ಆಯಾಸತೋರದಂತೆ ಕೂತುಕೊಳ್ಳುವವಕ್ಕೆ ಹೇಗೆ

ಕಾಲುಮಡಿಸಿಕೊಂಡರೆ ಅನುಕೂಲಿಸುವದೊ ಅದೇ ಅವನವನಿಗೆ ತಕ್ಕ ಪದ್ಧತಿಯೆಂದೊಂದು ಸೂತ್ರವು ಹೇಳುವುದು. ಇತರ ಪ್ರಯತ್ನಗಳನ್ನು ಕಡಮೆ ಮಾಡುವುದರಿಂದಲೂ ಅನಂತ ಸ್ವರೂಪವನ್ನು ಧ್ಯಾನಿಸುವದರಿಂದಲೂ ಬಹುಹೊತ್ತು ಕದಲದೆ ಕೂತುಕೊಳ್ಳುವುದಕ್ಕಾ-ಗುತ್ತೆಂದು ಇನ್ನೊಂದು ಸೂತ್ರವು ಹೇಳುವುದು. ಹೀಗೆ ಬಹಳಹೊತ್ತು ಕದಲದೆ ಕೂತುಕೊಳ್ಳುವುದರಿಂದ ಸುಖದುಃಖ ಮೊದಲಾದವುಗಳ ತೊಂದರೆಯಾಗದೆ ಇರ ಬೇಕೆಂದು ಮತ್ತೊಂದು ಸೂತ್ರವು ಹೇಳುವುದು. ಕೂತುಕೊಳ್ಳುವ ರೀತಿಗಳಲ್ಲಿ ಪದ್ಮಕ, ಮತ್ತು ಸ್ವಸ್ತಿಕ ಮೊದಲಾದ ಎಷ್ಟೋ ಬಗೆಗಳಿವೆ. ಯಾವ ಮನುಷ್ಯನಿಗೆ ಯಾವರೀತಿಯಲ್ಲಿ ಕುಳಿತುಕೊಂಡರೆ ಕೈಕಾಲುಗಳಲ್ಲಿ ನೋವು ತೋರದಂತೆಯೂ ಮೈ ಕದಲದಂತೆಯೂ ಇರುವದಕ್ಕಾಗುವದೋ ಅವನಿಗೆ ಅದೇ ಪದ್ಧತಿಯು ಒಳ್ಳೆಯದು. ಒಂದೇ ರೀತಿಯಲ್ಲಿ ಬಹುಹೊತ್ತು ಕುಳಿತುಕೊಳ್ಳಬೇಕೆಂಬ ಮನುಷ್ಯನು ಇನ್ನೆಲ್ಲಿಗಾದರೂ ಹೋ-ಗಬೇಕೆಂಬ ಚಪಲವನ್ನೂ ಮನೆಕೆಲಸಗಳ ಯೋಚನೆಯನ್ನೂ ತೀರ್ಥಯಾತ್ರೆ, ಸ್ನಾನ, ಯಾಗ, ಹೋಮ, ಮೊದಲಾದ ಗಡಿಬಿಡಿಗಳನ್ನೂ ಹಚ್ಚಿಕೊಳ್ಳಲಾರನು. ಇವುಗಳ ಉತ್ಸಾಹವೇನಾದರೂ ಮನಸ್ಸಿಗೆ ಹತ್ತಿತೆಂದರೆ ಅದು ಬಲಾತ್ಕಾರದಿಂದ ದೇಹವನ್ನು ಎಬ್ಬಿಸಿ ಅತ್ತಿತ್ತ ಹರಿದಾಡುವಂತೆ ಮಾಡುವದು. ಇನ್ನು ಅನಂತಸ್ವರೂಪವನ್ನು ಧ್ಯಾನಿಸುವದೆಂದರೆ ಸಾವಿರ ಹೆಡೆಗಳಿಂದ ಭೂಮಂಡಲವನ್ನೆಲ್ಲಾ ಹೊತ್ತುಕೊಂಡು ಅತ್ತಿತ್ತ ಅಲ್ಲಾಡದೆ ಇರು-ವಂಥ ಆದಿಶೇಷನೇ ನಾನೆಂದು ಭಾವಿಸುತ್ತ ಮನಸ್ಸನ್ನು ಆ ಆದಿಶೇಷನಲ್ಲಿಯೇ ಇಡುವು-ದು. ಹೀಗೆ ಮಾಡುತ್ತಬಂದರೆ ಎಷ್ಟು ಹೊತ್ತು ಬೇಕಾದರೂ ಒಂದೇ ರೀತಿಯಲ್ಲಿ ಕೂತಿರುವುದಕ್ಕೆ ಬರುತ್ತದೆ. ಹೀಗೆ ಕೂತಿರುವುದಕ್ಕೆ ಬಂದಮೇಲೆ ಶೀತೋಷ್ಣ ಮೊದಲಾದ ದ್ವಂದ್ವಗಳಿಂದ ಮೊದಲನಂತ ತೊಂದರೆಯಾಗದೆ ಇರುವಂಥ ಸ್ಥಳದಲ್ಲಿ ಕುಳಿತುಕೊಳ್ಳ-ಬೇಕು. ಅಂಥ ಸ್ಥಳವೆಂದರೆ ಅಲ್ಲಿ ಇನ್ನೊಬ್ಬರಿರಬಾರದು. ನೆಲವು ತಗ್ಗು ತಿಟ್ಟುಗಳ-ಲ್ಲದೆ ಇರಬೇಕು, ಶುದ್ಧವಾಗಿರಬೇಕು. ಸಣ್ಣಕಲ್ಲು, ಬೆಂಕಿ, ಮರಳು, ಇವುಗಳಿರಬಾರದು; ಬಹಳ ಗದ್ದಲ ವಿರಬಾರದು, ಕೆರೆ ಮೊದಲಾದವುಗಳಿರಬಾರದು, ಮನಸ್ಸಿಗೆ ಸಂತೋಷ ವಾಗುವಂತೆ ಇರಬೇಕು, ಕಣ್ಣಿಗೆ ಬಾಧೆಯಾಗುವುದೇನೂ ಇರಬಾರದು, ಇಂಥ ಸ್ಥಳ-ದಲ್ಲಿ ಹೆಚ್ಚುಗಾಳಿ ಇಲ್ಲದ ಗವಿಯಲ್ಲಿ ಅಭ್ಯಾಸ ಮಾಡಬೇಕು, ಎಂದು ಶ್ರುತಿ ಇರುವದು.

ಊಟದ ನಿಯಮವೆಂದರೆ:—ಎಷ್ಟುಬೇಕೋ ಅಷ್ಟನ್ನೇ ಉಣ್ಣುವುದು. ಯೋಗಿ ಯಾದವನು ಎಂದಿಗೂ ಹೆಚ್ಚಾಗಿ ಉಣ್ಣಬಾರದೆಂದೂ ಊಟವನ್ನು ಬಿಡಲೂ ಬಾರದೆಂದೂ ಶ್ರುತಿಯು ಹೇಳುವದು. ಹೀಗೆ ಹೆಚ್ಚಾಗಿ ಉಣ್ಣುವವರಿಗೂ ಊಟವನ್ನೇ ಬಿಡುವವರಿಗೂ ಮಾತ್ರವೇ ಅಲ್ಲದೆ ಹೆಚ್ಚಾಗಿ ನಿದ್ರೆಮಾಡುವವರಿಗೂ ಹೆಚ್ಚಾಗಿ ನಿದ್ರೆಗೆಡುವವರಿಗೂ ಕೂಡ ಮನಸ್ಸು ಸಮತ್ವಕ್ಕೆ ನಿಲ್ಲುವದಿಲ್ಲವೆಂದೂ, ಎಷ್ಟುಬೇಕೋ ಅಷ್ಟು ಉಂಡು ಎಷ್ಟು ಅಗ ತ್ಯವೋ ಅಷ್ಟು ಓಡಾಟವನ್ನು ಮಾತ್ರ ಇಟ್ಟುಕೊಂಡು ಎಷ್ಟೋ ಅಷ್ಟು ಕೆಲಸವನ್ನು

ಮಾಡಿಕೊಂಡು ಎಷ್ಟೋ ಅಷ್ಟು ನಿದ್ರೆ ಎಷ್ಟೋ ಅಷ್ಟು ಜಾಗರಣೆ ಹೀಗಿರುವವರಿಗೆ ಮನಸ್ಸು ಸಮತ್ವಕ್ಕೆ ನಿಂತು ದುಃಖವನ್ನು ಕಳೆಯುವುದೆಂದು ಶ್ರೀ ಕೃಷ್ಣನು ಹೇಳಿರನು. ಕೂತುಕೊಳ್ಳುವುದು ರೂಢಿಯಾದ ಮೇಲೆ ಪ್ರಾಣಾಯಾಮದಿಂದ ಮನೋನಾಶವಾಗುವುದೆಂದು ಶ್ವೇತಾಶ್ವತರದಲ್ಲಿ ಹೇಳಿದೆ. ಎದೆ, ಕತ್ತು, ತಲೆ, ಇವು ಮೂರೂ, ಒಂದೇ ಸಮವಾಗಿರುವಂತೆ ಶರೀರವನ್ನು ನೆಟ್ಟಗೆ ಇಟ್ಟು, ಮನಸ್ಸು, ಕಣ್ಣು, ಮೊದಲಾದ ಇಂದ್ರಿಯಗಳನ್ನು ಬಿಗಿಹಿಡಿದು ಓಂಕಾರವನ್ನೇ ತೆಪ್ಪವನ್ನು ಮಾಡಿಕೊಂಡು ಸಂಸಾರವೆಂಬ ನದಿಯ ಭಯವನ್ನುಂಟುಮಾಡುತ್ತಿರುವ ಪ್ರವಾಹಗಳನ್ನೆಲ್ಲ ದಾಟಬೇಕು. ಹೀಗೆಂದು ಆ ಶ್ರುತಿಯ ತಾತ್ಪರ್ಯವಾಗಿರುವದು. ವಿದ್ಯೆಯ ಮದವೇ ಮೊದಲಾದ ಆಸುರ-ಸಂಪತ್ತಿನಿಂದ ಕೂಡಿರುವವನೊಬ್ಬ ಯೋಗಿ, ಅದಿಲ್ಲದೆ ಇರುವವನೊಬ್ಬ; ಹೀಗೆ ಯೋಗಿಗಳಲ್ಲಿ ಎರಡುಬಗೆ. ಆಸುರ ಸಂಪತ್ತಿಲ್ಲದವರಿಗೆ ಬ್ರಹ್ಮಧ್ಯಾನದಿಂದ ಮನಸ್ಸು ವಶವಾಗಲು ಅದರೊಡನೆ ಉಸಿರೂ ಸ್ವಾಧೀನವಾಗುತ್ತದೆ. ಅವನ ವಿಷಯವಾಗಿ ಮೇಲಿನ ಶ್ರುತಿಯು ಹೊರಟಿರುವುದು. ಆಸುರಸಂಪತ್ತಿನಿಂದ ಕೂಡಿರುವಾತನಿಗೆ ಪ್ರಾಣಾಯಾಮದಿಂದ ಮನಸ್ಸು ವಶವಾಗುತ್ತದೆ. ಅವನಿಗೋಸ್ಕರ ಉಸಿರನ್ನೂ ತಡೆಯುತ್ತ ಮಿತಿಯಿಂದ ಆಹಾರ ವಿಹಾರಗಳನ್ನೂ ಮಾಡುತ್ತ ಧ್ಯಾನಕಾಲದಲ್ಲಿ ಮೆಲ್ಲಗೆ ಮೂಗಿನಿಂದಲೆ ಉಸಿರನ್ನು ಬಿಡಬೇಕು. ತುಂಟ ಕುದುರೆಗಳ ಗಾಡಿಯನ್ನು ನಿಲ್ಲಿಸಿಕೊಳ್ಳುವಂತೆ ಮನಸ್ಸನ್ನು ಬಿಗಿಹಿಡಿಯಬೇಕು, ಎಂದು ಶ್ರುತಿ ಹೇಳುತ್ತದೆ. ಉಸಿರಾಡುವುದನ್ನು ಹೇಗೆ ತಡೆದುಕೊಳ್ಳಬೇಕೆಂಬುದು ಈಗ ಹೇಳಲಾಗುವುದು. ಅದರಂತೆ ತಡೆದುಕೊಳ್ಳುತ್ತ ಬಂದರೆ ಅವನು ಎಷ್ಟೋ ಅಷ್ಟು ಕರ್ಮಗಳನ್ನು ಮಾತ್ರ ಮಾಡುವಂಥವನಾಗುತ್ತಾನೆ; ಅವನ ಮನಸ್ಸಿನ ಹರಿದಾಟವೂ ಕಡಮೆ ಯಾಗುತ್ತದೆ. ನಾನೇಬಲ್ಲವರ ಬಲ್ಲಿದನೆಂಬ ಮುಂತಾದ ಸೊಕ್ಕೆಲ್ಲಾ ಇಳಿಯುತ್ತದೆ. ಪರ್ವತದಲ್ಲಿ ಸಿಕ್ಕುವ ಧಾತುಗಳನ್ನು ಬೆಂಕಿಯಲ್ಲಿಟ್ಟು ಕಾಸುವದರಿಂದ ಅದರ ಕೊಳೆಗಳೆಲ್ಲಾ ಹೋಗುವಂತೆ ಉಸಿರನ್ನು ಬಿಗಿಹಿಡಿಯುವದರಿಂದ ಇಂದ್ರಿಯಗಳು ಮಾಡಿದ ದೋಷಗಳೆಲ್ಲಾ ಹೋಗುವವೆಂದು ಶ್ರುತಿಯು ಹೇಳುತ್ತದೆ. ಉಸಿರಿನ ಹರಿದಾಟವೇ ಮನಸ್ಸಿನ ಹರಿದಾಟವೆಂದೂ ಜಾಣರಾದವರು ಉಸಿರಿನ ಹರಿದಾಟವನ್ನು ಕಡಿಮೆ ಮಾಡುವುದಕ್ಕೆ ಪ್ರಯತ್ನಿಸಬೇಕೆಂದೂ ವಸಿಷ್ಠರೂ ಹೇಳಿರುವರು. ಮನಸ್ಸು, ನುಡಿ, ನೋಟ, ಮೊದಲಾದ ಇಂದ್ರಿಯಗಳ ದೇವತೆಗಳೆಲ್ಲಾ ಸೇರಿ ತಪ್ಪದೆ ತಮ್ಮ ತಮ್ಮ ಕೆಲಸಗಳನ್ನು ಯಾವಾಗಲೂ ಮಾಡುತ್ತಿರೋಣವೆಂದು ಒಂದು ವ್ರತವನ್ನು ಹಿಡಿದು ಕೊಂಡರು. ಕೊನೆಗೆ ಅವರೆಲ್ಲಾ ಆಯಾಸವೆಂಬ ಮೃತ್ಯುವಿನ ಬಾಯಿಗೆ ತುತ್ತಾಗಬೇಕಾಯಿತು. ಆಯಾಸವೆಂಬ ಮೃತ್ಯು ಉಸುರಿಗೆಮಾತ್ರ ಅಂಟು ಬೀಳಲಿಲ್ಲ. ಆದುದರಿಂದಲೆ ಉಸಿರು ಯಾವಾಗಲೂ ಆಡುತ್ತಲೇ ಇದ್ದರೂ ಅದಕ್ಕೆ ಆಯಾಸವೇ ಇಲ್ಲ. ಇದನ್ನು ನೋಡಿ ದೇವತೆಗಳೆಲ್ಲರೂ ಆ ಪ್ರಾಣವಾಯುವಿನ ಆಶ್ರಯವನ್ನು ಪಡೆದರಂತೆ. " ಈ ಪ್ರಾಣವಾಯು ಎಷ್ಟು ಓಡಾಡಿದರೂ ಆಯಾಸಗೊಳ್ಳುವದಿಲ್ಲವಾದಕಾರಣ ಇದು ನಮ್ಮೆಲ್ಲರಿಗಿಂತಲೂ ಹೆಚ್ಚಿನದು. ಆದ್ದರಿಂದ ನಾವೆಲ್ಲರೂ ಇದನ್ನು

ಆಶ್ರಯಿಸೋಣ, ಎಂದು ಇಂದ್ರಿಯ—ದೇವತೆಗಳೆಲ್ಲಾ ಮಾತಾಡಿಕೊಂಡು ಆ ಪ್ರಾಣ ವುದಿಲಲ್ಲಿ ಬಿದ್ದದ್ದರಿಂದ ಆ ಇಂದ್ರಿಯ ದೇವತೆಗಳಿಗೂ ಕೂಡ ಪ್ರಾಣವೆಂಬ ಹೆಸರೇ ಬಂ-ತು." ಎಂದು ವಾಜಸನೇಯರ ಶ್ರುತಿ ಇರುವದು. ಈ ಕಾರಣದಿಂದ ಇಂದ್ರಿಯಗಳೂ ಪ್ರಾಣವೆನಿಸಿಕೊಳ್ಳುವವು. ಏಕೆಂದರೆ:—ಅವುಗಳ ಆಟವೆಲ್ಲಾ ಪ್ರಾಣದ ಕೈಯೊಳಗೆ ಇದೆ. ಈ ವಿಷಯವು ಅಂತರ್ಯಾಮಿ-ಬ್ರಾಹ್ಮಣದಲ್ಲಿ ಸೂತ್ರಾತ್ಮನ ವಿಚಾರವಾದ ಉಪಾಸನೆಯಲ್ಲಿ ಬಂದಿದೆ. ಅದರ ಅಭಿಪ್ರಾಯವೇನೆಂದರೆ "ವಾಯುವೇ ಸೂತ್ರಾತ್ಮನು, ವಾಯುವಿ-ನಿಂದಲೇ ಈ ಲೋಕವೂ ಪರಲೋಕವೂ ಎಲ್ಲಾ ಪ್ರಾಣಿಗಳೂ ಒಂದಕ್ಕೊಂದು ಸಂಬಂಧಗೊಂಡಿರುವವು. ಆದುದರಿಂದಲೇ ಸತ್ತವನ ಶರೀರವನ್ನು ನೋಡಿ ಪ್ರಾಣಹೋಯಿತು, ಕೈ-ಕಾಲು ಸಡಿಲವಾದವು ಎನ್ನುತ್ತಾರೆ. ಏಕೆಂದರೆ ಅವೆಲ್ಲಾ ವಾಯುವಿನಿಂದಲೆ ಪೋಣಿಸಿಕೊಂಡಿರುತ್ತವೆ." ಆದಕಾರಣ ಉಸಿರಿನ ಹರಿದಾಟವೂ ಮನಸ್ಸಿನ ಹರಿದಾಟವೂ ಒಂದಕ್ಕೊಂದು ಜೊತೆಯಾಗಿಯೇ ಇರುವವು. ಹೀಗಿರುವದರಿಂದ ಉಸಿರನ್ನು ಬಿಗಿಹಿಡಿದರೆ ಮನಸ್ಸನ್ನು ಹಿಂದಕ್ಕೆ ಜಗ್ಗಿದಂತೆ ಆಗುವದು. "ಗಾಢನಿದ್ರೆಯಲ್ಲಿ ಉಸಿರು ಹರಿದಾಡುತ್ತಿದ್ದರೂ ಮನಸ್ಸು ತೆಪ್ಪಗಿರುವದಲ್ಲ!" ಎಂದರೆ ಆಗ ಮನಸ್ಸಿದ್ದರಲ್ಲವೆ ಅದು ತೆಪ್ಪಗಿರುವದು, ಅಥವಾ ಹರಿದಾಡುವುದು, ಆಗ ಮನಸ್ಸೆಂಬುದೇ ಇರುವುದಿಲ್ಲ. "ಉಸಿರು ಹೋಗಲು ಮೂಗಿನ ತುದಿಯಲ್ಲಿ ಉಸಿರು ಬಿಡಬೇಕೆಂಬ ಮಾತು ಹೇಗೆ ಒಪ್ಪುತ್ತದೆ! ಪ್ರಾಣಹೋಗಿ ಸತ್ತಿರುವವರಿಗೆ ಉಸಿರಾಡುವ ದೆಂಬುದೆಲ್ಲಿಯೂ ಇಲ್ಲ. ಅದರಂತೆ ಉಸಿರಾಡುತ್ತ ಬದುಕಿರುವವರಿಗೆ ಪ್ರಾಣವಿಲ್ಲವೆಂಬ ಮಾತೂ ಒಪ್ಪುವದಿಲ್ಲ." ಎಂದರೆ ಹಾಗಲ್ಲ. ಅದರವೇಗವು ಕಡಿಮೆಯಾದಷ್ಟು ಅದು ಹೋಯಿತೆಂದು ಹೇಳುವ ರೂಢಿ ಇದೆ. ಒಬ್ಬನು ನೆಲವನ್ನು ಅಗಿಯುವಾಗ ಅಥವಾ ಮರವನ್ನು ಕಡಿಯುವಾಗ ಅಥವಾ ಬೆಟ್ಟವನ್ನು ಹತ್ತುವಾಗ ಅಥವಾ ಬೇಗ ಬೇಗ ಓಡುವಾಗ ಉಸಿರು ಎಷ್ಟು ವೇಗವಾಗಿ ಹೋಗುತ್ತಿರುವದೋ ಅಷ್ಟುವೇಗವು ಸುಮ್ಮನೆ ನಿಂತಿರುವವನಲ್ಲಿ ಅಥವಾ ಕುಳಿತಿರುವವನಲ್ಲಿ ಇರುವುದಿಲ್ಲ. ಹಾಗೆಯೇ ಪ್ರಾಣಾಯಾಮವನ್ನು ಮಾಡಿ ಮಾಡಿ ಅಭ್ಯಾಸವಾಗಿರುವವರಿಗೆ ಉಸಿರಿನ ಓಟವು ಹಿಂದುಬಿದ್ದಿರುತ್ತದೆ. ಈ ಅಭಿಪ್ರಾಯದಿಂದಲೆ ಶ್ರುತಿಯು ಮೆಲ್ಲ ಮೆಲ್ಲಗೆ ಉಸಿರಾಡುವವರಾಗಬೇಕೆಂದು ಹೇಳುತ್ತದೆ. ತುಂಟ ಕುದುರೆಗಳನ್ನು ಕಟ್ಟಿರುವ ಗಾಡಿಯು ದಾರಿಯನ್ನು ಬಿಟ್ಟು ಎಲ್ಲಿಗೋ ಹೋಗುವಂತೆಯೂ ಆ ಗಾಡಿಯವನು ಕಡಿವಾಣಗಳನ್ನು ಜಗ್ಗಿ ಕುದುರೆಯನ್ನು ಮತ್ತೆ ಹಾದಿಗೆ ತಂದು ಬಿಡುವಂತೆಯೂ ಇಂದ್ರಿಯಗಳಿಂದಲೂ ವಾಸನೆಗಳಿಂದಲೂ ಕಂಡ ಕಂಡ ಕಡೆಗೆ ನುಗ್ಗುವ ಮನಸ್ಸನ್ನು ಪ್ರಾಣವಾಯುವೆಂಬ ಕಡಿವಾಣದಿಂದ ಜಗ್ಗಿದರೆ ನಮಗೆ ವಶವಾಗುವದು.

ಉಸಿರನ್ನು ತಡೆದುಕೊಳ್ಳುವ ರೀತಿಯ ವಿಚಾರದಲ್ಲಿ ಮತ್ತೊಂದು ಶ್ರುತಿಯು ಹೇಳಿರುವುದೇನೆಂದರೆ-ಉಸಿರನ್ನು ಬಿಗಿಹಿಡಿದು ವ್ಯಾಹೃತಿ, ಪ್ರಣವ ಮತ್ತು ಶಿರಸ್ಸಿನಿಂದ ಕೂಡಿದ ಗಾಯತ್ರಿಯನ್ನು ಮನಸ್ಸಿನಲ್ಲಿ ಮೂರುಬಾರಿ ಅನುಕೊಂಡರೆ ...

ಪ್ರಾಣಾಯಾಮವಾಯಿತು. ಪ್ರಾಣಾಯಾಮದಲ್ಲಿ ರೇಚಕ, ಪೂರಕ, ಮತ್ತು ಕುಂಭಕ, ಎಂದು ಮೂರು ಕೆಲಸಗಳಿವೆ. ಒಳಗಿರುವ ಗಾಳಿಯನ್ನೆಲ್ಲಾ ಹೊರಕ್ಕೆ ಹೊರಡಿಸಿ ಒಳಗೆಲ್ಲಾ ಬರಿದಾಗುವಂತೆ ಮಾಡುವದು ರೇಚಕದ ಲಕ್ಷಣ. ಕಮಲದ ದಂಟಿನ ಕೊಳವೆಯನ್ನು ಬಾಯಿಗಿಟ್ಟುಕೊಂಡು ಅದರಿಂದ ನೀರನ್ನು ಹೀರುವಂತೆ ಉಸಿರನ್ನು ಒಳಕ್ಕೆ ಸೆಳೆದುಕೊಳ್ಳಬೇಕು. ಇದು ಪೂರಕದ ಲಕ್ಷಣ. ಒಳಕ್ಕೂ ಸೆಳೆದುಕೊಳ್ಳದೆ ಹೊರಕ್ಕೂ ನುಗ್ಗಗೊಡದೆ ವೃತ್ತಿಗಳನ್ನು ಕದಲಿಸದೆ ಇರುವದು ಕುಂಭಕದ ಲಕ್ಷಣ." ಕುಂಭಕವು ಒಳಗಣ ಕುಂಭಕ ಹೊರಗಣ ಕುಂಭಕ ಎಂಬೆರಡು ಬಗೆ ಎಂದು ವಸಿಷ್ಠರು ಹೇಳಿರುವರು. ಒಳಕ್ಕೆ ತೆಗೆದುಕೊಂಡಗಾಳಿ ಒಳಗೇ ನಿಂತು ಹೊರಕ್ಕೆ ಬರದೆ ಇರುವವರೆಗೂ ಆಗುವ ಕುಂಭಕವು ಒಳಗಣ ಕುಂಭಕ. ಹೊರಕ್ಕೆ ಬಿಟ್ಟಗಾಳಿ ಹೊರಗೇನಿಂತು ಒಳಕ್ಕೆ ಹೋಗದೆ ಇರುವವರೆಗೂ ಆಗುವ ಕುಂಭಕವು ಹೊರಗಣ ಕುಂಭಕ. ಉಸಿರು ಹೊರಕ್ಕೆ ಬರಬೇಕೆಂಬ ತವಕವು ಒಳಗಣ ಕುಂಭಕವನ್ನು ಕೆಡಿಸುವದು. ಉಸಿರು ಒಳಕ್ಕೆ ಹೋಗಬೇಕೆಂಬ ತವಕವು ಹೊರಗಣ ಕುಂಭಕವನ್ನು ಕೆಡಿಸುವದು. ವೃತ್ತಿಗಳ ಅಲ್ಲಾಟವು ಎರಡು ಕುಂಭಕಗಳನ್ನೂ ಕೆಡಿಸುವದು. ವೃತ್ತಿಗಳು ಅಲ್ಲಾಡುವದರಿಂದ ಗಾಳಿ ಒಳಕ್ಕಾದರೂ ತೂರಬೇಕೆನ್ನುವದು. ಅಥವಾ ಹೊರಕ್ಕಾದರೂ ನುಸಿಯ ಬೇಕೆನ್ನುವುದು. ಅದುದರಿಂದಲೇ ಪತಂಜಲಿಗಳು ಅತ್ತಿತ್ತ ಅಲ್ಲಾಡದಂತೆ ಕೂತುಕೊಳ್ಳುವದಕ್ಕೆ ಬಂದಮೇಲೆಯೇ ಪ್ರಾಣಾಯಾಮವನ್ನುಪದೇಶಿಸುವರು. ಪ್ರಾಣಾಯಾಮ ವೆಂದರೇನು? ಉಸಿರನ್ನು ಒಳಕ್ಕೂ ತೆಗೆದುಕೊಳ್ಳದೆ ಹೊರಕ್ಕೂ ಬಿಡದೆ ಇರುವದು. ಕುಂಭಕದಲ್ಲಿ ಮಾತ್ರ ಉಸುರಿನ ಹರಿದಾಟವು ನಿಂತಿರುವದೇ ಹೊರತು ಕುಂಭಕವನ್ನು ಬಿಡುತ್ತಲೆ ಎಂದಿನಂತೆ ಉಸಿರಿನ ಹರಿದಾಟವಿದ್ದೇ ಇರುವದಲ್ಲ! ಎಂದರೆ ಹೆಚ್ಚಾಗಿ ಅಭ್ಯಾಸ ಮಾಡಿದರೆ ಆ ಉಸಿರು ಮೊದಲು ಸಾಮಾನ್ಯವಾಗಿ ಎಷ್ಟು ದೂರ ಹರಿದು ಹೋಗುತ್ತಿತ್ತೋ ಅದಕ್ಕಿಂತ ಕಡಿಮೆಯಾಗುತ್ತದೆ. ಉಸಿರು ಬಿಡುವಿಕೆ ಉಸಿರೆಳೆದುಕೊಳ್ಳುವಿಕೆ ಮತ್ತು ಉಸಿರಾಡದೆ ಇರುವಿಕೆ ಇವುಗಳ ಪ್ರಮಾಣವು ಎಷ್ಟು ಹಿಗ್ಗಿತು, ಅಥವಾ ಎಷ್ಟು ಕುಗ್ಗಿತು, ಎಂಬುದನ್ನು ಪರೀಕ್ಷೆ ಮಾಡಿ ನೋಡಬೇಕು. ಅವುಗಳಲ್ಲಿ ಪ್ರತಿಯೊಂದನ್ನೂ ಸ್ಥಾನ ಮೊದಲಾದವುಗಳನ್ನು ಗೊತ್ತುಮಾಡಿಕೊಳ್ಳಬೇಕು ಹೇಗೆಂದರೆ ಸಾಮಾನ್ಯವಾಗಿ ನಾವು ಬಿಡುವ ಉಸಿರು ಹೃದಯದಿಂದ ಹೊರಟು ಮೂಗಿನ ತುದಿಯ ಮುಂದೆ ಹನ್ನೆರಡಂಗುಲದವರೆಗೆ ಹೋಗಿ ಅಲ್ಲಿ ಮುಗಿಯುತ್ತದೆ. ಕ್ರಮಕ್ರಮವಾಗಿ ಅಭ್ಯಾಸಮಾಡಿದರೆ ಆ ಉಸಿರು ಹೊಕ್ಕಳಿನ ಸ್ಥಳದಿಂದಲೋ ಅಥವಾ ಇನ್ನೂ ಅದಕ್ಕಿಂತ ಕೆಳಗಿನ ಸ್ಥಳದಿಂದಲೋ ಹೊರಟು ಇಪ್ಪತ್ತನಾಲ್ಕು ಅಂಗುಲದವರೆಗೆ ಕೊನೆಗೆ ಮೂವತ್ತಾರು ಅಂಗುಲದವರೆಗೆ ಕೂಡ ಹೋಗಿ ಅಲ್ಲಿ ಮುಗಿಯುತ್ತದೆ. ಹೀಗೆ ಉಸಿರು ಬಿಡುವದಕ್ಕೆ ಹೆಚ್ಚಿನ ಪ್ರಯತ್ನವನ್ನು ಮಾಡಿದಾಗ ಹೊಕ್ಕಳು ಮುಂತಾದ ಯಾವಸ್ಥಳದಿಂದ ಹೊರಟಿತೋ ಆ ಸ್ಥಳಕ್ಕೆ ಅದು ತಾಕಿದಂತಾಗಿ ಇಂಥ ಸ್ಥಳದಿಂದ ಆ ಗಾಳಿ ಹೊರಟಿತೆಂದು ಒಳಗೆ ಗೊತ್ತಾಗುತ್ತದೆ.

ಇನ್ನು ಹೊರಗೆ ಅದು ಎಷ್ಟು ಹೋಯಿತೆಂಬುದನ್ನು ಹೊರಗಿನ [illegible] ಹಗುರವಾದ ಹತ್ತಿಯನ್ನು ಮುಂದೆ ಇಟ್ಟು ಅದು ಅಲ್ಲಾಡುವದರ ಮೇಲೆ ಗೊತ್ತು ಮಾಡಬಹುದು. ಇದು ಸ್ಥಾನ ಪರೀಕ್ಷೆಯಾಯಿತು. ಉಸಿರು ಬಿಡುವದರಲ್ಲಿ ಪ್ರಣವ ಜಪವೆಷ್ಟು ಹತ್ತಾಯಿತೊ ಇಪ್ಪತ್ತಾಯಿತೊ ಮೂವತ್ತಾಯಿತೊ ಅದರಮೇಲೆ ಕಾಲವನ್ನು ಗೊತ್ತುಮಾಡಿಕೊಳ್ಳಬೇಕು. ಈ ತಿಂಗಳಲ್ಲಿ ಪ್ರತಿದಿನವೂ ಹತ್ತು ರೇಚಕಗಳು ಮುಂದಿನ ತಿಂಗಳು ಇಪ್ಪತ್ತು ಅದರ ಮುಂದಿನ ತಿಂಗಳು ಮೂವತ್ತು ಹೀಗೆ ಬೆಳಸಿ ಅದರಿಂದ ಕಾಲಪ್ರಮಾಣವನ್ನೂ ಜಪಸಂಖ್ಯೆಯನ್ನೂ ಗೊತ್ತುಮಾಡಿ ಕೊಳ್ಳಬಹುದು. ಪೂರಕದ ಎಂದರೆ ಉಸಿರನ್ನು ಒಳಕ್ಕೆ ಸೆಳೆದು ಕೊಳ್ಳುವದರ ಪ್ರಮಾಣದ ಪರೀಕ್ಷೆಗೂ ಇದೇ ಉಪಾಯ. ಕುಂಭಕದಲ್ಲಿ ಅದು ಯಾವ ಸ್ಥಾನವನ್ನು ಮುಟ್ಟಿತೆಂಬುದೇನೂ ತಿಳಿಯ ಬರದಿದ್ದರೂ ಎಷ್ಟು ಹೊತ್ತು ಅದು ನಡೆಯಿತೆಂಬುದೂ ಅದರಲ್ಲಿ ಎಷ್ಟು ಜಪವಾಯಿತೆಂಬುದೂ ತಿಳಿಯುತ್ತದೆ. ಒಂದು ಚಿನ್ನದ ಗಟ್ಟಿ ಇರುತ್ತದೆ. ಅದನ್ನು ಸಾಗಬಡಿದರೆ ತೆಳ್ಳಗೂ ಹೆಚ್ಚು ಉದ್ದವಾಗಿಯೂ ಆಗುತ್ತದೆ. ಹಾಗೆಯೇ ಪ್ರಾಣವಾಯುವನ್ನು ಸ್ಥಾನ ಹೊತ್ತು ಮತ್ತು ಎಣಿಕೆ ಇವುಗಳಿಂದ ಬೆಳಸಿದರೆ ಉದ್ದವಾಗಿ ಅದರ ಇರುವಿಕೆ ಕೂಡ ಗೊತ್ತಾಗದಷ್ಟು ಸಣ್ಣಗೂ ಆಗುತ್ತದೆ. ಈ ರೇಚಕವೊದಲಾದ ಮೂರಕ್ಕಿಂತಲೂ ಬೇರೆಯಾದ ಇನ್ನೊಂದು ರೀತಿಯನ್ನು ಪತಂಜಲಿಗಳು ಹೇಳಿದ್ದಾರೆ. ಅದೇನೆಂದರೆ ತನ್ನ ಕೈಲಾದಷ್ಟು ಒಳಗಣ ಗಾಳಿಯನ್ನು ಎಲ್ಲಾ ಹೊರಕ್ಕೆ ಬಿಟ್ಟು ಆಮೇಲೆ ಹಾಗೆಯೇ ಹೊರಗೇ ಕುಂಭಕವನ್ನೂ ಮಾಡುವದು, ಹೊರಗಣ ಕುಂಭಕ. ಕೈಲಾದ ಮಟ್ಟಿಗೂ ಒಳಕ್ಕೆ ಗಾಳಿಯನ್ನು ಸೆಳೆದುಕೊಂಡು ಅಲ್ಲಿಯೇ ಕುಂಭಕವನ್ನು ಮಾಡುವದು ಒಳಗಣ ಕುಂಭಕ. ಇವೆರಡರಲ್ಲಿಯೂ ಗಾಳಿಯನ್ನು ಒಳಕ್ಕೆ ಸೆಳೆದುಕೊಳ್ಳುವ ಮತ್ತು ಹೊರಕ್ಕೆ ಬಿಡುವ ಕೆಲಸಗಳಿರುವವಷ್ಟೆ? ಒಳಕ್ಕೆ ಸೆಳೆದುಕೊಳ್ಳುವದರ ಕಡೆಗೂ ಹೊರಕ್ಕೆ ಬಿಡುವದರ ಕಡೆಗೂ ಲಕ್ಷ್ಯವನ್ನು ಕೊಡದೆ ಬರೀ ಕುಂಭಕವೊಂದನ್ನೇ ಅಭ್ಯಾಸ ಮಾಡುವದೊಂದು ನಾಲ್ಕನೇ ವಿಧ. ನಿದ್ರೆ, ಆಲಸ್ಯ ವೊದಲಾದ ಹೆಚ್ಚಿನ ದೋಷಗಳಿರುವವರಿಗೆ ರೇಚಕ, ಪೂರಕ, ಕುಂಭಕ, ಈ ಮೂರೂ ಬೇಕು. ಅಂಥಾ ದೋಷಗಳಿಲ್ಲದವನಿಗೆ ಈ ನಾಲ್ಕನೆಯ ಬಗೆಯೇ ಸಾಕು. ಹೀಗೆ ಪ್ರಾಣಾಯಾಮವನ್ನು ಮಾಡುವದ್ದರಿಂದ ಸತ್ವಗುಣವನ್ನು ತಳಕ್ಕೆ ಒತ್ತಿ, ನಿದ್ರೆ ಮತ್ತು ಆಲಸ್ಯಗಳನ್ನುಂಟುಮಾಡುವ, ತಮೋಗುಣವು ಹೋಗುವದೇ ಫಲ. ಇದಲ್ಲದೆ ಮನಸ್ಸನ್ನು ಜಗ್ಗಿ ಮೂಲಾಧಾರದಲ್ಲಿಯೋ ನಾಭಿ ಚಕ್ರದಲ್ಲಿಯೋ ಹೃದಯದಲ್ಲಿಯೋ ಹುಬ್ಬುಗಳ ಮಧ್ಯದಲ್ಲಿಯೋ ನಡುನೆತ್ತಿಯಲ್ಲಿಯೋ ಎಲ್ಲಿಯಾದರೊಂದು ಸ್ಥಳದಲ್ಲಿಟ್ಟು ನಿಲ್ಲಿಸುವುದಕ್ಕೂ ಬರುತ್ತದೆ. ಮನಸ್ಸನ್ನು ಎಲ್ಲಾ ಕಡೆಯಿಂದಲೂ ಹಿಂದಕ್ಕೆ ಜಗ್ಗಿ ಕೂಡಿಹಾಕಿಕೊಂಡು ಅದನ್ನು ಆತ್ಮಸ್ವರೂಪದಲ್ಲಿ ನಿಲ್ಲಿಸುವದೇ 'ಧಾರಣೆ' ಎಂದು ಶ್ರುತಿ ಇರುವದು. ಪ್ರಾಣಾಯಾಮವನ್ನು ಮಾಡಿ ರಜೋಗುಣದ ಚಟವಾದಂಥ ಮನಸ್ಸಿನ ಹರಿದಾಟವನ್ನೂ ತಮೋಗುಣದ ಪ್ರಭಾವವಾದ ಆಲಸ್ಯ ಮೊದಲಾದವುಗಳನ್ನೂ ಕಳೆದುಕೊಂಡ ಮನಸ್ಸು

ಈ ಬಗೆಯ ಧಾರಣೆಯನ್ನು ಮಾಡುವುದಕ್ಕೆ ತಕ್ಕದ್ದಾಗುವದು. ಮನಸ್ಸಿನ ನಾಶಕ್ಕೆ ಪ್ರಾಣಾಯಾಮವು ಹೇಗೋ ಹಾಗೆ ಗುರುಗಳು ಹೇಳಿಕೊಟ್ಟಿರುವ ಉಪಾಯವೂ ಒಂದು ಸಾಧನವೆಂದು ಹಿಂದೆ ಹೇಳಿದೆಯಷ್ಟೆ? ಈ ಯುಕ್ತಿಗಳೇನೆಂಬುದು ಯೋಗಾಭ್ಯಾಸವನ್ನು ಮಾಡುವವರಿಗೆಲ್ಲಾ ಗೊತ್ತಿರುವದು.

ಈ ರೀತಿಯಲ್ಲಿ ವೇದಾಂತವಿದ್ಯೆ, ಸಾಧುಗಳ ಸಹವಾಸ, ವಾಸನಾಕ್ಷಯ, ಪ್ರಾಣನಿರೋಧ ಇವುಗಳೆಲ್ಲಾ ಮನಸ್ಸನ್ನು ನಾಶಮಾಡುವದಕ್ಕೆ ಉಪಾಯಗಳು. ಈಗ ಮನೋನಾಶಕ್ಕೆ ಉಪಾಯ ಭೂತವಾದ ಸಮಾಧಿಯ ವಿಚಾರವನ್ನು ನೋಡೋಣ.

ಮನಸ್ಸಿಗೆ ಐದುಬಗೆಯ ಮೆಟ್ಟಲುಗಳಿರುತ್ತವೆ. ಅವುಗಳಲ್ಲಿ ಮೂರನ್ನು ಬಿಟ್ಟರೆ ಉಳಿದೆರಡೂ ಸಮಾಧಿಗಳು. ಆ ಐದು ಮೆಟ್ಟಲುಗಳು ಯಾವವೆಂಬುದನ್ನು ಯೋಗ ಭಾಷ್ಯಕಾರರು ಹೇಳಿದ್ದಾರೆ. ಕ್ಷಿಪ್ತ, ಮೂಢ, ವಿಕ್ಷಿಪ್ತ, ಏಕಾಗ್ರ, ನಿರುದ್ಧ, ಈ ಐದೂ ಮೆಟ್ಟಲುಗಳು. ಆಸುರಸಂಪತ್ತಾದಂಥ ಲೋಕವಾಸನೆ, ಶಾಸ್ತ್ರವಾಸನೆ, ಮತ್ತು ದೇಹವಾಸನೆಗಳಲ್ಲಿ ಮುಳುಗಿ ಹೋಗಿರುವ ಮನಸ್ಸು ಕ್ಷಿಪ್ತ. ನಿದ್ರೆಗೂ ಆಲಸ್ಯ-ಕ್ಕೂ ಒಳಗಾಗುವ ಮನಸ್ಸು ಮೂಢ. ಯಾವಾಗಲಾದರೂ ಒಂದೊಂದು ವೇಳೆ ಧ್ಯಾನವ-ನ್ನು ಪಡೆಯುವ ಮನಸ್ಸು ವಿಕ್ಷಿಪ್ತ ವೆನಿಸುವದು. ಕ್ಷಿಪ್ತವಾದ ಮತ್ತು ಮೂಢವಾದ ಮನಸ್ಸಿಗೆ ಸಮಾಧಿಯ ವಾಸನೆ ಕನಸಿನಲ್ಲಿಯೂ ಇಲ್ಲ. ವಿಕ್ಷಿಪ್ತದಲ್ಲಾಗುವ ಸಮಾಧಿ-ಯನ್ನೂ ಯೋಗವೆನಲಾಗದು. ಏಕೆಂದರೆ—ಇದರಲ್ಲಿ ನಡುನಡುವೆ ಮನಸ್ಸು ಬೇರೆ ಕಡೆಯೇ ಹೋಗುತ್ತಿರುವುದು. ಮನಸ್ಸು ಒಂದೇ ರೂಪವಾಗಿ ಇರುವ ತತ್ತ್ವವನ್ನು ತೋರಿಸಿ, ಅವಿದ್ಯೆ ಮೊದಲಾದ ಕ್ಲೇಶಗಳನ್ನು ಹೋಗಲಾಡಿಸಿ, ನಿರೋಧ ವೆಂಬುವಸ್ಥಿತಿಯ ಸಮೀಪಕ್ಕೆ ತರುವ ಏಕಾಗ್ರ ಸ್ಥಿತಿಗೆ ಸಂಪ್ರಜ್ಞಾತ ಸಮಾಧಿಯೆಂದು ಹೆಸರು. ಮನಸ್ಸು ವೃತ್ತಿಯನ್ನೇ ಪಡೆಯದಂತೆ ತಡೆದುಬಿಟ್ಟರೆ ಅದು ಅಸಂಪ್ರಜ್ಞಾತ ಸಮಾಧಿ. ಸಂಪ್ರಜ್ಞಾತ ಸಮಾಧಿಯಲ್ಲಿ ಮನಸ್ಸಿನ ಏಕಾಗ್ರತೆಯ ಪರಿಣಾಮ ವೆಷ್ಟಾಗಿರುವದೆಂದರೆ—ಮನಸ್ಸು ಹಿಂದಿನ ವೃತ್ತಿಯಲ್ಲಿ ಯಾವ ಪದಾರ್ಥವನ್ನು ಹಿಡಿದಿತ್ತೋ ಮುಂದಿನ ವೃತ್ತಿಯಲ್ಲಿಯೂ ಅದೇ ಪದಾರ್ಥವನ್ನು ಹಿಡಿಯುತ್ತ ಅಖಂಡವಾದ ಒಂದೇ ವೃತ್ತಿಯಾಗಿರುವದು. ಇದನ್ನೇ ಏಕಾಗ್ರತೆ ಯೆನ್ನಬೇಕು. ಏಕಾಗ್ರತೆಯು ಬೆಳೆಯಬೇಕಾದರೆ ಮನಸ್ಸು ಕಂಡಕಂಡ ಪದಾರ್ಥಗಳನ್ನು ಹಿಡಿಯದೆ ಒಂದನ್ನೇ ಹಿಡಿಯಬೇಕು. ರಜೋಗುಣದ ಏಳಿತಕ್ಕೆ ಸಿಕ್ಕುತ್ತಲೇ ಮನಸ್ಸು ಸಿಕ್ಕಿ ಸಿಕ್ಕಿದ ಪದಾರ್ಥಗಳನ್ನೆಲ್ಲಾ ಗ್ರಹಿಸುವದಕ್ಕೆ ತವಕಿಸುವದು. ಆ ರಜೋಗುಣವನ್ನು ಹಿಮ್ಮೆಟ್ಟಿಸುವುದಕ್ಕೆ ಯೋಗಿಯು ಹೆಚ್ಚು ಹೆಚ್ಚು ಪ್ರಯತ್ನವನ್ನು ಮಾಡುತ್ತ ಬಂದಹಾಗೆಲ್ಲಾ ದಿನದಿನಕ್ಕೆ ಅದರ ಹರಿದಾಟವು ನಿಂತು ಮನಸ್ಸು ಒಂದೇಕಡೆ ನಿಲ್ಲುವದು. ಮನಸ್ಸಿನ ಈ ಪರಿಣಾಮಕ್ಕೇ ಸಮಾಧಿಯೆಂದು ಹೆಸರು. ಈ ಸಮಾಧಿಗೆ ಎಂಟಂಗಗಳಿವೆ. ಇವುಗಳಲ್ಲಿ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ ಎಂಬ ಐದೂ ಹೊರಗಿನ ಅಂಗಗಳು; ಯಾವ ಪ್ರಾಣಿಯನ್ನೂ ನೋಯಿಸದಿರುವದು,

ಸೇದಾದ ಮನಸ್ಸನು ಅನಾತ್ಮ ಸ್ವರೂಪಗಳಾದ ರೂಪ ಮತ್ತು ಶಬ್ದ ಮೊದಲಾದ-
ಗಳ ಕಡೆಗೆ ಓಡದಂತೆ ಹಿಂದಕ್ಕೆ ತರುಬಿ ಅಟ್ಟಿಕೊಂಡು ಬಂದು
ಇಂದ್ರಿಯ... ಮನಸ್ಸನ್ನೂ ಆತ್ಮಸ್ವರೂಪದ ಒಂದು
...ವೆಂದು ... ಪ್ರತ್ಯಾಹಾರವೆಂದು ಶ್ರುತಿಯು ಹೇಳುವದು. ಹೀಗೆ
ಪ್ರತ್ಯಾಹಾ... ...ವದರಿಂದ ಇಂದ್ರಿಯಗಳು ಸಂಪೂರ್ಣವಾಗಿ ವಶವಾಗಿ
... ...ಪಾ ನಾಭಿದೇಶ ಮೊದಲಾದ ಒಂದೊಂದು ಕಡೆಗಳಲ್ಲಿ
ಮನಸ್ಸ... ...' ಅಲ್ಲಿ ಎಡೆಬಿಡದೆ ಒಂದೇವೃತ್ತಿಯನ್ನಿಟ್ಟುಕೊಂಡಿರು-
ವೇ ಧ್ಯಾ... ...ಯಾವ ರೂಪವೂ ಇಲ್ಲದೆ ಅದರ ಅರ್ಥವು ಮಾತ್ರ
...ರುತ್ತಿದ್ದರೆ ... ...ನಿಸುವದು. ಎಲ್ಲಾ ವಸ್ತುವನ್ನು ಗ್ರಹಿಸುತ್ತಿರುವುದೇ
ಮನಸ್ಸಿನ ಸ್ವಭಾವ... ...ದು ಕಂಡಕಂಡ ಬೇರೆಬೇರೆ ವಸ್ತುಗಳನ್ನು ಹಿಡಿಯುವುದನ್ನು
...ಟ್ಟು ತನ್ನನ್ನು ತಾನೇ ಹಿಡಿದುಕೊಂಡು ಕೂಡುವಂತೆ ಪ್ರಯತ್ನ ಮಾಡಬೇಕೆಂದು
ಶ್ರುತಿ ಇರುವದು. ಇದೇ ಒಂದು ಧಾರಣೆ. ಧ್ಯಾನದಲ್ಲಿ ಎಡೆಬಿಡದೆ ಒಂದೇ ವೃತ್ತಿಯಿರುವು
...ದರೆ ಮನಸ್ಸು ತತ್ತ್ವವೊಂದನ್ನೇ ಧ್ಯಾನಿಸುತ್ತಿರಬೇಕು. ಈ ಎಡೆಬಿಡದ ವೃತ್ತಿಯೆಂಬು-
ದರಲ್ಲಿ ಎರಡು ಬಗೆಗಳಿವೆ. ನಡುನಡುವೆ ಬಿಟ್ಟುಬಿಟ್ಟು ವೃತ್ತಿಯಾಗುತ್ತಿರುವದೊಂದುಬಗೆ.
ಒಂದೇವೃತ್ತಿ ಅಖಂಡವಾಗಿರುವದೊಂದುಬಗೆ. ನಡುನಡುವೆ ಬಿಟ್ಟುಬಿಟ್ಟು ವೃತ್ತಿಯಾ-
ಗುತ್ತಿರುವಿಕೆಯು ಧ್ಯಾನವೆನಿಸುವದು. ಒಂದೇವೃತ್ತಿ ಅಖಂಡವಾಗಿರುವದು ಸಮಾಧಿ
ಎನಿಸುವದು. ಸಮಾಗಮಾನುಭವಯೋಗಿಗಳು ಇವೆರಡರ ವಿಷಯವನ್ನು ಹೇಳಿರುತ್ತಾರೆ.
ಮನಸ್ಸು ಏಕಾಗ್ರವಾಗುವದರಿಂದ ಜ್ಞಾನವಾಗುವುದೆಂದು ಹೇಳುವರಷ್ಟೆ! ಅದಕ್ಕೆ ಧ್ಯಾನ-
ವೇ ಸಾಧನ. ಈ ಸೃಷ್ಟಿಯೆಲ್ಲಾ ಯಾವ ಕ್ರಮದಲ್ಲಿ ಲಯವಾಗುವದೋ ಆ ಕ್ರಮದಲ್ಲಿ
ತನ್ನ ಮನಸ್ಸಿನಿಂದ ಎಲ್ಲವನ್ನೂ ಲಯಮಾಡಿ ಅದಕ್ಕೆಲ್ಲಾ ಆಧಾರವಾದ ಸಚ್ಚಿದಾನಂದ
ಸ್ವರೂಪವೊಂದನ್ನುಳಿಸಿಕೊಂಡು ಅದನ್ನು ಚಿಂತಿಸುತ್ತಿರಬೇಕು. ನಾನೆಂಬ ಅರಿವು ಇಲ್ಲದೆ
ವೃತ್ತಿಯು ಒಂದೇ ಸಮವಾಗಿ ಬ್ರಹ್ಮಾಕಾರವಾಗಿದ್ದರೆ ಅದು ಸಂಪ್ರಜ್ಞಾತ ಸಮಾಧಿ.
ಧ್ಯಾನದ ಅಭ್ಯಾಸವು ಚನ್ನಾಗಿ ಬೆಳೆದರೆ ಈ ಸ್ಥಿತಿ ಬರುವದು. ಈ ವಿಷಯವನ್ನು ಭಗವ-
ತ್ಪಾದರೂ "ಯಾವದು ಸಾಕ್ಷಿಸ್ವರೂಪವಾಗಿಯೂ, ಆಕಾಶದಂತೆ ಇರುವುದಾಗಿಯೂ,
ಹುಟ್ಟುವಿಕೆಯೂ ಸಾಯುವಿಕೆಯೂ ಇಲ್ಲದಂಥಾದ್ದಾಗಿಯೂ, ಅಖಂಡ ವಾದು
ದಾಗಿಯೂ, ಇನ್ನೊಂದರ ಸೋಂಕು ಇಲ್ಲದಂಥಾದ್ದಾಗಿಯೂ, ಎಲ್ಲೆಲ್ಲಿಯೂ ತುಂಬಿ-
ಕೊಂಡಿರುವಂಥಾದ್ದಾಗಿಯೂ, ಎರಡನೆಯದಿಲ್ಲದೆ ತಾನೊಂದೇ ಇರುವುದಾಗಿಯೂ,
ಶುದ್ಧವಾಗಿಯೂ, ವಿಕಾರವನ್ನು ಪಡೆಯದೆ ಇರುವುದಾಗಿಯೂ, ನಿರ್ಮಲವಾಗಿಯೂ,
ತೃಪ್ತವಾಗಿಯೂ, ಇರುವದೋ ಆ ಓಂಕಾರ ವಾಚ್ಯಸ್ವರೂಪವೇ ನಾನು" ಎಂದು
ಉದಾಹರಿಸಿರುವರು. ಈ ಸಂಪ್ರಜ್ಞಾತ ಸಮಾಧಿಯು ಫಲರೂಪವಾಗಿ ತೋರುವದರಿಂದ
ಧ್ಯಾನದ ಮುಂದಿನ ಎಂಟನೇ ಅಂಗವಾದ ಸಮಾಧಿ ಎಂಬ ಸಾಧನದಲ್ಲಿ ಇದನ್ನು ಸೇರಿಸು-

ವದು ಹೇಗೆ ಒಪ್ಪೀತೆಂದರೆ ಅದೇನೂ ತಪ್ಪಲ್ಲ. ಅವುಗಳಲ್ಲೊಂದಕ್ಕೊಂದಕ್ಕೆ ಹೆಚ್ಚಿನ ಭೇದವೇನೂ ಇಲ್ಲ. ವೇದವನ್ನು ಪಾಠಮಾಡುವ ಬ್ರಹ್ಮಚಾರಿಯು ಅಲ್ಲಲ್ಲಿ ತಪ್ಪುತ್ತ ಮತ್ತೆ ಮತ್ತೆ ನೆನಪು ಮಾಡಿಕೊಂಡು ಮುಂದೆ ಸಾಗುತ್ತಾನೆ ಅದನ್ನು ಪಾಠಮಾಡಿದವನು ನಡುವೆ ತಪ್ಪದಂತೆ ಅದರಮೇಲೆ ಲಕ್ಷ್ಯವಿಟ್ಟುಕೊಂಡು ಹೇಳುತ್ತಾನೆ. ಆ ಪಾಠವನ್ನು ಹೇಳಿಕೊಡುವವನು ಅದರ ಕಡೆಗೆ ಲಕ್ಷ್ಯವನ್ನೇ ಇಡದೆ ಎಷ್ಟು ಅಲಕ್ಷ್ಯದಿಂದ ಹೇಳಿದರೂ ನಡುವೆ ತಡವರಿಸದೆ ಹೇಳಿಕೊಂಡು ಹೋಗುತ್ತಾನೆ. ಈ ಮೂರು ಜನಗಳು ಹೇಳಿದ್ದೂ ವೇದಪಾಠವೇ ಆದರೂ ಅವರವರ ರೂಢಿಯು ಹೆಚ್ಚು ಕಡಿಮೆಗಳ ಮೇಲೆ ಪಾಠವು ಬೇರೆ ಬೇರೆಯಾಗಿ ತೋರುವಂತೆ ಧ್ಯಾನ ಸಮಾಧಿ ಮತ್ತು ಸಂಪ್ರಜ್ಞಾತ ಇವುಗಳಲ್ಲಿ ತುಸು ತುಸು ಒಳಭೇದಗಳಿರುವವು. ಧಾರಣೆ, ಧ್ಯಾನ, ಸಮಾಧಿ ಇವು ಮನಸ್ಸಿಗೆ ಸಂಬಂಧಪಟ್ಟವುಗಳಾದುದರಿಂದ ಸಂಪ್ರಜ್ಞಾತ ಸಮಾಧಿಗೆ ಅಂತರಂಗ ಸಾಧನಗಳು. ಯಮ ಮೊದಲಾದ ಐದು ಬಹಿರಂಗ ಸಾಧನಗಳು. ಯಾವದಾದರೂ ಒಂದು ಪುಣ್ಯ ವಿಶೇಷದಿಂದ ಅಂತರಂಗ ಸಾಧನೆಗಳನ್ನೇ ಮೊದಲೇ ನಡಿಸುವದಕ್ಕಾಗಿ ಬಿಟ್ಟರೆ ಬಹಿರಂಗ ಸಾಧನಗಳಿಗಾಗಿ ಹೆಚ್ಚು ಕಷ್ಟಪಡಬೇಕಾದುದೇ ಇಲ್ಲ. ಸ್ಥೂಲಭೂತಗಳನ್ನೂ ಸೂಕ್ಷ್ಮ ಭೂತಗಳನ್ನೂ ಇಂದ್ರಿಯ ಮೊದಲಾದವುಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಸಾಧಿಸುವಂಥ ಸಂಪ್ರಜ್ಞಾತಗಳನ್ನೂ ಸವಿಕಲ್ಪಗಳನ್ನೂ ಪತಂಜಲಿ ಋಷಿಗಳು ಎಷ್ಟೋ ಬಗೆಯಲ್ಲಿ ವಿವರಿಸಿರುವರು. ಅವುಗಳೆಲ್ಲಾ, ಎದುರಿಗಿದ್ದೂ ಕಾಣದಂತಾಗುವದು ಮೊದಲಾದ ಸಿದ್ಧಿಗಳಿಗೆ ಮಾತ್ರ ಕಾರಣಗಳಾಗಿ, ಮುಕ್ತಿಗೆ ಸಾಧನವಾಗುವ ಸಮಾಧಿಯನ್ನು ಆಗಗೊಡದೆ ಇರುವದರಿಂದ, ನಾವು ಅವುಗಳ ಕಡೆಗೆ ಕಡೆಗಣ್ಣು ಕೂಡ ಹಾಕಬಾರದು. ಇವು ಸಮಾಧಿಗೆ ಅಡ್ಡಿಗಳೆಂದೂ ವ್ಯವಹಾರದಲ್ಲಿ ಸಿದ್ಧಿಗಳೆಂದೂ ಪತಂಜಲಿಗಳೇ ಹೇಳಿಬಿಟ್ಟಿರುವರಲ್ಲದೆ ದೇವತೆಗಳೇ ಮೊದಲಾದವರ ಮಾತುಗಳಿಗೆ ಮರುಳಾಗಬಾರದೆಂದೂ ಹಿಗ್ಗಬಾರದೆಂದೂ ಅವರ ಜತೆಗೆ ಬಿದ್ದರೆ ಮತ್ತೆ ಕೇಡಾಗುವ ಸಂಭವವುಂಟೆಂದೂ ಅವರೇ ಎಚ್ಚರಿಕೆಯನ್ನು ಕೊಟ್ಟಿರುವರು. ದೇವತೆಗಳು ಬಂದು ಕರೆದರೂ ಕೂಡ ಅವರನ್ನು ಕಡೆಗಣ್ಣಿಂದ ಕಂಡು ಉದ್ದಾಲಕನು ನಿರ್ವಿಕಲ್ಪಸಮಾಧಿಯನ್ನೇ ತಂದು ಕೊಂಡನೆಂದು ಕಥೆ ಇರುವದು. ಇದರ ವಿಚಾರದಲ್ಲಿಯೇ ಶ್ರೀರಾಮನಿಗೂ—ವಸಿಷ್ಠರಿಗೂ ಕೂಡ ಮಾತು ನಡೆದಿದೆ. ಆತ್ಮಜ್ಞಾನವನ್ನು ಪಡೆದು ಜೀವನ್ಮುಕ್ತರಾದವರಿಗೆ ಆಕಾಶದಲ್ಲಿ ಹಾರಾಡುವದೇ ಮೊದಲಾದ ಸಿದ್ಧಿಗಳೇಕಿಲ್ಲವೆಂದು ಶ್ರೀರಾಮನು ಕೇಳಿದನು. ಆಗ ವಸಿಷ್ಠರು “ ರಾಮ, ಅನಾತ್ಮವಿಚಾರದಲ್ಲಿ ತೊಳಲುವವನು ತನಗೆ ಮುಕ್ತಿ ಇಲ್ಲದಿದ್ದರೂ ಆಕಾಶದಲ್ಲಿ ಹಾರಾಡುವದೇ ಮೊದಲಾದ ಅಣಿಮಾದಿ ಸಿದ್ಧಿಗಳಿಗೆ ಬಾಯಿನೀರು ಸುರಿಸುವನು. ಈ ಸಿದ್ಧಿಗಳಿಂದಾಗುವ ಕೆಲಸವನ್ನು ದುಡ್ಡಿನ ಬಲದಿಂದಲೂ, ಹೆಚ್ಚು ಹೊತ್ತನ್ನು ಉಪಯೋಗಿಸಿಕೊಳ್ಳುವದರಿಂದಲೂ, ಯಂತ್ರ ಮೊದಲಾದ ಯುಕ್ತಿಯಿಂದಲೂ, ಯಾರು ಬೇಕಾದರೂ ಸಾಧಿಸಿ ಕೊಳ್ಳಬಹುದು. ಆತ್ಮಜ್ಞಾನಿಗೆ ಈ ವಿಷಯಗಳ ಮೇಲೆ ಮನಸ್ಸು ಹಾಯುವದೇ ಇಲ್ಲ. ಅವನ ಮನಸ್ಸೆಲ್ಲಾ

ತ್ಮಸ್ವರೂಪವನ್ನೇ ಗಟ್ಟಿಯಾಗಿ ಕಚ್ಚಿಕೊಂಡಿರುವದು. ಅವನಿಗೆ ತನ್ನ ಆನಂದವೇ ತನಗೆ ಸಾಕಾಗಿರುವದರಿಂದ ಅವನು ವಿಷಯಗಳ ಕಡೆಗೆ ಕೈ ನೀಡಬೇಕಾಗಿ ಬರುವದಿಲ್ಲ. ಏನೇನು ಜಗದ್ರೂಪವಾಗಿ ಕಾಣುತ್ತಿದೆಯೋ ಅದೆಲ್ಲಾ ಬರೀ ತೋರಿಕೆಯು ಮಾತ್ರದ್ದೆಂದು ಅವನಿಗೆ ಗೊತ್ತು. ಹೀಗಿರುವಾಗ ಅವನು ಅದರಲ್ಲಿ ಹೇಗೆ ಆಸಕ್ತನಾದಾನು? ಅವುಗಳು ಯಾವವೂ ಆತ್ಮ ಸಾಕ್ಷಾತ್ಕಾರಕ್ಕೆ ನೆರವಾಗುವದಿಲ್ಲ. ಅಂಥ ಬಯಕೆಗಳೆಲ್ಲಾ ಹೆಸರು ಕೂಡ ಇಲ್ಲ ದಂತೆ ಹೋದ ಮೇಲೆಯೇ ಅವನಿಗೆ ಆತ್ಮಜ್ಞಾನವಾಗಿರುತ್ತದೆ. ಅವನಿಗಿನ್ನು ಸಿದ್ಧಿಗಳ ಬಯಕೆ ಹೇಗೆ ಹುಟ್ಟೀತು? ಜಗತ್ತಿನ ಸ್ವರೂಪವಾಗಿರುವ ಯಾವದೂ ಆತ್ಮಜ್ಞಾನಿಯ ಮನಸ್ಸಿಗೆ ಸೊಗಸುವದಿಲ್ಲ. ಸೂರ್ಯನು ತಂಪಾದ ಕಿರಣಗಳುಳ್ಳವನಾದರೂ ಚಂದ್ರನು ಬಿಸಿಯಾದ ಕಿರಣಗಳುಳ್ಳವನಾದರೂ ಅಗ್ನಿಯು ಮೇಲಿನಿಂದ ಕೆಳಗಡೆಗೆ ಉರಿವರೂ ಜೀವನ್ಮುಕ್ತನಾದವನು ಇವುಗಳಿಗೆಲ್ಲಾ ಬೆರಗಾಗುವದಿಲ್ಲ. ಚಿದ್ರೂಪನಾದ ಆತ್ಮನಿಂದ ಈ ಶಕ್ತಿಗಳೆಲ್ಲಾ ಹೀಗೆ ಹೊರ ಹೊಮ್ಮುವವೆಂದು ಅವನು ಯಾವ ಆಶ್ಚರ್ಯವನ್ನೂ ಕುತೂಹಲದಿಂದ ನೋಡುವದಿಲ್ಲ. ಯಾವನು ಆತ್ಮಜ್ಞಾನಿಯಾದರೂ ಸಿದ್ಧಿಗಳನ್ನು ಬಯಸುವನೋ ಅವನು ಆ ಸಿದ್ಧಿಯಿಂದಾಗುವ ಕೆಲಸಗಳನ್ನು ನೆರವೇರಿಸುವಂಥ ಉಪ ಕರಣಗಳಿಂದ ತನ್ನ ಇಚ್ಛೆಯನ್ನು ತೀರಿಸಿಕೊಳ್ಳುವನು." ಎಂದು ಹೇಳಿರುವರು. ಆತ್ಮ ವಿಷಯವನ್ನೇ ಚಿಂತನೆ ಮಾಡುವಂಥ ಸಂಪ್ರಜ್ಞಾತ ಸಮಾಧಿಯು ವಾಸನಾ ಕ್ಷಯಕ್ಕೂ ನಿರೋಧ-ಸಮಾಧಿಗೂ ಕೂಡ ಸಾಧನವಾಗುವದರಿಂದ ಅದನ್ನು ಅಗತ್ಯವಾಗಿ ಆದರಿಸ ಬೇಕು.

ಇದುವರೆಗೆ ಮನಸ್ಸಿನ ನಾಲ್ಕು ಮೆಟ್ಟಲುಗಳ ವಿಚಾರವಾಯಿತು. ಈಗ ಐದನೇ ಮೆಟ್ಟಲಾದ ನಿರೋಧ-ಸಮಾಧಿಯ ವಿಷಯವನ್ನು ವಿಚಾರ ಮಾಡೋಣ. ಮನಸ್ಸು ಎದ್ದು ವೃತ್ತಿಗಳನ್ನು ಪಡೆಯುವದಕ್ಕೆ ಹೋಗಲರಿಯದೆ ಸುಮ್ಮನೆ ನಿಂತಿರುವಿಕೆಯು ನಮಗೆ ಬಂದರೆ ಅದೇ ನಾವು ಮನಸ್ಸನ್ನು ಬಿಗಿ ಹಿಡಿದುದರ ಫಲ. ಮನಸ್ಸು ಎದ್ದು ವೃತ್ತಿಗಳನ್ನು ಪಡೆಯಬೇಕೆಂಬ ತವಕವೆಲ್ಲಾ ಸಮಾಧಿಗೆ ತಡೆಗಳೇ ಆಗಿರುವವು. ಅವು ಉದ್ದಾಲಕನ ಸಮಾಧಿಯಲ್ಲಿ ತೋರ ಬಂದಿವೆ ನೋಡಿರಿ. ಮೇರು ಪರ್ವತದ ಶಿಖರದ ಮೇಲೆ ಹಾಯಾಗಿ ವಿಶ್ರಾಂತಿ ಗೊಳ್ಳುವ ಮೇಘದಂತೆ, ಎಂದು ತಾನು ಮನಸ್ಸನ್ನು ದಾಟಿ ಪರಮ ಪಾವನ ವಾದ ಸ್ಥಿತಿಯನ್ನು ಪಡೆದೇನೋ, ಎಂದು, ಉದ್ದಾಲಕನು ಮನಸ್ಸಿಗೆ ಬಲವಾದ ಚಿಂತೆ ಯನ್ನು ಹಚ್ಚಿಕೊಂಡು ಮತ್ತೆ ಮತ್ತೆ ಕುಳಿತು ಧ್ಯಾನದ ಅಭ್ಯಾಸವನ್ನು ಬೆಳೆಸಿಕೊಳ್ಳುತ್ತ ಬಂದನು. ಮನಸ್ಸು ಕಪಿಯಂತೆ ಚಪಲವಾಗಿದ್ದು ವಿಷಯಗಳ ಕಡೆಗೆ ಹರಿದು ಹೋಗು ತ್ತಿದ್ದುದರಿಂದ ಅವನು ನಿಜವಾದ ಸುಖವನ್ನು ಕೊಡುವಂಥ ಸಮಾಧಿಯನ್ನು ಜಪ್ಪಾಗಿ ಹಿಡಿದು ಕೊಳ್ಳುವದಕ್ಕೆ ಆಗಲಿಲ್ಲ. ಹೊರಗಣ ವಿಷಯಗಳನ್ನು ಹಾಗೂ ಹೀಗೂ ದೂರ ಮಾಡಿ ಇಂದ್ರಿಯಗಳನ್ನೆಲ್ಲಾ ಬಿಗಿಹಿಡಿದು ಕೊಳ್ಳುತ್ತಲೇ ಮನಸ್ಸೆಂಬ ಕಪಿಯು ಅವನ ಬಂದೆ ಲೆಕ್ಕವಿಲ್ಲದಷ್ಟು ವಿಷಯಗಳನ್ನು ತಂದು ಒಳಗೇ ಅಂಗಡಿಯನ್ನಿಡುತ್ತಿತ್ತು. ಅವ್ರ

ಗಳ ಉಪಟಳವನ್ನೆಲ್ಲಾ ತಡೆದುಕೊಂಡು ಬಹಿರ್ಮುಖನಾಗುತ್ತಲೇ ನಾನು ನಾನೆಂದು ನಾನಾ ವಿಷಯಗಳು ಮುಂದೆ ಬಂದು ನಿಲ್ಲುತ್ತಿದ್ದವು. ಹೀಗಾಗಿ ಒಂದೊಂದು ವೇಳೆ ಅವನ ಮನಸ್ಸು ಹಾರಾಡಿ ಹಾರಾಡಿ ಬಳಲಿ ಬೇಸತ್ತ ಹಕ್ಕಿಯ ಅವಸ್ಥೆಯನ್ನು ಅನುಭವಿಸುತ್ತಿತ್ತು. ಒಂದೊಂದು ವೇಳೆ ಅವನಿಗೆ ಆಗತಾನೆ ಹುಟ್ಟುತ್ತಿರುವ ಸೂರ್ಯನಂಥ ವಿಸ್ತಾರವಾದ ಬೆಳಕೂ ಒಂದೊಂದು ವೇಳೆ ಬರೀ ಬಯಲೂ ಒಂದೊಂದು ವೇಳೆ ದಟ್ಟವಾದ ಕತ್ತಲೆಯೂ ಕಾಣುತ್ತಿತ್ತು. ಹೀಗೆ ಅವ್ಯವಸ್ಥೆಯಿಂದ ಒಂದರ ಹಿಂದೊಂದು ವೃತ್ತಿ ವೃತ್ತಿ ಬಂದು ನಿಲ್ಲುವಂಥವುಗಳನ್ನೆಲ್ಲಾ, ಶೂರನು ಯುದ್ಧದಲ್ಲಿ ಶತ್ರುಗಳನ್ನು ಕತ್ತಿಯಿಂದ ಕತ್ತರಿಸುವಂತೆ, ಅವನು ಮನಸ್ಸಿನಿಂದ ಆ ವಿಕಲ್ಪಗಳನ್ನೆಲ್ಲಾ ಬೇರುಕಿತ್ತು ಹಾರಿಸಿ ಬಿಟ್ಟು ತನ್ನ ಹೃದಯಾಕಾಶದಲ್ಲಿ ಅಜ್ಞಾನವೆಂಬ ಕತ್ತಲೆಯಿಂದ ಮುಸುಕಿಕೊಂಡಿರುವ ವಿವೇಕವೆಂಬ ಸೂರ್ಯನನ್ನು ಕಂಡನು. ಮತ್ತು ಶುದ್ಧಜ್ಞಾನವೆಂಬ ಸೂರ್ಯನಿಂದ ಆ ಅಜ್ಞಾನವೆಂಬ ಕತ್ತಲೆಯನ್ನು ಇಲ್ಲದಂತೆ ಮಾಡಿ ತನ್ನೊಳಗೇ ತೇಜಃಪುಂಜವನ್ನು ನೋಡಿದನು. ಆ ಮೇಲೆ ಆನೆಯ ಮರಿಯು ಬಂದು ನೆಲದ ಮೇಲಿರುವ ಕಮಲದ ತೋಟವನ್ನು ನೆಲಸಮ ಮಾಡುವಂತೆ ಅವನು ಅದನ್ನೂ ಹೋಗಿಸಿ ಕೊಂಡನು. ಆ ತೇಜಸ್ಸೂ ಹಿಮ್ಮೆಟ್ಟದ ಮೇಲೆ ಆತ್ಮಸ್ವರೂಪವನ್ನೇ ಎಡೆಬಿಡದೆ ಹುಡುಕುವ ಆ ಮುನಿಯ ಮನಸ್ಸು ರಾತ್ರಿಯ ಹೊತ್ತಿನ ಕಮಲಗಳಂತೆ ನಿದ್ರೆಯನ್ನು ವಹಿಯಿತು. ಆಮೇಲೆ ಅದನ್ನು ಕಳೆದುಕೊಂಡು ಬಳಲು ಅವನಿಗೆ ಆಕಾಶಜ್ಞಾನವಾಯಿತು. ಅದೂ ಹೋಗಿ ಅವನಿಗೆ ಏನೂ ತೋರದಂತಾಯಿತು. ಮಹಾ ಪ್ರಯತ್ನಶಾಲಿಯಾದ ಅವನು ಅದನ್ನು ದೂರಮಾಡಿ ಕೊಂಡನು. ಆಗ ಅವನಿಗೆ ತಪಸ್ಸು ನಿದ್ರೆ ಮತ್ತು ಮೋಹ ಮೊದಲಾದವುಗಳೇನೂ ಇಲ್ಲದಂಥ ತೇಜಸ್ಸೊಂದು ಗೋಚರವಾಯಿತು. ಅದರಲ್ಲಿ ಅವನ ಮನಸ್ಸು ಸ್ವಲ್ಪ ಹೊತ್ತು ಹಾಯಾಗಿ ನಿಂತಿತು.

ಹೀಗೆ ಮನಸ್ಸು ವೃತ್ತಿಗಳನ್ನು ವಹಿಯಬೇಕೆಂದು ಏಳುವ ಸಡಗರವನ್ನು ಯೋಗಿಯಾದವನು ಪ್ರತಿ ದಿನದಲ್ಲಿಯೂ ಪ್ರತಿ ಕ್ಷಣದಲ್ಲಿಯೂ ಮಟ್ಟ ಮಾಡುತ್ತಿರುವನು. ಮತ್ತು ಮನಸ್ಸನ್ನು ಏಳಗೊಡದೆ ಇಟ್ಟುಕೊಂಡಿರುವಂಥ ಸ್ಥಿತಿಯನ್ನು ಬೆಳೆಸಿಕೊಳ್ಳುವನು. ಹೀಗೆ ಮಾಡುತ್ತ ಬರುವದರಿಂದ ಮನಸ್ಸು ಕ್ಷಣ ಕ್ಷಣಕ್ಕೂ ಹೆಚ್ಚು ಸುಮ್ಮನಿರುವ ಸ್ವಭಾವದ್ದಾಗುತ್ತದೆ. ಮನಸ್ಸು ಯಾವಾಗಲೂ ಒಂದು ಸ್ಥಿತಿಯನ್ನು ಬಿಟ್ಟು ಇನ್ನೊಂದು ಸ್ಥಿತಿಯನ್ನು ವಹಿಸುವ ಸ್ವಭಾವದ್ದೇ ನಿಜ. ಆದರೂ ಮನಸ್ಸು ಎಷ್ಟು ವೃತ್ತಿಗಳನ್ನು ವಹಿಸುವಾಗ ಆ ವೃತ್ತಿಗಳ ಪ್ರವಾಹವು ಬೇರೆ ಬೇರೆ ಜನ್ಯಾಗಿ ಕಾಣುವವು. [illegible] ಮನಸ್ಸಿನಲ್ಲಿ ಆ ರೀತಿಯಲ್ಲಿ ಹೇಗೆ ಕಂಡೀತು. ಅದು ಅಭ್ಯಾಸ ಬಲದಿಂದ ಮೆಲ್ಲ ಮೆಲ್ಲಗೆ ಹರಿಯುತ್ತಿರುವದು. ಆರಳೀ ಕಟ್ಟಿಗೆಯನ್ನು ಹಾಕಿ ತುಪ್ಪವನ್ನು ಸುರಿಯುತ್ತಲೇ ಅಗ್ನಿಯು ಹೆಚ್ಚು ಹೆಚ್ಚು ಮೇಲಕ್ಕೆದ್ದು ಧಗಧಗಿಸಿ ಆರಳೀಕಟ್ಟಿಗೆ [illegible] ಮುಗಿದ ಮೊದಲನೇ ಕ್ಷಣದಲ್ಲಿ ಅದರ ಉರಿ ಸ್ವಲ್ಪ ಕಡಿಮೆಯಾಗಿ [illegible] ಇನ್ನೊಂದು ಕ್ಷಣಕ್ಕೆ ಇನ್ನೂ ಕಡಿಮೆಯಾಗಿಯೂ ಮತ್ತೊಂದು ಕ್ಷಣಕ್ಕೆ [illegible] ಕಡಿಮೆಯಾಗಿಯೂ

ಹೀಗೆಯೇ ಜರ ಬರುತ್ತ ಕಡಿಮೆಯಾಗುತ್ತ ಬರುವಂತೆ (ಹೋಗುವಂತೆ) ಮನಸ್ಸಿನ ಪ್ರವಾಹದ ವೇಗವೂ ಕಡಿಮೆಯಾಗುವದು. ಹೀಗೆ ಉಲ್ಬಣವನ್ನೆಲ್ಲಾ ಕಳೆದುಕೊಂಡಂಥ ಮನಸ್ಸಿನ ಸ್ಥಿತಿಯನ್ನು ಭಗವಾನ್ ಶ್ರೀಕೃಷ್ಣನು ಗೀತೆಯಲ್ಲಿ ತಿಳಿಸಿಕೊಟ್ಟಿದ್ದಾನೆ. ಯಾವಾಗ ಮನಸ್ಸು ವಿಷಯುಗಳನ್ನೆಲ್ಲಾ ಮರತು ಆತ್ಮಸ್ವರೂಪದಲ್ಲಿ ನೆಲೆಯಾಗಿ ನಿಲ್ಲು-ವದೋ ಆಗ ಅದು ಯಾವದೊಂದು ವ್ಯವಹಾರದ ಕಡೆಗೂ ತಿರುಗದೆ ಸಮತ್ವದಲ್ಲಿ ನಿಂತಿ-ರುವದು. ಹೀಗೆ ಹಿಡಿತಕ್ಕೆ ಸಿಕ್ಕಿ ಸಮತ್ವ ಸ್ಥಿತಿಯಲ್ಲಿರುವಂಥ ಮನಸ್ಸು ಗಾಳಿಯಿಲ್ಲದ ಕಡೆಯಲ್ಲಿರುವ ದೀಪದಂತೆ ಅಲ್ಲಾಡದೆ ಇರುವದು. ಯೋಗಾಭ್ಯಾಸದಿಂದ ಹಿಡಿತಕ್ಕೆ ಸಿಕ್ಕಿ ಮನಸ್ಸು ಸುಮ್ಮನೆ ನಿಂತಿತೆಂದರೆ ಅದು ಆತ್ಮಸಾಕ್ಷಾತ್ಕಾರವನ್ನು ಪಡೆದು ಆತ್ಮಸ್ವರೂಪದಲ್ಲಿಯೇ ತೃಪ್ತಿಯನ್ನು ಪಡೆಯುವದು. ಆ ಮನಸ್ಸು ಅಲ್ಲಿ ಇಂದ್ರಿಯಗಳಿಗೆ ಗೋಚರವಾಗದಂಥ, ಬುದ್ಧಿಗೆ ಮಾತ್ರ ತಿಳಿಯುವಂಥ, ಶಾಶ್ವತ ಸುಖವನ್ನು ಅನುಭವಿಸುತ್ತ ಅದನ್ನು ಬಿಟ್ಟು ಕದಲದೆ ಇರುವದು. ಇದು ಸಿಕ್ಕಿದ ಮೇಲೆ ಇದಕ್ಕಿಂತ ಹೆಚ್ಚಿನದೊಂದುಂಟೆಂಬ ಕಲ್ಪನೆಯೇ ಅದಕ್ಕೆ ಬರುವುದಿಲ್ಲ. ಮನಸ್ಸು ಆ ಸ್ಥಿತಿಯಲ್ಲಿ ನಿಂತರೆ ಯಾವ ಹೆಚ್ಚಿನ ದುಃಖವೂ ಅದಕ್ಕೆ ನಾಟುವುದಿಲ್ಲ. ಇದೇ ದುಃಖವಿಲ್ಲದ ಸುಖ. ಇದನ್ನು ಪಡೆಯಬೇಕಾದರೆ ಎಷ್ಟೇ ಪ್ರಯತ್ನಮಾಡಿದರೂ ಆಗದೆಂದು ಎದೆಗೆಡದೆ ಇದನ್ನು ಪಡದೇ ತೀರುತ್ತೇನೆಂದು ಒಂದೇರೀತಿಯಲ್ಲಿ ಪ್ರಯತ್ನ ಮಾಡಬೇಕು. ಮನಸ್ಸು ಎದ್ದು ವೃತ್ತಿಯಾಗದಂತೆ ಇರುವುದಕ್ಕೆ ಏನುಮಾಡಬೇಕೋ ಅದನ್ನು ಮೇಲಿಂದ ಮೇಲೆ ಮಾಡುತ್ತ ಬಂದರೆ ಅದರ ಅಭ್ಯಾಸದ ಬಲದಿಂದ ಸಂಪ್ರಜ್ಞಾತ ಸಮಾಧಿಗಿಂತಲೂ ಹೆಚ್ಚಿನದಾದಂಥ ಅಸಂಪ್ರಜ್ಞಾತ ಸಮಾಧಿ ಎಂಬುದು ಅನುಭವಕ್ಕೆ ಬರುತ್ತದೆ. ಅದರಲ್ಲಿ ವೃತ್ತಿಗಳೇ ಇಲ್ಲದಿರುವದರಿಂದ ಮನಸ್ಸು ಕಾಣಿಸಿಕೊಳ್ಳದೆ ಎಲ್ಲಿಯೋ ಹೇಗೋ ಅಡಗಿಕೊಂಡಿರುವದು. ಮನಸ್ಸು ಎದ್ದು ವೃತ್ತಿಯಾಗದೆ ಇರುವದಕ್ಕೆ ಏನು ಮಾಡಬೇಕೆಂಬುದನ್ನು ಶ್ರೀಕೃಷ್ಣಪರಮಾತ್ಮನೇ ಉಪದೇಶ ಮಾಡಿರುತ್ತಾನೆ. ಮನಸ್ಸಿಗೆ ಚನ್ನಾಗಿ ಕಂಡು ಬೇಕೆನ್ನಿಸುವಂಥ ಬಯಕೆಗಳನ್ನೆಲ್ಲಾ ಬಿಟ್ಟು ಮನಸ್ಸಿನಿಂದಲೆ ಇಂದ್ರಿಯಗಳನ್ನೆಲ್ಲಾ ನಾಲ್ಕು ಕಡೆಯಿಂದಲೂ ಜಗ್ಗಿ ಈ ಯೋಗವನ್ನು ನಾನು ಸಾಧಿಸಿಯೇ ತೀರುತ್ತೇನೆಂಬ ನಿಶ್ಚಯಬುದ್ಧಿಯಿಂದ ಮೆಲ್ಲ ಮೆಲ್ಲಗೆ ಮನಸ್ಸನ್ನು ಬಿಗಿಹಿಡಿದು ಅದು ಆತ್ಮಸ್ವರೂಪವನ್ನು ಹಿಡಿದುಕೊಂಡಿರು-ವಂತೆ ಮಾಡಬೇಕು. ಆಮೇಲೆ ಅದು ಏನನ್ನೂ ಯೋಚಿಸಬಾರದು. ಆ ಮನಸ್ಸು ಒಂದೇ ಕಡೆ ನಿಲ್ಲಲಾರದೆ ಎತ್ತೆತ್ತ ಹರಿದು ಹೋಗುವದಕ್ಕೆ ಹೋಗುತ್ತದೆಯೊ ಅತ್ತತ್ತಲೆಲ್ಲಾ ಅದರ ಬೆನ್ನು ಹತ್ತಿಹೋಗಿ ಅದನ್ನು ಹಿಂದಿರುಗಿಸಿಕೊಂಡು ಬಂದು ಆತ್ಮಸ್ವರೂಪಕ್ಕೇ ಗಂಟು ಹಾಕಬೇಕು. ಹೂ, ಗಂಧ, ಹೆಂಡತಿ, ಮಕ್ಕಳು, ಗೆಳೆಯರು, ಹೊಲ, ಮನೆ ಮೊದಲಾದ ವುಗಳೆಲ್ಲಾ, ಎಷ್ಟೋ ದೋಷಗಳಿಂದ ಕೂಡಿರತಕ್ಕವುಗಳೆಂದು ಮೋಕ್ಷಶಾಸ್ತ್ರದಲ್ಲಿ ಕುಶಲರಾದ ವಿವೇಕಿಗಳಿಗೆಲ್ಲಾ ಗೊತ್ತು. ಆದರೂ ಎಷ್ಟೋ ಹಿಂದಿನಿಂದ ಬೆನ್ನು ಹತ್ತಿ ಬಂದಿರುವ ಅಜ್ಞಾನದಿಂದ ಆ ವಸ್ತುಗಳ ದೋಷಗಳೆಲ್ಲಾ ಗುಣಗಳಂತೆ ತೋರಿ ಬಿಡುತ್ತವೆ. ಮನಸ್ಸು

ಈ ಗುಣಗಳಿಗೆ ಮರುಳಾಗಿ ಇವುಗಳೆಲ್ಲಾ ತನಗೆ ಬೇಕೆಂದು ಬಯಸುತ್ತದೆ. ಮನಸ್ಸಿಗೆ ಅವು ಚೆನ್ನಾಗಿ ಕಾಣುವುದರಿಂದಲೇ ಬೇಕೆನಿಸುವದು. ಅವುಗಳು ಚೆನ್ನಾಗಿರುವವೆಂಬ ಭಾವನೆಯನ್ನು ಮನಸ್ಸಿಗೆ ತಂದುಕೊಳ್ಳದೆ ಬಿಟ್ಟು ಬಿಟ್ಟರಾಯಿತು. ಆ ಬಯಕೆಯೆಂಬುದರ ಹುಟ್ಟಡಗಿ ಹೋಗುತ್ತದೆ. ವಿಷಯಗಳು ಕಣ್ಣುಮುಂದೆ ಬಂದು ನಿಂತಾಗ ಅವುಗಳನ್ನು ನಾಯಿ ಕಕ್ಕಿದ ಪಾಯಸದಂತೆ ಭಾವಿಸಿ ಅವುಗಳಮೇಲಿನ ಬಯಕೆಗಳನ್ನೆಲ್ಲಾ ಬಿಟ್ಟು ಬಿಡ ಬೇಕು; ಬರೀ ಹೂ, ಗಂಧ, ಹೆಂಡತಿ ಮೊದಲಾದವರ ಮೇಲಿನ ಬಯಕೆಯನ್ನು ಬಿಡುವ ದಿಷ್ಟೇ ಅಲ್ಲ. ಬ್ರಹ್ಮಲೋಕ ಮೊದಲಾದ ದಿವ್ಯಲೋಕಗಳ ಬಯಕೆಯನ್ನೂ ಅಣಿಮಾ ಮೊದಲಾದ ಅಷ್ಟಸಿದ್ಧಿಗಳನ್ನೂ ಕೂಡ ಮನಸ್ಸಿನಿಂದ ಆಚೆಗೆ ಎಷ್ಟೋ ದೂರಕ್ಕೆ ತಳ್ಳಿ ಬಿಡಬೇಕು. ಈ ತಿಂಗಳಲ್ಲಿ ನಾನು ಅನ್ನವನ್ನುಣ್ಣುವದಿಲ್ಲವೆಂದು ಒಂದು ವ್ರತವನ್ನು ಹಿಡಿದವನು ಆ ತಿಂಗಳೆಲ್ಲಾ ಅನ್ನವನ್ನು ಬಿಟ್ಟರೂ ಅದರ ಬಯಕೆ ಮಾತ್ರ ಮೇಲಿಂದ ಮೇಲೆ ಆಗುತ್ತಲೇ ಇರುತ್ತದೆ. ವಿಷಯಗಳ ಬಯಕೆಯನ್ನು ಬಿಡುವ ರೀತಿ ಹಾಗಲ್ಲ. ಮತ್ತೆ ಅದು ಮನಸ್ಸಿನ ಹತ್ತಿರಕ್ಕೆ ಬರ ಬಾರದು. ವಿಷಯಗಳ ಕಡೆ ಹರಿದಾಡಲೆಂದು ಮನಸ್ಸು ಇಂದ್ರಿಯಗಳಿಗೆ ಹೇಳದಿದ್ದರೂ ಕಣ್ಣು ಮೊದಲಾದ ಇಂದ್ರಿಯಗಳಿಗೆ ರೂಪ ಮೊದಲಾ ದವುಗಳು ಬಿದ್ದೇ ಬೀಳುವುದಲ್ಲ! ಎಂದರೆ ಅದನ್ನೂ ಕೂಡ ಮನಸ್ಸಿನಿಂದಲೇ ಬಗಿ ಬಿಡಿಸ ಬೇಕು. ಕೊನೆಗೆ ಅವು ಅತ್ತಿತ್ತ ಹೋಗಿ ದೇವತಾದರ್ಶನ ಮೊದಲಾದವುಗಳನ್ನು ಮಾಡಿ ಕೊಂಡು ಬರಬೇಕೆಂಬ ನೆವವನ್ನು ತೆಗೆದರೂ ಮನಸ್ಸು ಅದಕ್ಕೆ ಒಪ್ಪಬಾರದು. ಇಷ್ಟರ ಮಟ್ಟಿಗೆ ಬಂದೇಸಲಕ್ಕೆ ಬಿಗಿಹಿಡಿಯುವುದಕ್ಕಾಗುವುದಿಲ್ಲ. ಮೆಲ್ಲ ಮೆಲ್ಲಗೆ ಮನಸ್ಸನ್ನು ಹಿಟ್ಟಿನ ಸ್ಥಿತಿಗೊಯ್ಯಬೇಕು. ಅದರ ಕ್ರಮವು ಕಠವಲ್ಲಿಯಲ್ಲಿ ಹೇಳಿದೆ. ವಾಗ್ಭೂಮಿಕೆ, ಮನೋಭೂಮಿಕೆ, ಜ್ಞಾನಭೂಮಿಕೆ, ಮಹದ್ಭೂಮಿಕೆ, ಮತ್ತು ಶಾಂತಾತ್ಮಭೂಮಿಕೆ, ಎಂದು ಐದು ಸ್ಥಿತಿಗಳಿವೆ. ವಾಗ್ಭೂಮಿಕೆಯಲ್ಲಿ ಲೌಕಿಕವಾದ ಮಾತೆಂದೂ ವೈದಿಕವಾದ ಮಾತೆಂದೂ ಎರಡುಬಗೆ. ಸುಮ್ಮನೆ ಹರಟುವದು ಲೌಕಿಕದಮಾತು. ಅಜಪಾಮಂತ್ರ ಮೊದಲಾದವುಗಳನ್ನುಚ್ಚರಿಸುವದು ವೈದಿಕದಮಾತು. ಲೌಕಿಕವಾದ ಹರಟೆಯು ಮನ ಸ್ಸನ್ನು ಹತ್ತು ದಿಕ್ಕುಗಳಲ್ಲಿಯೂ ಹರಿದಾಡುವಂತೆ ಮಾಡುವದರಿಂದ ಧ್ಯಾನಾಭ್ಯಾಸದಿಂದ ಎದ್ದ ಮೇಲೆ ಕೂಡ ಯೋಗಿಯು ಹರಟೆಗೆ ಮನಸ್ಸು ಕೊಡಬಾರದು. ಮಾತನಾಡದೆ ಇರು ವಿಕೆ, ಯೋಗಾಸನ, ಯೋಗ, ಸಹನಶೀಲತೆ, ಒಂಟಿಯಾಗಿರುವಿಕೆ, ಯಾವ ಬಯಕೆಯೂ ಇಲ್ಲದಿರುವಿಕೆ, ಸಮಬುದ್ಧಿ ಈ ಏಳೂ ಸನ್ಯಾಸಿಗಿರಬೇಕೆಂದು ಸ್ಮೃತಿ ಇರುವದು. ನಿರೋಧ ಸಮಾಧಿಯಲ್ಲಿ ಜಪಿಸುವದನ್ನು ಕೂಡ ಬಿಡಬೇಕು. ಇಷ್ಟಾದರೆ ವಾಗ್ಭೂಮಿಕೆಯನ್ನು ಮೀರಿದಂತಾಯಿತು. ಈ ಭೂಮಿಕೆಯನ್ನು ಪ್ರಯತ್ನದಿಂದಲೇ ಕೆಲವು ದಿನಗಳಲ್ಲಿಯೋ ಕೆಲವು ತಿಂಗಳುಗಳಲ್ಲಿಯೋ ಕೆಲವು ವರ್ಷಗಳಲ್ಲಿಯೋ ಅಂತೂ ಚೆನ್ನಾಗಿ ಗೆದ್ದು ಆಮೇಲೆ ಎರ ಡನೇದಾದ ಮನೋಭೂಮಿಕೆಗೆ ಕೈ ಹಾಕಬೇಕು. ಕೆಳ ಕೆಳಗಿನ ಭೂಮಿಕೆಗಳ ಆಧಾರದ ಮೇಲೆ, ಮೇಲೆಮೇಲಿನ ಭೂಮಿಕೆಗಳು ನಿಂತಿರುವವು. ಮೊದಲನೇ ವಾಗ್ಭೂಮಿಕೆಯು [illegible]

ಇನ್ನು ನಾಲ್ಕು ಭೂಮಿಕೆಗಳಿರುವವು. ವಾಗ್ಭೂಮಿಕೆ ಬಿರಕು ಬಿಟ್ಟರೂ ಸಾಕು. ಮೇಲಿನ ಭೂಮಿಕೆಗಳೆಲ್ಲಾ ಬಿದ್ದು ಹೂರಾಗಿ ಬಿಡುವವು. ವಾಗಿಂದ್ರಿಯದಂತೆಯೇ ಕಣ್ಣು ಕಿವಿ ಮೊದಲಾದ ಇಂದ್ರಿಯಗಳನ್ನು ಬಿಗಿ ಹಿಡಿಯಬೇಕು. ನಿಜ. ಈ ಐದುಭೂಮಿಕೆಗಳಲ್ಲಿ ಅವು ವಾಗ್ಭೂಮಿಕೆಯಲ್ಲಿಯೋ ಅಥವಾ ಮನೋಭೂಮಿಕೆಯಲ್ಲಿಯೋ ಸೇರಿಹೋಗಿರುತ್ತ ವೆಂದು ತಿಳಿಯಬೇಕು. ಹೀಗೆ ಕೆಳಗಣ ಒಂದೊಂದು ಭೂಮಿಕೆಯನ್ನು ಗೆದ್ದು ಅದನ್ನು ಮೇಲಿನ ಭೂಮಿಕೆಯಲ್ಲಿ ಅಡಗಿಸಿ ಬಿಡಬೇಕು. ಒಂದು ಇಂದ್ರಿಯವನ್ನು ಇನ್ನೊಂದು ಇಂದ್ರಿಯದೊಳಗೆ ಅಡಗಿಸುವದೆಂಬುದು ಆಗದ ಮಾತಾದಕಾರಣ ವಾಗಿಂದ್ರಿಯವನ್ನು ಮನಸ್ಸಿನಲ್ಲಿ ಅಡಗಿಸುವದಕ್ಕೇ ಹೇಗೆಬಿರುವದೆಂದರೆ ಒಂದನ್ನು ಕಿತ್ತು ಕೊಂಡು ಹೋಗಿ ಇನ್ನೊಂದರೊಳಕ್ಕೆ ಅದನ್ನು ತುರುಕಬೇಕೆಂದು ತಾತ್ಪರ್ಯವಲ್ಲ! ವಾಗಿಂದ್ರಿಯವೂ ಮತ್ತು ಮನಸ್ಸೂ ಹತ್ತುಕಡೆಗೂ ಹರಿದಾಡುತ್ತಿರುವದಷ್ಟೆ. ಅವುಗಳಲ್ಲಿ ಮೊದಲು ವಾಗಿಂದ್ರಿಯವನ್ನು ವಶಮಾಡಿಕೊಂಡರೆ ಇನ್ನು ಮನಸ್ಸೊಂದೇ ಉಳಿದುಕೊಳ್ಳುವು ದೆಂದು ಆ ಮೇಲಿನತಾತ್ಪರ್ಯ. ಹಿಡಿದು ತಂದು ಗೂಟಕ್ಕೆ ಕಟ್ಟಿಹಾಕಿದ ಆಕಳು, ಎಮ್ಮೆ, ಕುದುರೆ ಮೊದಲಾದವುಗಳಂತೆ ವಾಗಿಂದ್ರಿಯವು ಸುಮ್ಮನೆ ನಿಂತಿತೆಂದರೆ ಆ ಮೇಲೆ ಮನಸ್ಸನ್ನು ತೆಗೆದುಕೊಂಡು ಹೋಗಿ ಜ್ಞಾನಭೂಮಿಕೆಯಲ್ಲಿ ಅಡಗಿಸಬೇಕು. ವಿಚಾರ ಮಾಡಿ ನೋಡಿದರೆ ಸ್ವಲ್ಪ ಹೆಚ್ಚು ಕಡಿಮೆ ಜ್ಞಾನಭೂಮಿಕೆ, ಮಹದ್ಭೂಮಿಕೆ, ಮತ್ತು ಶಾಂತಾತ್ಮಭೂಮಿಕೆ ಎಂಬ ಮೂರೂ ಒಂದೇ. ಏಕೆಂದರೆ ಈ ಮೂರರಲ್ಲಿಯೂ ಮನಸ್ಸನ್ನು ತಂದು ಆತ್ಮಸ್ವರೂಪದಲ್ಲಿ ಅಡಗಿಸಿದಂತೆ ಆಗುವದು. ಆ ಆತ್ಮದ ಮೂರು ಬಗೆಗಳಿಂದ ಅವು ಮೂರುಭೂಮಿಕೆಗಳಾಗಿವೆ. ಜ್ಞಾನಾತ್ಮ, ಮಹಾತ್ಮ ಮತ್ತು ಶಾಂತಾತ್ಮ ಎಂಬಿವು ಮೂರೂ ಆತ್ಮದ ಮೂರುಬಗೆಗಳು. ಜ್ಞಾನಾತ್ಮನೆಂಬ ಮಾತಿನಿಂದ ತೋರುವ ಅರ್ಥವೇನೆಂದರೆ:—ನಾನು ಇಲ್ಲಿ ಈಗ ಆತ್ಮಸ್ವರೂಪವನ್ನು ತಿಳಿಯುತ್ತಿದ್ದೆನೆಂಬುವಂಥ ಮನಸ್ಸಿನ ಅಹಂಕಾರಸ್ಥಿತಿಯೇ ಇಲ್ಲಿ ಜ್ಞಾನವೆಂಬ ಮಾತಿನ ಅರ್ಥ. ಮನಸ್ಸು ಆಗ ಅದನ್ನು ತಿಳಿಯುವ ಸಾಧನವಾಗಿ ಆತ್ಮಸ್ವರೂಪಕ್ಕಿಂತ ಬೇರೆಯಾಗಿರುವದು. ಆ ಅಹಂಕಾರವು ವಿಶೇಷರೂಪ ಮತ್ತು ಸಾಮಾನ್ಯರೂಪ ಎಂದೆರಡು ಬಗೆ. ಈ ನಾನು ಇಂಥವನ ಮಗನೆಂಬ ಮುಂತಾದ ಅಭಿಮಾನದಿಂದ ಕೂಡಿರುವದು ವಿಶೇಷಾಹಂಕಾರ. ನಾನೊಬ್ಬನಿದ್ದೇನೆಂದಿಷ್ಟು ಮಾತ್ರದ ಅಭಿಮಾನದಿಂದ ಕೂಡಿರುವದು ಸಾಮಾನ್ಯಾಹಂಕಾರ. ಈ ಸಾಮಾನ್ಯಾಹಂಕಾರವು ಎಲ್ಲರಲ್ಲಿಯೂ ವ್ಯಾಪಿಸಿಕೊಂಡಿರುವದರಿಂದ ಇದಕ್ಕೆ ಮಹಾತ್ ಎಂದು ಹೆಸರು. ಹೀಗೆ ವಿಶೇಷಾಹಂಕಾರದೊಳಗಣ ಆತ್ಮನೊಬ್ಬ, ಸಾಮಾನ್ಯಾಹಂಕಾರದೊಳಗಣ ಆತ್ಮನೊಬ್ಬ, ಹೀಗೆ ಇಬ್ಬರು ಆತ್ಮರು. ಅಹಂಕಾರದ ಸೋಂಕೇ ಇಲ್ಲದೆ ಒಳಗೂ ಹೊರಗೂ ಎಲ್ಲೆಲ್ಲಿಯೂ ತುಂಬಿಕೊಂಡಿರುವವನು ಶಾಂತಾತ್ಮನು. ಶಾಂತರೂಪನಾದ ಆ ಆತ್ಮನು ಚಿದಾನಂದಸ್ವರೂಪನು. ಜಡಶಕ್ತಿರೂಪವಾಗಿ ಅಡಗಿಕೊಂಡಿರುವ ಮೂಲಪ್ರಕೃತಿಯು ಆಶ್ರಯಿಸಿಕೊಂಡಿರುವದು ಆವನನ್ನೇ. ಆ ಮೂಲಪ್ರಕೃತಿಯು

ಮೊಟ್ಟ ಮೊದಲು ಸಾಹಜೂನ್ಯಾಹಂಕಾರ ರೂಪವಾದ ಮಹತ್ತತ್ತ್ವವೆಂಬ ಹೆಸರಿಂದ ಕಾಣಿಸಿಕೊಳ್ಳುವದು. ಅದಾದ ಮೇಲೆ ವಿಶೇಷಾಹಂಕಾರದಿಂದ, ಅದಾದ ಮೇಲೆ ಮನೋರೂಪದಿಂದ, ಅದಾದ ಮೇಲೆ ವಾಗಿಂದ್ರಿಯ ಮೊದಲಾದ ಇಂದ್ರಿಯಗಳ ರೂಪದಿಂದ ಹೊರಬೀಳುವದು. ಈ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡೇ ಶ್ರುತಿಯು ಒಂದನ್ನೊಂದು ಒಳಕೊಳ್ಳುತ್ತದೆಂದು ಹೇಳುವದು. ಕಣ್ಣು ಕಿವಿ ಮೊದಲಾದ ಇಂದ್ರಿಯಗಳಿಗಿಂತಲೂ ರೂಪ ಮತ್ತು ಶಬ್ದ ಮೊದಲಾದ ವಿಷಯಗಳೂ ಅವುಗಳಿಗಿಂತಲೂ ಮನಸ್ಸೂ, ಅದಕ್ಕಿಂತಲೂ ಮಹತ್ತೂ, ಅದಕ್ಕಿಂತಲೂ ಮೂಲಪ್ರಕೃತಿಯೂ, ಅದಕ್ಕಿಂತಲೂ ಪರಮಾತ್ಮನು ಹೆಚ್ಚೆಂದೂ, ಪರಮಾತ್ಮನಿಗಿಂತ ಹೆಚ್ಚಿನದಿನ್ನೊಂದಿಲ್ಲವೆಂದೂ ಅದೇ ಕಟ್ಟಕಡೆಯ ಸದ್ಗತಿಯೆಂದೂ ಶ್ರುತಿಯ ತಾತ್ಪರ್ಯ. ಹೀಗಿರುವದರಿಂದ ಇದು ಚನ್ನಾಗಿದೆಯೆಂದೂ ಇದು ಚನ್ನಾಗಿಲ್ಲವೆಂದೂ ಇದು ಬೇಕೆಂದೂ ಇದು ಬೇಡವೆಂದೂ ಭಾವಿಸುತ್ತಿರುವ ಮನಸ್ಸನ್ನು ಅಹಂಕಾರದಿಂದ ಕೂಡಿದ ಆತ್ಮಸ್ವರೂಪದಲ್ಲಿ ಅಡಗಿಸಬೇಕು. ಎಂದರೆ ಮನಸ್ಸಿನ ಹರಿದಾಟವನ್ನೆಲ್ಲಾ ಬಿಡಿಸಿ ನಾನೆಂಬ ಅರಿವನ್ನು ಮಾತ್ರ ಉಳಿಸಿ ಕೊಳ್ಳಬೇಕು. ಇದು ಅಸಾಧ್ಯವಾದ ಮಾತೆಂದು ತಿಳಿಯಬಾರದು. ಮನಸ್ಸನ್ನು ಬಿಗಿಹಿಡಿಯುವದು ಗಾಳಿಯನ್ನು ಮೂಟೆ ಕಟ್ಟುವಷ್ಟು ಕಷ್ಟಸಾಧ್ಯವಾದ ಕೆಲಸವೆಂದು ಅರ್ಜುನನು ಅಭಿಪ್ರಾಯಪಟ್ಟಾಗ ಶ್ರೀ ಕೃಷ್ಣನು “ ಅರ್ಜುನ ಮನಸ್ಸನ್ನು ಬಿಗಿಹಿಡಿಯುವದು ಕಷ್ಟಸಾಧ್ಯವಾದ ಕೆಲಸವೆಂಬ ವಿಷಯದಲ್ಲೇನೂ ಸಂಶಯವಿಲ್ಲ. ಆದರೂ ವೈರಾಗ್ಯವನ್ನು ಗಟ್ಟಿಮಾಡಿಕೊಂಡು ಎಡೆಬಿಡದೆ ಪ್ರಯತ್ನ ಮಾಡುವದರಿಂದ ಆ ಕೆಲಸವನ್ನು ಸಾಧಿಸಬಹುದು. ಹಾಗೆ ಮಾಡದೆ ಇದ್ದರೆ ಮಾತ್ರ, ಅವನಮನಸ್ಸು ಸಮತ್ವಕ್ಕೆ ನಿಲ್ಲುವದು ಆಗಲಾರದು ಪ್ರಯತ್ನ ಮಾಡಿ ಬಿಗಿಹಿಡಿಯುವವರ ಉಪಾಯಕ್ಕೆ ಅದು ಮಿಂಚಿದ್ದೆನೂ (ಮೀರಿದ್ದೆನೂ) ಅಲ್ಲ. ” ಎಂದು ಹೇಳಿರುವನು. ಉಪಾಯಕ್ಕೆ ಅದು ದಕ್ಕುವದೆಂಬಸರ್ಥವನ್ನು ಗೌಡಪಾದಾಚಾರ್ಯರು ಉದಾಹರಣೆಯನ್ನು ಕೊಟ್ಟು ಹೇಳಿರುವರು. ದರ್ಭೆಯ ತುದಿಯಿಂದ ತೊಟ್ಟು ತೊಟ್ಟಾಗಿ ತೆಗೆದು ಹಾಕುವದರಿಂದ ಆಯಾಸವಿಲ್ಲದೆ ಸಮುದ್ರವನ್ನು ಕೂಡ ಬತ್ತಿಸಲಿಕ್ಕೆ ಆಗುವಂತೆ ಮನಸ್ಸನ್ನೂ ಬಿಗಿಹಿಡಿಯುವದಕ್ಕೆ ಬರುತ್ತದೆ. ತಾನು ಎಷ್ಟೇ ಬಲಿಷ್ಠನಾದರೂ ತಾನೊಬ್ಬನೇ ಒಂದು ಪಕ್ಷದವನಾಗಿ ಅನೇಕರೊಡನೆ ವಿರೋಧವನ್ನು ಮಾಡಬಾರದು. ಹಾಗೆ ಮಾಡಿದರೆ ಟಿಟ್ಟಿಭದಿಂದ ಸಮುದ್ರವು ಅಪಜಯವನ್ನು ಪಡೆದಂತೆ ಅವನು ಸೋತುಹೋಗುವನು. ಈ ಮಾತಿಗೆ ಒಂದು ಕಥೆಯುಂಟು. ಒಂದಾನೊಂದು ಕಾಲದಲ್ಲಿ ದಡದ ಮೇಲಣ ಮರದಲ್ಲಿದ್ದ ಹಕ್ಕಿಯ ಮೊಟ್ಟೆಗಳನ್ನು ಸಮುದ್ರವು ಹಾದುಬಂದು ಹೊತ್ತುಕೊಂಡು ಹೋಯಿತು. ಆಗ ಆ ಹಕ್ಕಿಯು ಈ ಸಮುದ್ರವನ್ನೇ ಒಣಗಿಸಿ ಬಿಡುತ್ತೇನೆಂದು ಹೊರಟು ತನ್ನ ಕೊಕ್ಕಿನ ತುದಿಯಿಂದ ಒಂದೊಂದೇ ಹನಿಯನ್ನು ತೆಗೆದುಕೊಂಡು ಹೋಗಿ ಹೊರಕ್ಕೆ ಚೆಲ್ಲುತ್ತಿತ್ತು ಆಗ ಅದನ್ನು ನೋಡಿ ಆ ಹಕ್ಕಿಯ ಬಾಂಧವರೂ ಮಿತ್ರರೂ ಬಂದು ಅಸಾಧ್ಯವಾದ ಕೆಲಸವನ್ನು ಸಾಧಿಸಬಾರ

ರೆಂದು ಅದಕ್ಕೆ ಬುದ್ಧೀ ಹೇಳಿದವು. ಅವರೆಲ್ಲರೂ ಬೇಡ ಬೇಡವೆಂದು ಎಷ್ಟೋ ಸಾರಿ ಸಾರಿ ಹೇಳಿದರೂ ಅದಕ್ಕೆ ಕಿವಿಗೊಡದೆ ಆ ಹಕ್ಕಿಯು ಅವರನ್ನೆಲ್ಲಾ ಹುರಿದುಂಬಿಸಿ ತನ್ನ ಜೊತೆಗೇ ಅವರೆಲ್ಲರನ್ನೂ ಬರಮಾಡಿಕೊಂಡು ಹಿಡಿದ ಕೆಲಸವನ್ನು ಮುಂದಕ್ಕೆ ಸಾಗಿಸಿತು. ಆ ಎಲ್ಲಾ ಹಕ್ಕಿಗಳೂ ಸೇರಿ ಆ ಕೆಲಸಕ್ಕಾಗಿ ಹಾರಾಡಿ ಹಾರಾಡಿ ಬಳಲಿ ಬೇಸತ್ತು ಬೆಂಡಾಗಿರುವದನ್ನು ದಯಾಳುಗಳಾದ ನಾರದರು ಕಂಡು ಅವರಿಗೆ ಸಹಾಯವಾಗೆಂದು ಗರುಡನನ್ನು ಪ್ರೇರಿಪಿದರು. ತನ್ನ ಜಾತಿಯವರ ಮೊಟ್ಟೆಗಳನ್ನು ಕದ್ದು ತನಗೆ ಅವಮಾನ ಮಾಡಿದನೆಂಬ ಸಿಟ್ಟಿನಿಂದ ಘೋರ್ಗರೆಯುತ್ತ ಗರುಡನು ಭರ್ರನೆ ಬರುತ್ತಿರಲು ಅವನ ಗರಿಗಳಿಂದ ಹುಟ್ಟಿದ ಗಾಳಿಯು ಸಮುದ್ರವನ್ನು ಅಲ್ಲೋಲ ಕಲ್ಲೋಲವಾಗಿ ಮಾಡಿ ಬಿಟ್ಟಿತು. ಇಷ್ಟಾಗುತ್ತಲೆ ಹೆದರಿ ಸಮುದ್ರನು ಆ ಹಕ್ಕಿಯ ಮೊಟ್ಟೆಗಳನ್ನು ಹಿಂದಕ್ಕೆ ತಂದುಕೊಟ್ಟನಂತೆ. ಹೀಗೆ ಬೇಸರ ಗೊಳ್ಳದೆ ಹಿಡಿದ ಪ್ರಯತ್ನದಲ್ಲಿ ಹಿಂದುಳಿಯದೆ ಮನಸ್ಸನ್ನು ಬಿಗಿಹಿಡಿಯುವದನ್ನು ಅಭ್ಯಾಸಮಾಡುವ ಯೋಗಿಗೆ ಪರಮೇಶ್ವರನೇ ಸಹಾಯ ಮಾಡುತ್ತಾನೆ. ಒರೀ ಬೇಸರವೇ ತೋರದಂತೆ ನಡುನಡುವೆ ಮನಸ್ಸಿನ ಸಮತ್ವಕ್ಕೆ ಅನುಕೂಲವಾದ ವ್ಯಾಪಾರಗಳೂ ತೋರುವವು. ಊಟಮಾಡುತ್ತಿರುವಾಗ ತುತ್ತುಗಳ ನಡುವೆ ನಡುವೆ ಚಟ್ನಿ ಉಪ್ಪಿನಕಾಯಿ ಮೊದಲಾದವುಗಳ ನಂಜಿಕೆ ಇರುವಂತೆ ಸಾಧಕನಿಗೂ ನಡುನಡುವೆ ಮನಸ್ಸಿನ ಸಮತ್ವದ ಸಾಧನಗಳು ತೋರಿಬರುವವು. ಇನ್ನು ಏನೂ ತಿಳಿಯದವನು ತನಗಿರುವ ಸಮಯವನ್ನು ನಾಲ್ಕು ಭಾಗವಾಗಿ ಮಾಡಿಕೊಂಡು ಎರಡು ಭಾಗವನ್ನು ತನ್ನ ಜೀವನಕ್ಕೆ ಸಾಧನವಾದಂಥ ಭಿಕ್ಷಾಟನಾದಿ ವ್ಯಾಪಾರಗಳಲ್ಲಿಯೂ ತನ್ನ ವರ್ಣಾಶ್ರಮಕ್ಕೆ ತಕ್ಕ ಕರ್ಮಗಳನ್ನು ಮಾಡುವದರಲ್ಲಿಯೂ ಒಂದು ಭಾಗವನ್ನು ಶಾಸ್ತ್ರ ವಿಚಾರದಲ್ಲಿಯೂ ಉಳಿದೊಂದು ಭಾಗವನ್ನು ಗುರು ಸೇವೆಯಲ್ಲಿಯೂ ಕಳೆಯ ಬೇಕು. ಅಷ್ಟಿಷ್ಟು ತಿಳಿದವನು ತನಗಿರುವ ಸಮಯವನ್ನು ನಾಲ್ಕು ಭಾಗವನ್ನು ಮಾಡಿಕೊಂಡು ಒಂದು ಭಾಗವನ್ನು ಆಹಾರಸಂಗ್ರಹದಲ್ಲಿಯೂ ಮತ್ತು ವರ್ಣಾಶ್ರಮಕರ್ಮದಲ್ಲಿಯೂ, ಎರಡು ಭಾಗಗಳನ್ನು ಗುರುಸೇವೆಯಲ್ಲಿಯೂ ಉಳಿದೊಂದು ಭಾಗವನ್ನು ಶಾಸ್ತ್ರಾರ್ಥಚಿಂತನೆಯಲ್ಲಿಯೂ ಕಳೆಯಬೇಕು. ಇನ್ನು ತಿಳಿದವನು ಪ್ರತಿದಿನವೂ ಎರಡು ಭಾಗಗಳನ್ನು ಶಾಸ್ತ್ರಸಂಗ್ರಹದಲ್ಲಿಯೂ ಮತ್ತು ವೈರಾಗ್ಯದ ಭಾವನೆಯಲ್ಲಿಯೂ ಉಳಿದೆರಡು ಭಾಗಗಳನ್ನು ಧ್ಯಾನದಲ್ಲಿಯೂ ಗುರುಪೂಜೆಯಲ್ಲಿಯೂ ಕಳೆಯಬೇಕು. ಹೀಗೆಂದು ವಸಿಷ್ಠರ ಅಭಿಪ್ರಾಯ. ಮುಖ್ಯತಾತ್ಪರ್ಯವೇನೆಂದರೆ ಒಂದುಗಳಿಗೆಯ ಹೊತ್ತು ಧ್ಯಾನದಲ್ಲಿರಬೇಕು. ಆ ಮೇಲೊಂದುಗಳಿಗೆ ಶಾಸ್ತ್ರಶ್ರವಣವನ್ನು ಮಾಡುತ್ತಲೋ ಅಥವಾ ಸೇವೆಮಾಡುತ್ತಲೋ ಗುರುಗಳನ್ನು ಹಿಂಬಾಲಿಸಬೇಕು. ಆ ಮೇಲೊಂದುಗಳಿಗೆ ತನ್ನ ಹೊಟ್ಟೆಯ ಪಾಡನ್ನು ನೋಡಿಕೊಳ್ಳಬೇಕು. ಆ ಮೇಲೊಂದು ಗಳಿಗೆಯೋಗಶಾಸ್ತ್ರವನ್ನು ವಿಚಾರಮಾಡಬೇಕು. ಆಮೇಲೊಂದುಗಳಿಗೆ ಮತ್ತೆ ಧ್ಯಾನವನ್ನು ಮಾಡಬೇಕು. ಹೀಗೆ ಧ್ಯಾನವನ್ನು ಮುಖ್ಯವಾಗಿಟ್ಟುಕೊಂಡು ಮಿಕ್ಕವುಗಳನ್ನು ಅದಕ್ಕೆ ಸಾಧನವಾಗುವಂತೆ ಜೋಡಿಸಿಕೊಂಡು ಎಲ್ಲವನ್ನೂ ಚನ್ನಾಗಿ

ಅಭ್ಯಾಸಮಾಡಿ ಕೊನೆಗೆ ಮಲಗುವಾಗ ಆದಿನ ಎಷ್ಟು ಹೊತ್ತು ಧ್ಯಾನವು ಸಾಗಿತೆಂಬುದನ್ನು ಲೆಕ್ಕಮಾಡಬೇಕು. ಹಾಗೆಯೇ ಮುಂಚಿನದಿನ ಮುಂದಿನವಾರ ಮುಂದಿನಪಕ್ಷ ಮುಂದಿನ ಮಾಸ ಮತ್ತು ಮುಂದಿನವರ್ಷ ಧ್ಯಾನವು ಎಷ್ಟು ಹೊತ್ತಿನವರೆಗೆ ಬೆಳೆದಿರುವದೆಂಬುದನ್ನು ನೋಡಿಕೊಳ್ಳಬೇಕು. ಹೀಗೆ ದಿನದಿನವೂ ಸ್ವಲ್ಪ ಸ್ವಲ್ಪ ಹೊತ್ತೇ ಸಾಧಿಸುತ್ತ ಹೋದರೂ ಒಂದು ಸಂವತ್ಸರದಲ್ಲಿಯೇ ಎಷ್ಟೋ ಹೊತ್ತು ಧ್ಯಾನವು ನಡೆಯುವದು. ಹೀಗೆ ಧ್ಯಾನವನ್ನೇ ಮುಖ್ಯವಾಗಿಟ್ಟುಕೊಂಡುಬಿಟ್ಟರೆ ಉಳಿದ ವ್ಯಾಪಾರವೆಲ್ಲಾ ಲೋಪವಾಗುವದೆಂಬ ವಿಕಲ್ಪವನ್ನು ತಂದುಕೊಳ್ಳಬಾರದು. ಎಲ್ಲಾ ವ್ಯಾಪಾರಗಳೂ ಲೋಪವಾದ ಮೇಲೆಯೇ ಧ್ಯಾನವು ಮೈಗೂಡುವದು. ಆದುದರಿಂದ ವಿದ್ವತ್ಸನ್ಯಾಸವು ಅಗತ್ಯವೆಂದು ನಾವು ಹಿಂದೆ ಹೇಳಿದ್ದು. ಆದಕಾರಣ, ಅದರಲ್ಲಿಯೇ ಮನಸ್ಸನ್ನೆಲ್ಲಾ ಹಾಕಿ ಬ್ರಹ್ಮಚಾರಿಯಂತೆ ಮತ್ತು ವ್ಯಾಪಾರಿಯಂತೆ ಸಾಧಕನು ಮೆಲ್ಲ ಮೆಲ್ಲಗೆ ಧ್ಯಾನವನ್ನು ಗಳಿಸಬೇಕು. ವೇದವನ್ನು ಗಟ್ಟಿಮಾಡುವ ಬ್ರಹ್ಮಚಾರಿಯು ಮೊದಲುಪಾದದಲ್ಲಿ ಒಂದಂಶವನ್ನು ಆ ಮೇಲೆ ಅರ್ಧಋಕ್ಕನ್ನೂ ಆ ಮೇಲೆ ಒಂದು ಋಕ್ಕನ್ನೂ ಆಮೇಲೆ ಎರಡು ಋಕ್ಕುಗಳನ್ನೂ ಆಮೇಲೆ ಒಂದು ವರ್ಗವನ್ನೂ ಕಲಿಯುತ್ತ ಹನ್ನೆರಡು ವರ್ಷಗಳಲ್ಲಿ ಅಧ್ಯಾಪಕನೇ ಆಗಿ ಬಿಡುತ್ತಾನೆ. ವ್ಯಾಪಾರಕ್ಕೆ ಬಿದ್ದವನು ಕಾಸು ಕಾಸಾಗಿ ಗಂಟು ಹಾಕುತ್ತ ಕೆಲವು ಕಾಲದಲ್ಲಿ ಲಕ್ಷಪತಿಯೋ ಕೋಟಿಪತಿಯೋ ಆಗುವನು. ಅವರೊಡನೆ ಸ್ಪರ್ಧೆಯನ್ನು ಮಾಡುವವನಂತೆ ಧ್ಯಾನಾಭ್ಯಾಸವನ್ನು ಮಾಡುತ್ತ ಬಂದರೆ ಅಷ್ಟು ಕಾಲದಲ್ಲಿ ಇವನಧ್ಯಾನವು ದೃಢವಾಗದೆ ಹೇಗೆ ಹೋಗುತ್ತದೆ? ಆದಕಾರಣ ಮೇಲಿಂದ ಮೇಲೆ ಅಡ್ಡಬಂದು ನಿಷ್ಪ್ರಯೋಜಕ ಸಂಕಲ್ಪ ವಿಕಲ್ಪಗಳನ್ನು ಉದ್ದಾಲಕನಂತೆ ಪ್ರಯತ್ನದಿಂದ ಹಿಮ್ಮೆಟ್ಟಿಸಿ ಮನಸ್ಸನ್ನು ಅಹಂಕಾರದಿಂದ ಕೂಡಿದ ಆತ್ಮಸ್ವರೂಪವಾದ ಜ್ಞಾನಾತ್ಮನಲ್ಲಿ ಮುಳುಗಿಸಬೇಕು. ಹೀಗೆ ಎರಡನೇದಾದ ಮನೋಭೂಮಿಕೆಯನ್ನು ಗೆದ್ದು ಹುಡುಗರಂತೆ ಅಥವಾ ಮೂಕರಂತೆ ನಿರ್ಮನಸ್ಕಸ್ಥಿತಿಯನ್ನು ಹೊಂದಿ ಆ ಮೇಲೆ ಆ ರೀತಿಯಲ್ಲಿ ಹೆಚ್ಚು ಸ್ಪಷ್ಟವಾಗಿ ವಿಶೇಷಾಹಂಕಾರದಿಂದ ಕೂಡಿರುವಂಥ ಜ್ಞಾನಾತ್ಮನನ್ನು ಅಸ್ಪಷ್ಟವಾದ ಸಾಮಾನ್ಯಾಹಂಕಾರದಿಂದ ಕೂಡಿರುವಂಥ ಮಹತ್ತತ್ತ್ವದೊಳಕ್ಕೆ ಸೇರಿಸಿ ಬಿಡಬೇಕು. ಸ್ವಲ್ಪ ಅಲಸಿಕೆ ಯುಂಟಾದರೆ ವಿಶೇಷಾಹಂಕಾರವು ತನಗೆ ತಾನೇ ಹೇಗೆ ಕಡಿಮೆಯಾಗುತ್ತದೆಯೋ ಹಾಗೆ ಅಲಸಿಕೆಯಿಲ್ಲದೆಯೇ ಅಹಂಕಾರವನ್ನು ಮರೆಯುವದಕ್ಕೆ ಪ್ರಯತ್ನ ಪಡುವಾತನಿಗೆ ಅಹಂಕಾರವು ಕಡಿಮೆಯಾಗುವದು. ಇದೇ ಎಲ್ಲರಿಗೂ ಗೊತ್ತಿರುವ ಆಲಸ್ಯದಂತೆಯೂ ತಾರ್ಕಿಕರು ಹೇಳುವ ನಿರ್ವಿಕಲ್ಪಕಜ್ಞಾನಕ್ಕೂ ಸಮಾನವಾಗಿಯೂ ಇರುವ ಸ್ಥಿತಿಯು. ಇದರಲ್ಲಿ ಮಹತ್ತತ್ತ್ವ ಮಾತ್ರವೇ ಉಳಿದಿರುವದು. ಇದೇ ಮೂರನೇ ಮೆಟ್ಟಿಲು. ಈ ಅಭ್ಯಾಸವನ್ನು ಮಾಡಿ ಮಾಡಿ ಆ ಮೇಲೆ ಸಾಮಾನ್ಯಾಹಂಕಾರ ರೂಪವಾದ ಮಹಾತ್ಮನನ್ನು ಮನಸ್ಸಿನ ಸೋಂಕೇ ಇಲ್ಲದೆ ಚಿದಾನಂದ ಸ್ವರೂಪನಾದ ಶಾಂತಾತ್ಮನಲ್ಲಿ ಹಾಕಿ ತಳವನ್ನು ಹಿಡಿಸಿ ಬಿಡಬೇಕು. ಹಿಂದೆ ಹಿಂದಿನ ಭೂಮಿಕೆಗಳು ಹೆಚ್ಚು

ಷ್ಟು ಗಟ್ಟಿಯಾಗಿರಬೇಕೆಂಬುದನ್ನು ಮಾತ್ರ ಮರೆಯಬಾರದು. ಶಾಸ್ತ್ರವನ್ನು ಕಲಿಯುವ ಕ್ಕೆ ಹೊರಟವನು ಶಬ್ದಜ್ಞಾನವುಂಟಾಗುವದಕ್ಕೆ ಮೊದಲು ಪ್ರತಿಗ್ರಂಥದ ವ್ಯಾಖ್ಯಾನ ನ್ನೂ ನೋಡಬೇಕಾಗಿದ್ದರೂ ಆ ಜ್ಞಾನ ಚನ್ನಾಗಿ ಉಂಟಾದ ಮೇಲೆ ಮುಂದಿನಗ್ರಂಥವು ನಗೆ ತಾನೇ ಅರ್ಥವಾಗುವಂತೆ ಹಿಂದ ಹಿಂದಣ ಭೂಮಿಕೆಗಳು ಹೆಚ್ಚು ಹೆಚ್ಚು ಗಟ್ಟಿಯಾ ದಷ್ಟೂ ಮುಂದ ಮುಂದಣ ಭೂಮಿಕೆಗಳ ಉಪಾಯಗಳು ತಮಗೆ ತಾವೇ ತೋರುವವು. ಂದು ಭೂಮಿಕೆಯಿಂದಲೇ ಇನ್ನೊಂದು ಭೂಮಿಕೆಯನ್ನು ತಿಳಿದು ಕೊಳ್ಳಬೇಕು. ಒಂದು ನ್ನೊಂದಕ್ಕೆ ದಾರೀ ತೋರಸುತ್ತದೆ. ಒಂದೊಂದನ್ನು ಗಟ್ಟಿಮಾಡಿಕೊಂಡವನು ಶಾಶ್ವತ ವಾದ ಆನಂದವನ್ನು ಪಡೆಯುವನು. ಮಹತ್ತತ್ತ್ವಕ್ಕೂ ಶಾಂತಾತ್ಮನಿಗೂ ನಡುವೆ ಮಹ- ತ್ತ್ವದ ಉಪಾದಾನಕಾರಣವಾದ ಅವ್ಯಕ್ತವೆಂಬುದೊಂದಿರುವದೆಂದು ಶ್ರುತಿಯಲ್ಲಿ ದಾಹರಿಸಿರುವದರಿಂದ ಮಹತ್ತತ್ತ್ವವನ್ನು ತೆಗೆದುಕೊಂಡು ಹೋಗಿ ಅವ್ಯಕ್ತದಲ್ಲಿ ಮುಳುಗಿಸಿ ಬಿಡಬೇಕೆಂದೇಕೆ ಹೇಳಲಿಲ್ಲವೆಂದರೆ ಹಾಗೆ ಮಾಡಿದರೆ ಅದು ಕಾಣದಂತೆಯೇ ಗಿ ಬಿಡುತ್ತದೆ. ಗಡಿಗೆಯನ್ನು ಅದರ ಉಪಾದಾನಕಾರಣವಲ್ಲದ ನೀರಿನಲ್ಲಿ ಮುಳುಗಿಸಿದರೆ ಕಾಣದಂತೆ ಆಗುವದಿಲ್ಲ. ಅದರ ಉಪಾದಾನಕಾರಣವಾದ ಮಣ್ಣಿನಲ್ಲಿ ಬೆರೆಸಿಟ್ಟರೆ ಕಾಣದಂತಾಗಿ ಬಿಡುವದು. ಅದೇರೀತಿಯಲ್ಲಿ ಮಹತ್ತತ್ತ್ವವನ್ನು ಆತ್ಮನಲ್ಲಿ ಹಾಕಿಟ್ಟರೆ ಕಾಣದಂತಾಗುವದಿಲ್ಲ; ಅವ್ಯಕ್ತದಲ್ಲಿ ಹಾಕಿಟ್ಟರೆ ಅದರ ಇರುವಿಕೆಯೆಂಬುದು ಕಾಣ ದಂತೆಯೇ ಆಗಿಬಿಡುತ್ತದೆ. ಇರುವಿಕೆಯೆಂಬುದನ್ನು ಕಾಣದಂತೆಮಾಡಿಕೊಳ್ಳುವದೇ ಪುರುಷಾರ್ಥವಲ್ಲ. ಇರುವಿಕೆಯೆಂಬುದೇ ಕಾಣದೇ ಹೋದಮೇಲೆ ಆತ್ಮಸಾಕ್ಷಾತ್ಕಾರವು ಆಗುವದು ಯಾರಿಗೆ? ಸೂಕ್ಷ್ಮಸ್ವರೂಪವನ್ನು ನೋಡಬಲ್ಲಂಥವರು ಸೂಕ್ಷ್ಮವಾದ ಏಕಾಗ್ರಬುದ್ಧಿಯಿಂದ ಆತ್ಮಸ್ವರೂಪವನ್ನು ಕಾಣುವರೆಂದು ಮೊದಲು ಹೇಳಿದ ಮೇಲೆ ನಿರೋಧಸಮಾಧಿಯ ಪ್ರಯತ್ನ ಹೇಳಿರುವದು. ಸೂಕ್ಷ್ಮತ್ವ ಸಿದ್ಧಿಯಾಗುವದಕ್ಕೇ ಹೊರತು ತನ್ನ ಇರುವಿಕೆಯನ್ನೇ ಕಳೆದುಕೊಳ್ಳುವದಕ್ಕಲ್ಲ. ತನ್ನ ಇರುವಿಕೆಯ ಅರಿವೇ ಇಲ್ಲದಂತಾಗುವದನ್ನು ಪ್ರತಿದಿನವೂ ನಿದ್ರೆಯಲ್ಲಿ ಎಲ್ಲರೂ ಅನುಭವಿಸುತ್ತಲೇ ಇರುವದರಿಂದ ಅದಕ್ಕಾಗಿ ಪ್ರಯತ್ನ ಮಾಡಬೇಕಾದ ಕೆಲಸವೇನೂ ಇಲ್ಲ. ಧಾರಣಾ ಧ್ಯಾನ ಮತ್ತು ಸಮಾಧಿಗಳಿಂದ ಪಡೆಯುವಂಥ ಸಂಪ್ರಜ್ಞಾತ ಸಮಾಧಿಯಲ್ಲಿ ಮನಸ್ಸಿಗೆ ಏಕಾಗ್ರವೃತ್ತಿ ಇರುವದರಿಂದ ಅದು ಆತ್ಮಸ್ವರೂಪವನ್ನು ನೋಡುವದಕ್ಕೆ ಸಾಧನವಾದರೂ ಶಾಂತಾತ್ಮ ನಲ್ಲಿ ನೆಲೆಗೊಂಡಂಥ ಅಸಂಪ್ರಜ್ಞಾತ ಸಮಾಧಿಯನ್ನು ಪಡೆದವನಿಗೆ ಮನಸ್ಸಿನ ವೃತ್ತಿಗಳೇ ಇಲ್ಲದಿರುವದರಿಂದ ನಿದ್ರೆಯಲ್ಲಿ ಹೇಗೋ ಹಾಗೆ ಇದರಲ್ಲಿಯೂ ಅದು ನೋಡುವದಕ್ಕೆ ಸಾಧನವಾಗಲಾರದೆಂದರೆ ಹಾಗಲ್ಲ. ಆಗ ಕಾಣುವಿಕೆಯು ತನಗೆ ತಾನೇ ಆಗುವದು. ಅದನ್ನು ಹೋಗಿಸುವದಕ್ಕಾಗುವದಿಲ್ಲ. ಅದುದರಿಂದಲೇ ಮನಸ್ಸು ಯಾವಾಗಲೂ ಆತ್ಮಾ ಕಾರವಾಗಿಯೋ ಅಥವಾ ಅನಾತ್ಮಕಾರವಾಗಿಯೋ ಯಾವದಾದರೊಂದನ್ನು ಹಿಡಿದು ಕೊಂಡೇ ಇರುವ ಸ್ವಭಾವದ್ದಾದ್ದರಿಂದ ಅದನ್ನು ಹೊರಗೆ ಹೋಗಿ ಅನಾತ್ಮಾಕಾರ

ವಾಗದಂತೆ ಹಿಂದಿರುಗಿಸಿಕೊಂಡು ಒಳಗೇ ಆತ್ಮಾಕಾರವಾಗಿ ಮಾಡಿಕೊಳ್ಳಬೇಕೆಂದು ಶ್ರೇಯೋ ಮಾರ್ಗದಲ್ಲಿ ಹೇಳಿರುವದು. ಒಂದು ಗಡಿಗೆ ಹುಟ್ಟುವಾಗ ಸ್ವಭಾವವಾಗಿ ಒಳಗೆ ಗಾಳಿಯನ್ನು ತುಂಬಿಕೊಂಡೇ ಹುಟ್ಟುತ್ತದೆ. ಅದು ಹಾಗೆ ಹುಟ್ಟಿದ ಮೇಲೆ ಮನುಷ್ಯರು ಅದರೊಳಕ್ಕೆ ನೀರನ್ನೋ ಅಕ್ಕಿಯನ್ನೋ ತಮಗೆ ಬೇಕಾದುದನ್ನು ತುಂಬುತ್ತಾರೆ. ಹಾಗೆ ಮನುಷ್ಯರು ಪ್ರಯತ್ನದಿಂದ ತುಂಬಿದಂಥ ನೀರನ್ನೂ ಅಕ್ಕಿಯನ್ನೂ, ಹೊರಕ್ಕೆ ಸುರಿದರೂ ಒಳಗೆ ಗಾಳಿ ಇದ್ದೇ ಇರುವದು. ಅದನ್ನು ಹೊರಕ್ಕೆ ಸುರಿಯುವದಕ್ಕೆ ಆಗುವದಿಲ್ಲ. ಅದರ ಬಾಯಿಯನ್ನು ಮುಚ್ಚಿ ಬಿಟ್ಟರೂ ಒಳಗೆ ಗಾಳಿ ಇದ್ದುಕೊಂಡೇ ಇರುವದು. ಅದರಂತೆಯೇ ಮನಸ್ಸು ಹುಟ್ಟುವಾಗಲೇ ಆತ್ಮಚೈತನ್ಯವನ್ನು ತುಂಬಿಕೊಂಡೇ ಹುಟ್ಟುತ್ತದೆ. ಹಾಗೆ ಚಿತ್ತವು ಹುಟ್ಟಿದಮೇಲೆ ಮೂಷೆಯಲ್ಲಿ ಎರೆದಂಥ ತಾಮ್ರವೊದಲಾದವುಗಳಂತೆ ತನ್ನ ಹಿಂದಿನ ಧರ್ಮಕ್ಕೂ ಅಧರ್ಮಕ್ಕೂ ತಕ್ಕಂತೆ ಸುಖಕ್ಕೂ ದುಃಖಕ್ಕೂ ಸಾಧನವಾದಂಥ ಬಗೆ ಬಗೆಯ ವಿಷಯಾಕಾರವಾಗುತ್ತದೆ. ಆ ಮನಸ್ಸಿನ ವಿಷಯಾಕಾರಗಳನ್ನೆಲ್ಲಾ ಹೊರಡಿಸಿಬಿಟ್ಟರೂ ಚಿದಾಕಾರವನ್ನು ಹೊರಡಿಸುವದಕ್ಕೆ ಆಗುವದಿಲ್ಲ. ಆದಕಾರಣ ಸೂಕ್ಷ್ಮವಾಗಿ ಸಂಸ್ಕಾರ ಮಾತ್ರವಾಗಿ ಉಳಿದುಕೊಂಡು ಯಾವದೊಂದು ವೃತ್ತಿಯೂ ಇಲ್ಲದ ನಿರೋಧಸಮಾಧಿಯಲ್ಲಿ ಚಿದಾತ್ಮವೊಂದೇ ಮುಂದೆ ನಿಲ್ಲುವದರಿಂದ ಏಕಾಗ್ರವಾದ ಚಿತ್ತದಿಂದ ಯಾವ ಅಡ್ಡಿಯೂ ಇಲ್ಲದೆ ಆತ್ಮಾನುಭವವನ್ನು ಮಾಡಬಹುದು. ಈ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡೇ ಮನಸ್ಸು ಸುಖ ದುಃಖ ಮೊದಲಾದ ರೂಪಗಳನ್ನು ಪಡೆದರೆ ಅದು ಬುದ್ಧಿಗೆ ಧರ್ಮ ಅಧರ್ಮ ಮೊದಲಾದವುಗಳನ್ನು ಗಂಟು ಹಾಕುವದರಿಂದಲೂ ಬಂದರ ಗೋಜಾ ಇಲ್ಲದಂಥ ಆತ್ಮಜ್ಞಾನ ರೂಪದಲ್ಲಿರುವದೇ ಅದರ ಹುಟ್ಟುಗುಣ ವಾದುದರಿಂದಲೂ ವೃತ್ತಿಗಳೆಲ್ಲಾ ನಿಂತು ಹೋದ ಮನಸ್ಸು ಪರಮಾನಂದವನ್ನು ತೋರಿಸುವದರಿಂದ ಈ ಅಸಂಪ್ರಜ್ಞಾತವೆಂಬ ಸಮಾಧಿಯು ಯೋಗಿಗಳಿಗೆಲ್ಲಾ ಪ್ರಿಯವಾದುದೆಂದು ವಾರ್ತಿಕಕಾರರೂ ಸರ್ವಾನುಭವಯೋಗಿಗಳೂ ಹೇಳಿರುವರು. ಆತ್ಮದರ್ಶನವೆಂಬುದು ತಾನಾಗಿ ಇದ್ದೇ ಬಿಟ್ಟಿರುವದು. ಅನಾತ್ಮದರ್ಶನವನ್ನು ಹೋಗಲಾಡಿಸುವದಕ್ಕಾಗಿ ನಿರೋಧ ಸಮಾಧಿಯನ್ನು ಅಭ್ಯಾಸಮಾಡಬೇಕು. ಇಷ್ಟೆ. ಈ ಕಾರಣದಿಂದಲೆ ಮನಸ್ಸನ್ನು ಆತ್ಮ ಸ್ವರೂಪದಲ್ಲಿಯೇ ನೆಲೆಗೊಳಿಸಿ ಮನಸ್ಸಿನೊಳಕ್ಕೆ ಇನ್ನೊಂದನ್ನು ಬಿಟ್ಟುಕೊಳ್ಳದೆ ಇರಬೇಕೆಂದೇ ಒಂದು ವಚನವಿರುವದು. ಯೋಗಶಾಸ್ತ್ರವು ಮನಸ್ಸನ್ನು ತಿದ್ದಿ ತಿದ್ದಿ ಪಡೆಯುವಂಥ ಸಮಾಧಿಗಳ ವಿಚಾರಕ್ಕೆ ಹೊರಟದ್ದಾದ್ದರಿಂದ ನಿರೋಧಸಮಾಧಿಯಲ್ಲಿ ಆತ್ಮದರ್ಶನವಾಗುವದೆಂದು ಅಲ್ಲಿ ಬಾಯಿಬಿಟ್ಟು ಹೇಳಿಲ್ಲ. ಆದರೂ ಅವರು ಬೇರೆರೀತಿಯಿಂದ ಈ ಅಭಿಪ್ರಾಯವನ್ನೇ ತೋರಿಸಿಕೊಂಡಿರುತ್ತಾರೆ. ಮೊದಲು "ಯೋಗವೆಂದರೆ ಮನಸ್ಸಿನ ವೃತ್ತಿಗಳನ್ನು ಹಿಡಿಯುವದು" ಎಂದು ಹೇಳಿ ಆಮೇಲೆ "ವೃತ್ತಿಗಳೆಲ್ಲಾ ಅಡಗಿದಾಗ ಅವನು ಆತ್ಮಸ್ವರೂಪದಲ್ಲಿರುವನು" ಎಂದು ಹೇಳಿರುತ್ತಾರೆ. ಯಾವ ಬದಲಾವಣೆಗಳನ್ನೂ ಹೊಂದದೆ ಇರುವಂಥ ಆತ್ಮನು ಯಾವಾಗಲೂ ತನ್ನ ಸ್ವರೂಪದಲ್ಲಿ ತಾನು ಇದ್ದೇ

ಇರುವನಾದರೂ ಒಂದರ ಮೇಲೊಂದು ವೃತ್ತಿಗಳು ಹುಟ್ಟಿದಾಗ ಅದರಲ್ಲಿ ಆ ಚಿದ್ರೂಪವು ಪ್ರತಿಬಿಂಬಿಸಲಾಗಿ ಅವನು ಅದು ಪ್ರತಿಬಿಂಬವೆಂದು ತಿಳಿಯಲರಿಯದ ಅವಿವೇಕದಿಂದ ಆತ್ಮಸ್ವರೂಪದಲ್ಲಿಲ್ಲದವನಂತೆ ಆಗುವನು. ಈ ಅಭಿಪ್ರಾಯವನ್ನು ಯೋಗಶಾಸ್ತ್ರಕಾರರು" ಏಕಾಗ್ರವೃತ್ತಿ ಇಲ್ಲದ ಕಡೆಗಳಲ್ಲೆಲ್ಲಾ ಅವನು ಆಯಾ ವೃತ್ತಿಗಳಂತೆಯೇ ಆಗಿ ಬಿಟ್ಟಿರುವನು." ಎಂದರ್ಥವನ್ನು ಕೊಡುವ ಸೂತ್ರದಲ್ಲಿ ಅಡಗಿಸಿರುತ್ತಾರೆ. "ಸತ್ತ್ವ ಮತ್ತು ಪುರುಷ ಇವೆರಡೂ ಅತ್ಯಂತ ಬೇರೆ ಬೇರೆ ಯಾದವುಗಳು; ಇವುಗಳನ್ನು ಒಂದನ್ನು ಒಂದೆಂದು ತಿಳಿಯುವುದೇ ಸುಖ ದುಃಖ ಭೋಗ ವೆನಿಸುವುದೆಂದೂ "ಚಿದ್ರೂಪನಾದ ಪುರುಷನು ಮತ್ತೊಂದರೊಡನೆ ಬೆರೆಯುವವನಲ್ಲ. ಅವನ ಸನ್ನಿಧಿ ಮಾತ್ರದಿಂದ ಬುದ್ಧಿಯು ಅವನ ಆಕಾರವನ್ನು ಪಡೆಯುತ್ತಲು ಬುದ್ಧಿಗೆ ಆತ್ಮಜ್ಞಾನವಾಗುವದೆಂದೂ ಅಭಿಪ್ರಾಯವನ್ನು ಕೊಡುವ ಯೋಗ ಸೂತ್ರಗಳುಂಟು. ನಿರೋಧಸಮಾಧಿಯಲ್ಲಿ "ತ್ವಂ" ಪದದ ಅರ್ಥವಾದ ಆತ್ಮವನ್ನು ಸಾಕ್ಷಾತ್ಕಾರ ಮಾಡಿಕೊಂಡಾಗ್ಯೂ ಆತ್ಮವೇ ಬ್ರಹ್ಮವೆಂದು ಅರಿಯುವದಕ್ಕೆ ಮಹಾವಾಕ್ಯದಿಂದ ಬ್ರಹ್ಮವಿದ್ಯೆಯೆಂಬ ಮತ್ತೊಂದು ವೃತ್ತಿಯುಂಟಾಗುವದು. "ತ್ವಂ" ಪದಾರ್ಥವನ್ನು ತಿಳಿಯುವದಕ್ಕೆ ನಿರೋಧಸಮಾಧಿಯೊಂದೇ ಉಪಾಯವೆಂತಲೂ ಹೇಳಲಾಗುವುದಿಲ್ಲ. ಇದು ಚೇತನ ಇದು ಜಡವೆಂಬ ವಿವೇಕದಿಂದ ಅದನ್ನು ಬೇರ್ಪಡಿಸಿದರೆ ಸಾಕ್ಷಾತ್ಕಾರವಾಗುವದು. ಆದುದರಿಂದಲೇ ಮನಸ್ಸಿನ ನಾಶಕ್ಕೆ ಜ್ಞಾನವೆಂದೂ, ಯೋಗವೆಂದೂ, ಎರಡು ಕ್ರಮಗಳನ್ನು ಒಪ್ಪಿಕೊಳ್ಳಬೇಕು. ವೃತ್ತಿಗಳನ್ನು ತಡೆಯುವದು ಯೋಗ. ವಿವೇಕಪೂರ್ವಕವಾಗಿ ನೋಡುವದು ಜ್ಞಾನ. ಒಬ್ಬರಿಗೆ ಯೋಗವು ಸಾಧ್ಯವಲ್ಲ. ಒಬ್ಬರಿಗೆ ವಿವೇಕವು ಸಾಧ್ಯವಲ್ಲ. ಇದನ್ನು ನೋಡಿಯೇ ಪರಮೇಶ್ವರನು ಈ ಎರಡು ಕ್ರಮಗಳನ್ನು ಹೇಳಿರುವನೆಂದು ವಸಿಷ್ಠರು ಹೇಳಿದ್ದಾರೆ. ವಿವೇಕವಾದರೂ ಆತ್ಮದರ್ಶನದ ಸಮಯದಲ್ಲಿ ಆತ್ಮಮಾತ್ರವೇ ಗೋಚರವಾಗುವಂಥ ಏಕಾಗ್ರವೃತ್ತಿರೂಪವಾದ ಕ್ಷಣಿಕಸಂಪ್ರಜ್ಞಾತ ರೂಪವಾಗಿರುವದರಿಂದ ಯೋಗರೂಪದಲ್ಲಿಯೇ ಕೊನೆಗಂಡಂತಾಗಲಿಲ್ಲವೆ? ಎಂದರೆ ನಿಜ. ಆದರೂ ಸಂಪ್ರಜ್ಞಾತಕ್ಕೂ ಅಸಂಪ್ರಜ್ಞಾತಕ್ಕೂ ಸ್ವರೂಪದಿಂದಲೂ ಸಾಧನದಿಂದಲೂ ಎಷ್ಟೋ ಅಂತರವಿದೆ. ಸ್ವರೂಪದಲ್ಲಿ ಅವುಗಳ ಭೇದವೇನೆಂದರೆ—ಒಂದಕ್ಕೆ ವೃತ್ತಿ ಇದೆ, ಇನ್ನೊಂದಕ್ಕೆ ವೃತ್ತಿಯೇ ಇಲ್ಲ. ಸಾಧನದಲ್ಲಿ ಭೇದವೇನೆಂದರೆ—ವೃತ್ತಿ ಇರುವಂಥ ಸಂಪ್ರಜ್ಞಾತಕ್ಕೆ ಅದೇಜಾತಿಯಾದ ಧಾರಣಾಧ್ಯಾನ ಸಮಾಧಿಗಳು, ಅಂತರಂಗಗಳು. ವೃತ್ತಿಯೇ ಇಲ್ಲದಂಥ ಅಸಂಪ್ರಜ್ಞಾತಕ್ಕೆ ಆ ಜಾತಿಗೆ ಸೇರದೆ ಇರುವ ಕಾರಣ ಧಾರಣಾಧ್ಯಾನಸಮಾಧಿಗಳು ಬಹಿರಂಗಗಳು. ವೃತ್ತಿಯೇ ಇಲ್ಲದಂಥ ಅಸಂಪ್ರಜ್ಞಾತಕ್ಕೆ ಆ ಜಾತಿಗೆ ಸೇರದೆ ಇರುವಕಾರಣ ಧಾರಣಾಧ್ಯಾನ ಸಮಾಧಿಗಳು ಬಹಿರಂಗಗಳು. ವೃತ್ತಿಯೇ ಇಲ್ಲದಂಥ ಅಸಂಪ್ರಜ್ಞಾತಕ್ಕೆ ಆ ಜಾತಿಗೆ ಸೇರದೆ ಇರುವ ಧಾರಣಾಧ್ಯಾನ ಸಮಾಧಿಗಳು ಬಹಿರಂಗವಾಗಿಯಾದರೂ ಹೇಗೆ ಸಾಧನಗಳಾಗುವವೆಂದರೆ—ಬಗೆಬಗೆಯಾದ ಅನಾತ್ಮವೃತ್ತಿಗಳನ್ನು ಹೋಗಲಾಡಿಸುವದಕ್ಕೆ ಅವು ಸಹಾಯ

ವಾಗುವದರಿಂದ ಅವುಗಳನ್ನು ಬಹಿರಂಗಸಾಧನಗಳೆಂದೊಪ್ಪಿಕೊಳ್ಳಬೇಕು. ಯೋಗಶಾಸ್ತ್ರಕಾರರು ಕೆಲವುದೇವತೆಗಳಿಗೆ ಹುಟ್ಟುವಾಗಲೆ ಸಮಾಧಿ ಇರುವದೆಂದು ಹೇಳಿ ಮನುಷ್ಯರಿಗೆ ಆ ಸಮಾಧಿಯು ಶ್ರದ್ಧೆ, ವೀರ್ಯ, ಸ್ಮೃತಿ, ಸಮಾಧಿ, ಪ್ರಜ್ಞೆ ಇವುಗಳಿಂದುಂಟಾಗುವದೆಂದು ಹೇಳಿದ್ದಾರೆ. ನನ್ನ ಪರಮಪುರುಷಾರ್ಥಕ್ಕೆ ಈ ಯೋಗವೊಂದೇ ಸಾಧನವೆಂಬ ವಿಶ್ವಾಸವೇ ಶ್ರದ್ಧೆ. ಯೋಗವೇ ಹೆಚ್ಚಿನದೆಂಬ ನುಡಿಗಳನ್ನು ಕೇಳಿ ಕೇಳಿ ಅದು ಹುಟ್ಟುತ್ತದೆ. ಯೋಗಿಯು ತಪಸ್ವಿಗಳಿಗಿಂತಲೂ ಜ್ಞಾನಿಗಳಿಗಿಂತಲೂ ಕರ್ಮಿಗಳಿಗಿಂತಲೂ ಹೆಚ್ಚಿನವನಾದುದರಿಂದ ನೀನು ಯೋಗಿಯಾಗೆಂದು ಶ್ರೀ ಕೃಷ್ಣನು ಅರ್ಜುನನಿಗೆ ಹೇಳಿರುವನು. ಕೃಚ್ಛ್ರ, ಚಾಂದ್ರಾಯಣ ಮೊದಲಾದ ವ್ರತಗಳೂ ಜ್ಯೋತಿಷ್ಟೋಮ ಮೊದಲಾದ ಯಜ್ಞಗಳೂ ಬರೀ ಉತ್ತಮ ಲೋಕವನ್ನು ಮಾತ್ರ ಕೊಡುವವಾದುದರಿಂದ ಯೋಗವು ಅವುಗಳಿಗಿಂತಲೂ ಹೆಚ್ಚಿನದು. ಜ್ಞಾನಕ್ಕೆ ಇದು ಕೇವಲ ಹತ್ತಿರದ ಸಾಧನವಾದುದರಿಂದಲೂ ಮನಸ್ಸನ್ನು ಸಮತ್ವಕ್ಕೆ ನಿಲ್ಲಿಸುವ ಸಾಮರ್ಥ್ಯವೊಂದು ಇದಕ್ಕೆ ಇರುವದರಿಂದಲೂ ಇದು ಜ್ಞಾನಕ್ಕಿಂತಲೂ ಕೂಡ ಹೆಚ್ಚಿನದು. ಹೀಗೆ ತಿಳಿದುಕೊಳ್ಳುವದರಿಂದ ಯೋಗದಲ್ಲಿ ಜ್ಞಾನಕ್ಕಿಂತ ಹೆಚ್ಚಿನ ಶ್ರದ್ಧೆಯುಂಟಾಗುತ್ತದೆ. ಆ ಶ್ರದ್ಧೆಯನ್ನೇ ಚನ್ನಾಗಿ ಬೆಳೆಸಿಕೊಂಡರೆ ಮೈತುಂಬ ಹುರಿತುಂಬಿ ಈ ಯೋಗವನ್ನು ಸಂಪಾದಿಸದೆ ಎಂದೆಂದಿಗೂ ಬಿಡುವದಿಲ್ಲವೆಂಬ ಉತ್ಸಾಹವುಂಟಾಗುವದು. ಈ ಬಗೆಯಾದ ಉತ್ಸಾಹವುಂಟಾಗುವದರಿಂದ ಯೋಗದ ಅಂಗಗಳು ಅವುಗಳನ್ನು ಆಚರಿಸಬೇಕಾದ ಹೊತ್ತಿಗೆ ಸರಿಯಾಗಿ ನೆನಪಿಗೆ ಬರುತ್ತವೆ. ಆ ನೆನಪಿನಿಂದ ಸಮಾಧಿಯನ್ನು ಚನ್ನಾಗಿ ಸಾಧಿಸುವದರಿಂದ ಮನಸ್ಸು ಪ್ರಸನ್ನವಾಗಿ ಅವನಿಗೆ ನಿಜವಾದ ಸ್ವರೂಪದ ತಿಳಿವಳಿಕೆ ಯುಂಟಾಗುವದು. ಅದರ ಮೂಲಕವಾಗಿ ಅಸಂಪ್ರಜ್ಞಾತಸಮಾಧಿಯು ದೇವತೆಗಳಲ್ಲದ ಈಗೀಗಿನ ಮನುಷ್ಯರಿಗೆ ಕೂಡ ಸಿದ್ಧಿಸುವದು. ದೂರವಲ್ಲಿದ್ದು ನಡುವೆ ಏನಾದರೂ ಅಡ್ಡಬಂದಿರುವ ಸಣ್ಣವಸ್ತುಗಳ ವಿಷಯದಲ್ಲಿ ಆಗಮದಿಂದಲೂ ಅನುಮಾನದಿಂದಲೂ ಯೋಗಿಗಳಲ್ಲದವರೂ ಕೂಡ ತಿಳಿವಳಿಕೆಯನ್ನು ಪಡೆಯುವರು. ಆದರೆ ಅದು ಸಾಮಾನ್ಯಜ್ಞಾನವಾಗಿರುವದು. ಆಗಮಗಳಾಗಲಿ ಅನುಮಾನಗಳಾಗಲಿ ಮುಟ್ಟಲರಿಯದಂಥ, ಸೂಕ್ಷ್ಮವಾದಂಥ, ಎಲ್ಲೆಲ್ಲಿಯೂ ತುಂಬಿಕೊಂಡಿರ್ಮವಂಥ ಅತ್ಯಂತ ಕ್ರಷ್ಟವಾದಂಥ ವಸ್ತುವಿನ ವಿಶೇಷಜ್ಞಾನವು ಯೋಗಿಗೆ ಆಗುವದು. ಇಂಥ ಜ್ಞಾನವು ಯೋಗಿಗಳಲ್ಲದವರಿಗೆಂದಿಗೂ ಆಗಲಾರದು. ಈ ತಿಳಿವಳಿಕೆಯ ಮೂಲಕವಾದ ಸಮಾಧಿಯಿಂದುಂಟಾಗುವ ಸಂಸ್ಕಾರವು ಉಳಿದ ವಾಸನೆಗಳನ್ನೆಲ್ಲಾ ನಿಲ್ಲಿಸುವದು. ಉಳಿದ ಸಂಸ್ಕಾರಗಳನ್ನೆಲ್ಲ ತಗ್ಗಿಸುವ ಸಂಸ್ಕಾರವನ್ನು ಕೂಡ ತಡೆಯುವದರಿಂದ ಎಲ್ಲವನ್ನೂ ತಡೆದಂತಾಗಿ ಬೀಜವಿಲ್ಲದ ಸಮಾಧಿಯುಂಟಾಗುವದು. ಈ ಸಮಾಧಿಯು ಗಾಢನಿದ್ರೆಗೆ ಸಮಾನವಾಗಿರುವದು. ಮತ್ತೂ ಸಾಕ್ಷಿಚೈತನ್ಯಕ್ಕೆಮಾತ್ರ ಅನುಭವವಾಗುವದು. ಇದರಲ್ಲಿ ಯಾವದೊಂದು ವೃತ್ತಿಯೂ ಇಲ್ಲವೆಂಬುದರಮೇಲೆ ಇದು ಗಾಢನಿದ್ರೆಯೇ ಎಂದು ಯೋಚಿಸ ಬಾರದು. ಒಂದರಲ್ಲಿ ಮನಸ್ಸಿರುವದು, ಇನ್ನೊಂದರಲ್ಲಿ ಮನಸ್ಸಿರುವದಿಲ್ಲ.

ಹೀಗೆ ಇವೆರಡಕ್ಕೂ ವ್ಯತ್ಯಾಸವಿರುವದು. ಬಿಗಿ ಹಿಡಿದ ಮನಸ್ಸು ಅಲ್ಲಾಡದೆ ನಿಂತರೆ ಅದನ್ನು ಗಾಢನಿದ್ರೆಗೆ ಸಮವೆನ್ನದೆ ಗಾಢನಿದ್ರೆಗಿಂತ ಬೇರೆಯಾದುದೆಂದು ತಿಳಿಯಬೇಕೆಂದೂ ಮನಸ್ಸು ಗಾಢನಿದ್ರೆಯಲ್ಲಿ ಇಲ್ಲದಂತೆಯೇ ಆಗಿಬಿಡುವದೆಂದೂ ಸಮಾಧಿಯ ಬಿಗಿತಕ್ಕೆ ಸಿಕ್ಕಿದ ಮನಸ್ಸು ಇದ್ದೂ ಇಲ್ಲದಂತಾಗಿರುವದೆಂದೂ ಗೌಡಪಾದಾಚಾರ್ಯರು ಹೇಳಿರುವರು. ಬಗೆ ಬಗೆಯ ರೂಪಗಳು ನಿದ್ರೆಯಲ್ಲಿರುವವನಿಗೂ ಕಾಣುವದಿಲ್ಲ. ಸಮಾಧಿಯಲ್ಲಿರುವವನಿಗೂ ಕಾಣುವದಿಲ್ಲ. ಬಗೆಬಗೆಯ ರೂಪಗಳನ್ನು ಕಾಣದೆ ಇರುವ ವಿಷಯದಲ್ಲಿ ನಿದ್ರೆಯೂ ಸಮಾಧಿಯೂ ಒಂದಕ್ಕೊಂದು ಸಮಾನವೇಸರಿ. ಆದರೆ ನಿದ್ರೆಮಾಡುವವನಲ್ಲಿ ಮುಂದೆ ಏಳುತ್ತಲೆ ಬಗೆಬಗೆಯಾದ ರೂಪಗಳನ್ನು ಕಾಣುವಿಕೆಯ ಬೀಜವಿದ್ದೇ ಇರುವದು. ಸಮಾಧಿಯಲ್ಲಿರುವವನಲ್ಲಿ ಹಾಗಿರುವದಿಲ್ಲ, ಅವನು ಸಮಾಧಿಯಲ್ಲಿರುವಾಗಲೂ ಎಲ್ಲೆಲ್ಲಿಯೂ ಒಂದೇ ವಸ್ತುವೆಂದು ನೋಡುವನು. ಸಮಾಧಿಯಿಂದೆದ್ದಮೇಲೆ ಎಲ್ಲರಿಗೂ ಆಗುವಂತೆ ಬಗೆಬಗೆಯಾದರೂಪಗಳು ಅವನ ಕಣ್ಣಿಗೆ ಬಿದ್ದರೂ ಅವುಗಳೆಲ್ಲಾ ಒಂದೇ ವಸ್ತುವಿನ ತೋರಿಕೆಗಳೆಂದೇ ಅವನು ನೋಡುತ್ತಿರುವನು. ಎಚ್ಚರದಲ್ಲಿರುವವನು ಮತ್ತು ಕನಸು ಕಾಣುವವನು ಇಬ್ಬರೂ ಬಗೆಬಗೆಯ ರೂಪಗಳನ್ನೇ ಗ್ರಹಿಸುವರು. ಮತ್ತು ಅವುಗಳೆಲ್ಲಕ್ಕೂ ಆಧಾರವಾದುದೊಂದಿರುವದೆಂಬ ತಿಳಿವಳಿಕೆ ಅವರಿಗೆ ಇರುವದಿಲ್ಲ. ನಿದ್ರೆಯಲ್ಲಿರುವವನು ಬಗೆಬಗೆಯ ರೂಪಗಳನ್ನೇನೂ ಗ್ರಹಿಸುವದಿಲ್ಲ. ಆದರೆ ಸರ್ವಾಧಾರಸ್ವರೂಪವಾದ ವಸ್ತುವಿನ ಜ್ಞಾನವೇನೂ ಅವನಿಗೆ ಇರುವದಿಲ್ಲ. ಸಮಾಧಿಯಲ್ಲಿರುವವನಿಗೆ ಆ ಸರ್ವಾಧಾರಸ್ವರೂಪದ ವಸ್ತುವಿನ ಮರವೂ ಇರುವದಿಲ್ಲ. ಹೊರಗಣ ಬಗೆಬಗೆಯ ರೂಪಗಳೂ ಅವನ ಮನಸ್ಸಿಗೆ ಹಿಡಿಯುವದಿಲ್ಲ. ನಿಜವಾದ ವಸ್ತು ಒಂದೇ ಆಗಿರುವಾಗ ಬೇರೆಬೇರೆ ಎಂದು ಕಾಣುತ್ತ ಹೋಗುವದೇ ಕನಸು. ನಿಜವಾದ ವಸ್ತುವಿನ ಜ್ಞಾನವಿಲ್ಲದಿರುವದೇ ನಿದ್ರೆ. ಇವೆರಡನ್ನು ದಾಟಿದರೆ ನಿಜವಾದ ಸರ್ವಾಧಾರವಸ್ತುವಿನ ತಿಳಿವು ತಲೆದೋರುವದು.

" ಆಗಲಿ ಅಸಂಪ್ರಜ್ಞಾತಸಮಾಧಿಗೂ ಗಾಢನಿದ್ರೆಗೂ ಹೆಚ್ಚಿನಭೇದವಿದೆಯೆಂದೊಪ್ಪಿಕೊಳ್ಳೋಣ. ಯಾವನು ಆತ್ಮಸ್ವರೂಪವನ್ನು ಕಾಣಬೇಕೆಂದಿರುವನೋ ಅವನಿಗೆ ಸಮಾಧಿಯ ಅಭ್ಯಾಸವು ಸಾಧನವಾಗುವದೆಂಬ ಮಾತು ಯೋಗ್ಯವಾಗುವದು. ಯಾವನಿಗೆ ಆತ್ಮಸ್ವರೂಪ ಜ್ಞಾನವಾಗಿರುವದೊ ಅಂಥವನು ಬದುಕಿರುವಾಗಲೇ ಭಿನ್ನಕಲ್ಪನೆಗಳ ತೊಡಕನ್ನು ಕಳೆದುಕೊಂಡು ಜೀವನ್ಮುಕ್ತಿಸುಖವನ್ನು ಕಾಣಬೇಕೆಂದರೆ ಅವನು ಸಮಾಧಿಯನ್ನೇಕೆ ಸಾಧಿಸಬೇಕು? ನಿದ್ರೆಯನ್ನು ಪಡೆದುಕೊಂಡರೇ ಸಾಕು. ರಾಗದ್ವೇಷವೊದಲಾದ ಕ್ಲೇಶಗಳೆಲ್ಲಾ ಹೋಗಿಬಿಡುವವಲ್ಲ! " ಎಂದರೆ ಅದು ಸರಿಯಲ್ಲ. ರಾಗದ್ವೇಷಗಳನ್ನು ಕಳೆಯುವ ನಿದ್ರೆಯು ಪ್ರತಿದಿನವೂ ತಾನಾಗಿಬರುವಂಥ ಸ್ವಲ್ಪಹೊತ್ತಿನ ನಿದ್ರೆಯೊ? ಅಥವಾ ಅಭ್ಯಾಸದಿಂದ ಯಾವಾಗಲೂ ಇರುವಂತೆ ಮಾಡಿಕೊಂಡಂಥ ನಿದ್ರೆಯೋ? ಸ್ವಲ್ಪ ಹೊತ್ತಿನ ನಿದ್ರೆಯಾದರೆ ಅದೇನು ನಿದ್ರೆಯ ಕಾಲದಲ್ಲಿ ಮಾತ್ರ ಕ್ಲೇಶವಿಲ್ಲದಂತೆ ಮಾಡುವದೊ? ಅಥವಾ ಉಳಿದ ಕಾಲಗಳಲ್ಲಿಯೂ ಕ್ಲೇಶವಿಲ್ಲದಂತೆ ಮಾಡುವದೋ? ನಿದ್ರೆಯಕಾಲದಲ್ಲಿ ಮಾತ್ರ

ಕ್ಲೇಶವಿಲ್ಲದಂತೆ ಮಾಡುವದೆಂಬಮಾತು ಚೆನ್ನಾಗಿಲ್ಲ. ಎಂಥ ಮೂರ್ಖರಿಗೂ ಕೂಡ ನಿದ್ರೆಯಲ್ಲಿ ಕ್ಲೇಶವಿರುವದೇ ಇಲ್ಲ. ಹಾಗೆ ಕ್ಲೇಶವಿದ್ದರೆ ಎದ್ದಮೇಲೆ ಅವರಿಗೆ ಆಯಾಸವೇ ತೋರುತ್ತಿತ್ತು. ಹಾಗೆ ಯಾರಿಗೂ ತೋರುವದಿಲ್ಲ. ಉಳಿದಕಾಲದಲ್ಲಿಯೂ ಕ್ಲೇಶವಿಲ್ಲದಂತೆ ಮಾಡುವದೆಂಬ ಮಾತು ಒಪ್ಪುವದಿಲ್ಲ. ಯಾವಾಗಲೋ ಬರುವ ನಿದ್ರೆ ಯಾವಾಗಲೂ ಬರುವ ಕ್ಲೇಶವನ್ನು ಹೇಗೆ ತಪ್ಪಿಸೀತು? ಹಾಗಾಗುವದು ಸಾಧ್ಯವಾಗಿದ್ದರೆ ಮೂರ್ಖರಿಗೆ ಕೂಡ ಎಚ್ಚರಿಕೆಯ ಕಾಲದ ಮತ್ತು ಕನಸಿನ ಕಾಲದ ಕ್ಲೇಶವೆಲ್ಲಾ ನಿದ್ರೆಯಲ್ಲಿ ಹೋಗಬೇಕಾದೀತು. ಇನ್ನು ಆ ನಿದ್ರೆಯನ್ನು ಯಾವಾಗಲೂ ಇರುವಂತೆ ಮಾಡಿಕೊಳ್ಳುವದೆಂಬುದೂ ಆಗದ ಮಾತು. ಇಷ್ಟುಹೊತ್ತು ನಿದ್ರೆಯಾಗಬೇಕೆಂಬುದೂ ಒಂದು ಕರ್ಮದ ಫಲ. ಆ ಕರ್ಮವು ಸವೆಯುತ್ತಲೇ ಅವನಿಗೆ ಎಚ್ಚರವಾಗಲೇಬೇಕು. ಏಕೆಂದರೆ ಎಚ್ಚರವೆಂಬುದು ಕರ್ಮಸವೆದುದರ ಫಲವಾಗಿದೆ. ಆದಕಾರಣ ಆತ್ಮಸ್ವರೂಪವನ್ನು ತಿಳಿಯದವರಾದರೂ ಕ್ಲೇಶವನ್ನು ಕಳೆದುಕೊಳ್ಳುವದಕ್ಕಾಗಿ ಅಸಂಪ್ರಜ್ಞಾತಸಮಾಧಿಯನ್ನು ಅಭ್ಯಾಸಮಾಡಬೇಕಾದ ಅಗತ್ಯವಿರುವದು. ಆ ಸಮಾಧಿಗೆ ಆಕಳು ಮೊದಲಾದವುಗಳಂತೆ ಮಾತಾಡದೆ ಇರುವದು ಮೊದಲನೇ ಭೂಮಿಕೆ. ಚಿಕ್ಕಮಕ್ಕಳಂತೆ ಅಥವಾ ಪಾಮರರಂತೆ ಮನಸ್ಸು ವಿಶೇಷ ಪರಿಣಾಮಪಡದಿರುವದು ಎರಡನೇ ಭೂಮಿಕೆ. ಆಲಸ್ಯದಲ್ಲಿ ಹೇಗೋ ಹಾಗೆ ಅಹಂಕಾರವಿಲ್ಲದಿರುವದು ಮೂರನೇ ಭೂಮಿಕೆ. ಗಾಢನಿದ್ರೆಯಂತೆ ಮನಸ್ಸತ್ತ್ವವಿಲ್ಲದಿರುವದು ನಾಲ್ಕನೇ ಭೂಮಿಕೆ. ಈ ನಾಲ್ಕು ಭೂಮಿಕೆಗಳನ್ನು ಚೆನ್ನಾಗಿ ಮೈಗೂಡಿಸಿಕೊಂಡು ಮೆಲ್ಲ ಮೆಲ್ಲಗೆ ಹಾಗೆಯೇ ಸುಮ್ಮನೆ ನಿಲ್ಲಿಸಿ ಬಿಡಬೇಕು. ಹೀಗೆ ಸುಮ್ಮನೆ ನಿಲ್ಲಿಸಿಬಿಡುವದಕ್ಕೆ ದೃಢನಿಷ್ಠೆಯಿಂದ ಕೂಡಿದ ಬುದ್ಧಿಯೇ ಸಾಧನ. ಮಹತ್ತೂ, ಅಹಂಕಾರವೂ, ಮನಸ್ಸೂ, ವಾಕ್ ಮೊದಲಾದವುಗಳೂ, ಒಬ್ಬರಿಗೂ ಸಿಕ್ಕದಂತೆ ತಮ್ಮ ತಮ್ಮ ಮನಸ್ಸು ಬಂದಂತೆ ಹೊರಬಿದ್ದು ದಡವನ್ನೇ ಕೆಡವಿಕೊಂಡು ಹೋಗುವ ನದಿಯಂತೆ ಓಡುತ್ತಿರುವಾಗ ಅವುಗಳನ್ನು ಬಿಗಿಹಿಡಿಯುವದಕ್ಕೆ ಬಹು ಹೆಚ್ಚಿನ ಧೈರ್ಯವು ಬೇಕಾಗುವದು. ಹಿಂದಿನ ಭೂಮಿಕೆಯು ಚೆನ್ನಾಗಿ ವಶವಾಯಿತೋ ಹೇಗೆಂಬುದನ್ನು ನೋಡಿಕೊಂಡು ಮುಂದಿನ ಭೂಮಿಕೆಗೆ ಕೈ ಹಾಕಬೇಕು. ಹಿಂದಿನದೇ ಇನ್ನೂ ನೆಟ್ಟಗೆ ನಿಂತಿರದೆ ಇದ್ದರೆ ಅದನ್ನು ಗಟ್ಟಿಮಾಡಿಕೊಳ್ಳುವದಕ್ಕೆ ಮೇಲಿಂದ ಮೇಲೆ ಪ್ರಯತ್ನ ಮಾಡುತ್ತಿರಬೇಕು.

ಈ ವಿಷಯದಲ್ಲಿ ಗೌಡಪಾದಾಚಾರ್ಯರ ಅಭಿಪ್ರಾಯವೇನೆಂದರೆ:—ಲಯ, ವಿಕ್ಷೇಪ, ಕಷಾಯ ಮತ್ತು ಸಮಪ್ರಾಪ್ತಿ, ಎಂದು ಚಿತ್ತಕ್ಕೆ ನಾಲ್ಕು ಅವಸ್ಥೆಗಳುಂಟು. ವಿಷಯಗಳ ಕಡೆಯಿಂದ ಹಿಂದಿರುಗಿಸಿಕೊಂಡು ಬಂದು, ತಡೆದು ನಿಲ್ಲಿಸಿಕೊಂಡಂಥ ಮನಸ್ಸು, ಹಿಂದಿನ ಅಭ್ಯಾಸದ ಬಲದಿಂದ ನಿದ್ರೆಮಾಡುವದಕ್ಕೇನಾದರೂ ಹೋದರೆ ಆ ನಿದ್ರೆಯ ಕಾರಣಗಳನ್ನು ತಿಳಿದುಕೊಂಡು ಅದನ್ನು ಚೆನ್ನಾಗಿ ಎಚ್ಚರಗೊಳಿಸಬೇಕು. ಹಿಂದೆ ತಕ್ಕಷ್ಟೇ ನಿದ್ರೆ ಮಾಡದಿರುವದು, ಅಜೀರ್ಣವಾಗಿರುವದು, ಅತಿ ಹೆಚ್ಚಾಗಿ ತಿನ್ನುವದು, ಮತ್ತು ಹೆಚ್ಚು ಶ್ರಮದ ಕೆಲಸವನ್ನು ಮಾಡುವದು, ಇವೆಲ್ಲ ನಿದ್ರೆಯನ್ನು ಬರಮಾಡತಕ್ಕವುಗಳು.

ಕಾರಣಗಳುಂಟಾಗುವದಕ್ಕೆ ಅವಕಾಶವನ್ನು ಕೊಡಬಾರದು. ನಿದ್ರೆಯ ಕಾಲದಲ್ಲಿ ಷ್ಟುಬೇಕೋ ಅಷ್ಟು ನಿದ್ರೆಯನ್ನು ಮಾಡಿ ಮುಗಿಸಿ ಬಿಡಬೇಕು. ಬೇಗ ಚನ್ನಾಗಿ ಅರ- ವಂತೆ ಮಿತವಾಗಿಯೇ ಊಟಮಾಡಬೇಕು. ಶ್ರಮೆಯಾಗುವ ಕೆಲಸಗಳನ್ನು ಮೈ ಮೇಲೆ ಹಾಕಿಕೊಳ್ಳಬಾರದು. ಯಾವದೊಂದು ಉಪದ್ರವವೂ ಇಲ್ಲದಂಥ ಏಕಾಂತ ಳದಲ್ಲಿ ಯಾವಾಗಲೂ ಇರುತ್ತ ಯಾವ ಬಯಕೆಯನ್ನೂ ತಂದುಕೊಳ್ಳದೆ ತನ್ನ ಸಾಧನ ನ್ನು ಮುಂದೆ ಮುಂದೆ ಸಾಧಿಸಬೇಕು. ಹೀಗೆ ಮಾಡಿ ನಿದ್ರೆಮಾಡದಂತೆ ಎಚ್ಚರಗೊಳಿಸಿ ಂಥ ಎಂದರೆ ಲಯವೆಂಬ ಅವಸ್ಥೆಯನ್ನು ದಾಟಿದಂಥ ಮನಸ್ಸು ತನ್ನ ಅಭ್ಯಾಸದ ಬಲ- ಂದ ಸುಖಸಾಧನಗಳಾದ ವಿಷಯಗಳ ಕಡೆಗೆ ಹಂದಾಡುತ್ತ ಹೋದರೆ ಆಗ ವಿವೇಕಿಗಳು ೇಳುವಂಥ ವೈರಾಗ್ಯದ ವಿಚಾರವನ್ನು, ಎಂದರೆ ನಾವು ಸುಖಕ್ಕೆ ಸಾಧನಗಳೆಂದು ತಿಳಿ- ಯುವ ವಿಷಯಗಳೆಲ್ಲಾ ಕೊನೆಗೆ ದುಃಖವನ್ನೇ ತಂದುಕೊಡುವವೆಂಬ ಮುಂತಾದ ಂಗತಿಗಳನ್ನು ನೆನಪುಗೊಟ್ಟು ಶಾಸ್ತ್ರದಲ್ಲಿ ಹೇಳಿರುವಂತೆ ಹುಟ್ಟು ಸಾವುಗಳೊಂದೂ ಇಲ್ಲದಂಥ ಅಖಂಡಾನಂದಸ್ವರೂಪನಾದ ಪರಮಾತ್ಮನ ಸ್ಮರಣೆಯಲ್ಲಿರುವಂತೆ ಮಾಡಿ ಆ ಸ್ಮರಣೆಯಭರದಲ್ಲಿ ಯಾವದೊಂದು ವಿಷಯವನ್ನೂ ಎಷ್ಟುಮಾತ್ರವೂ ಮನಸ್ಸಿನ ಮುಂದೆ ಹಾಯಗೊಡದಂತೆ ಕಾದುಕೊಂಡು ಮನಸ್ಸನ್ನು ಅತ್ತಿತ್ತ ಸಡದೆ ಒಂದೇಕಡೆ ನಿಲ್ಲಿಸಿಕೊಳ್ಳಬೇಕು. ಇಷ್ಟಾದರೆ ವಿಕ್ಷೇಪವೆಂಬ ಅವಸ್ಥೆಯನ್ನು ದಾಟಿದಂತಾಯಿತು. ಮುಂದಿನದು ಕಷಾಯವೆಂಬ ಅವಸ್ಥೆ. ಮನಸ್ಸಿನಲ್ಲಿ ರಾಗದ್ವೇಷಗಳ ಅಭ್ಯಾಸ ಹೆಚ್ಚಾಗಿರು ವದೇ ಕಷಾಯ. ಒಂದೊಂದು ವೇಳೆ ಮನಸ್ಸು ನಿದ್ರೆಯನ್ನು ಮಾಡದೆ ಹೊರಕ್ಕೆ ವಿಷಯಗಳ ಕಡೆಗೂ ಹರಿದು ಹೋಗದೆ ಒಳಗೇ ತನ್ನಲ್ಲಿ ತಾನು ವಿಷಯ ಚಿಂತನೆಯಲ್ಲಿಯೇ ತೊಳಲು ತ್ತಿರುತ್ತದೆ. ಈ ಮನೋರಾಜ್ಯವೇ ಕಷಾಯ. ಯೋಗಿಯಾದವನು ಇದನ್ನು ಕಂಡು ಹಿಡಿದುಕೊಳ್ಳಬೇಕು. ಈ ಮನೋರಾಜ್ಯದಲ್ಲಿ ಮನಸ್ಸು ಸಮತ್ವದಲ್ಲಿರುವಂತೆ ತೋರಿ- ದರೂ ಅದು ನಿಜವಾದ ಸಮತ್ವವಲ್ಲವೆಂದು ಎಚ್ಚತ್ತುಕೊಂಡು ಲಯವಿಕ್ಷೇಪಗಳಂತೆ ಇದನ್ನು ದೂರಮಾಡಬೇಕು. ಮನಸ್ಸು ಆತ್ಮಚಿಂತನೆಯಲ್ಲಿ ನಿಂತರೆಮಾತ್ರ ಸಮತ್ವ- ವನ್ನು ಪಡೆದಂತಾಗುವದು. ಲಯ, ವಿಕ್ಷೇಪ, ಕಷಾಯ ಈ ಮೂರು ಅವಸ್ಥೆಗಳನ್ನು ಪಡೆಯದೆ ಇದ್ದರೆ ಮನಸ್ಸು ಸಮತ್ವವನ್ನೇ ಪಡೆಯುವದು. ಆ ಸಮತ್ವವನ್ನು ಪಡೆದ ಮೇಲೆ ಅದನ್ನು ಲಯವೆಂದೋ ವಿಕ್ಷೇಪವೆಂದೋ ಕಷಾಯವೆಂದೋ ತಪ್ಪುತಿಳಿದು- ಕೊಂಡು ಕದಲಗೊಡಬಾರದು. ಸೂಕ್ಷ್ಮವಾದ ಬುದ್ಧಿಯಿಂದ ಲಯ ವಿಕ್ಷೇಪ ಕಷಾಯ ಗಳ ಸ್ವರೂಪವನ್ನು ತಿಳಿದುಕೊಂಡು ಸಮತ್ವದಲ್ಲಿಯೇ ಮನಸ್ಸನ್ನು ಬಹು ಪ್ರಯತ್ನ ದಿಂದ ನೆಲೆಯಾಗಿ ನಿಲ್ಲಿಸಿಕೊಳ್ಳಬೇಕು. ಹಾಗೆ ಅದನ್ನು ನೆಲೆಯಾಗಿ ನಿಲ್ಲಿಸಿಕೊಂಡರೆ ಪರ- ಮಾತ್ಮಸ್ವರೂಪಭೂತವಾದ ಪರಮಾನಂದವು ತನಗೆತಾನೇ ಚನ್ನಾಗಿ ವ್ಯಕ್ತವಾಗು- ವದು. ಜೀವ [illegible] ಗಳಿಂದ ಪಡೆದಂಥಾದ್ದಲ್ಲದ್ದಾಗಿ ಬುದ್ಧಿಯಿಂದ ಪಡೆದ ಸುಖವು ಎಂದೆಂದಿಗೂ [illegible]ದಲ್ಲ. " ಮನಸ್ಸನ್ನು ಸಮತ್ವದಲ್ಲಿ ನಿಲ್ಲಿಸಿಕೊಳ್ಳುವದರ

ಮೂಲಕ ಅದರ ಹೊಲಸನ್ನೆಲ್ಲಾ ತೊಳೆದುಕೊಂಡು ಅದನ್ನು ಆತ್ಮಸ್ವರೂಪದಲ್ಲಿ ನೆಲೆಗೊಳಿಸಿದರೆ ಯಾವ ಸುಖವು ಅನುಭವಕ್ಕೆ ಬರುತ್ತದೋ ಆ ಸುಖವು ಬಾಯಿಂದಾಡಿ ತೋರಿಸುವದಕ್ಕೆಂದಿಗೂ ಬರುವದಿಲ್ಲ. ಅದು ಮನಸ್ಸಿನಿಂದ ಅನುಭವಿಸಿಯೇ ತಿಳಿಯತಕ್ಕದ್ದು" ಎಂದು ಶ್ರುತಿಯು ಹೇಳುವದು. "ಸಮಾಧಿಯಲ್ಲಿ ಮೈದೋರಿರುವಂಥ ಆನಂದವನ್ನು ಬುದ್ಧಿಯಿಂದ ಗ್ರಹಿಸಬೇಕೆಂದು ಶ್ರುತಿ ಸ್ಮೃತಿಗಳೆಲ್ಲಾ ಹೇಳುವದಾದರೆ ಅಲ್ಲಿ ಆ ಸುಖವನ್ನು ಹಚ್ಚಿಕೊಳ್ಳಬಾರದೆಂದು ಆಚಾರ್ಯರೇಕೆ ಹೇಳಿದರು?" ಎಂದರೆ:— ಅದೇನೂ ತಪ್ಪಲ್ಲ. ಮನಸ್ಸನ್ನು ತಡೆದಿಟ್ಟುಕೊಳ್ಳುವದರಿಂದಾಗುವ ಸುಖವನ್ನು ಗ್ರಹಿಸಬಾರದೆಂದು ಅವರ ತಾತ್ಪರ್ಯವಲ್ಲ. ಪ್ರಯತ್ನದಿಂದ ತಡೆದುಕೊಂಡಿದ್ದ ಸಮತ್ವದ ಬಿಗಿಯು ಹರಿದುಕೊಂಡು ಹೋಗುವಂತೆ ತನಗೆ ಆಗ ಅನುಭವಕ್ಕೆ ಬಂದ ಅಷ್ಟಿಷ್ಟು ಸಮತ್ವದ ಸುಖದಿಂದಲೇ ಜಿಗ್ಗಿ ಹಾರಾಡುವದಕ್ಕೆ ಏಳುವಂಥ ಲವಲವಿಕೆಯನ್ನು ತಂದುಕೊಳ್ಳಬಾರದೆಂದು ಅದರ ತಾತ್ಪರ್ಯ. ಒಳ್ಳೇ ಉರಿಬೇಸಿಗೆಯ ನಡುಹಗಲಲ್ಲಿ ಒಬ್ಬನು ಗಂಗಾನದಿಯ ಮಡುವಿನಲ್ಲಿ ಮುಳುಗುತ್ತಾನೆ. ಆ ತಂಪಿನ ಸುಖವು ಅವನ ಅನುಭವಕ್ಕೆ ಬಂದರೂ ಅವನು ಆಗ ಅದನ್ನು ಹೇಳುವದಕ್ಕೆ ಬರುವದಿಲ್ಲ. ಅವನು ಅಲ್ಲಿಂದ ಎದ್ದು ಹೊರಕ್ಕೆ ಬಂದಮೇಲೆ ಹಾಗೂ ಹೀಗೂ ಅದನ್ನು ಹೇಳಬಹುದು. ಗಾಢನಿದ್ರೆಯಲ್ಲಿಯೂ ಆತ್ಮಾನಂದವು ಸೂಕ್ಷ್ಮವಾಗಿ ಅನುಭವಕ್ಕೆ ಬರುವದು. ಆದರೆ ಆಗ ಅದನ್ನು ತಿಳಿಯುವದಕ್ಕೆ ಬರುವದಿಲ್ಲ. ಎಚ್ಚತ್ತಮೇಲೆ ಅದನ್ನು ಸ್ಮರಿಸಿಕೊಳ್ಳುವದಕ್ಕೆ ಬರುತ್ತದೆ. ಅದರಂತೆಯೇ ಮನಸ್ಸು ಸಮತ್ವದಲ್ಲಿ ನೆಲಸಿದಾಗ ಎಂದರೆ ಸಮಾಧಿಯಲ್ಲಿ ಯಾವ ವೃತ್ತಿಗಳೂ ಇಲ್ಲದೆ, ಇದ್ದೂ ಇಲ್ಲದಂತೆ ಉಳಿದುಕೊಂಡಿರುವ ಸೂಕ್ಷ್ಮವಾದ ಮನಸ್ಸಿಗೆ ಸುಖವು ತೋರುವದೆಂದು ಶ್ರುತಿ ಸ್ಮೃತಿಗಳು ಹೇಳುವ ಮಾತೇನೂ ಸುಳ್ಳಲ್ಲ; ಬಹು ಹೆಚ್ಚಿನದಾದಂಥ ಈ ಸಮಾಧಿಸುಖವನ್ನು ಅನುಭವಿಸಿದೆನೆಂದು ಜಿಗ್ಗಿ ಅದರ ಭರದಿಂದ ಎದ್ದು ಹಾರಾಡುವದಕ್ಕೆ ರಸಾಸ್ವಾದವೆಂದು ಹೆಸರು. ಬರೀ ಅಷ್ಟನ್ನು ಮನಸ್ಸಿಗೆ ಹಚ್ಚಿಕೊಂಡು ಕುಣಿಯಬಾರದೆಂದು ಆಚಾರ್ಯರ ಅಭಿಪ್ರಾಯ. ಇತರ ಸುಖಗಳ ಜೊತೆಗೆ ಅದನ್ನು ಹೋಲಿಸುವಂಥ ಆಸಕ್ತಿಯನ್ನೂ ಅದನ್ನು ಅವರಿವರೆದುರಿಗೆ ವರ್ಣನೆಮಾಡಿ ಹೇಳಬೇಕೆಂಬಂಥ ಆಸಕ್ತಿಯನ್ನೂ ಆಗತ್ಯವಾಗಿ ತಡೆದುಕೊಳ್ಳಬೇಕು. ಒಂದುಸಲ ಆತ್ಮಚಿಂತನೆಯಲ್ಲಿ ನೆಲೆಗೊಂಡ ಮನಸ್ಸು ಅದನ್ನು ಇತರ ಸುಖಗಳ ಜೊತೆಗೆ ಹೋಲಿಸಿ ಹಿಗ್ಗುತ್ತಿರಬೇಕೆಂದೋ ಅಥವಾ ಶೀತ, ಗಾಳಿ, ಮತ್ತು ನೊಣ ಮೊದಲಾದವುಗಳ ಉಪದ್ರವದಿಂದಲೆ ಕದಲುವ ಸೂಚನೆಯನ್ನು ತೋರಿಸಿದರೆ ಪ್ರಯತ್ನದಿಂದ ಮತ್ತೆ ಅದನ್ನು ಅಲ್ಲಿಯೇ ಬಿಗಿಗಟ್ಟಿಯಾಗಿ ನಿಲ್ಲಿಸಿ ಆತ್ಮಸ್ವರೂಪದಲ್ಲಿ ಮುಳುಗಿಸಿ ಬಿಡಬೇಕು. ಮನಸ್ಸನ್ನು ತಡೆದುಕೊಳ್ಳುವ ಪ್ರಯತ್ನವೊಂದೇ ಇದಕ್ಕೆ ಸಾಧನ. ಲಯ, ವಿಕ್ಷೇಪ, ಕಷಾಯ, ರಸಾಸ್ವಾದ ಈ ನಾಲ್ಕನ್ನೂ ಹಿಮ್ಮುಖವಾಗಿ ಮಾಡಿ[illegible] ಯಾವ [illegible] ಇಲ್ಲದೆ ಮನಸು ಆತ್ಮಚಿಂತನೆಯಲ್ಲಿರುವದು. ಕಠವಲ್ಲಿಯೂ ಇದೇ ಅಭಿಪ್ರಾಯವನ್ನೇ ಹೇಳುತ್ತದೆ.

ಮನಸ್ಸನ್ನು ಬಿಗಿಹಿಡಿದು ಯೋಗವನ್ನು ಸಾಧಿಸುವ ಪ್ರಯತ್ನವು ಕಷ್ಟವೆಂದು ತಿಂದುಳಿದರೆ ಇಂದ್ರಿಯಗಳ ಚಪ್ಪಲವು ಬೆಳೆಯುವದು. ಯೋಗವನ್ನು ಸಾಧಿಸಿದರೆ ಅವು ವಶಗಾಗುವವು. ಮನಸ್ಸಿನ ವೃತ್ತಿಗಳನ್ನು ತಡೆಯುವದೇ ಯೋಗ. ಮನಸ್ಸಿನವೃತ್ತಿಗಳಿಗೆ ಎಣಿಕೆ ಮೊದಲೇ ಇಲ್ಲವಾದುದರಿಂದ ಅವುಗಳನ್ನೆಲ್ಲಾ ತಡೆಯುವೆದೆಂಬುದು ನಡೆಯುವ ಮಾತಲ್ಲವೆಂದು ಯೋಚಿಸಬಾರದು. ವೃತ್ತಿಗಳನ್ನೆಲ್ಲಾ ಎರಡು ಬಗೆಯಾಗಿ ವಿಂಗಡಿಸ ಬಹುದು. ರಾಗ ದ್ವೇಷ ಮೊದಲಾದವುಗಳಿಂದ ದುಃಖವನ್ನು ಕೊಡುವ ಆಸುರವೃತ್ತಿಗಳು ಕೆಲವು. ರಾಗದ್ವೇಷ ಮೊದಲಾದವುಗಳಿಲ್ಲದ ದೈವವೃತ್ತಿಗಳು ಕೆಲವು. ಈ ವೃತ್ತಿಗಳ ಭೇದಗಳನ್ನು ವಿಚಾರ ಮಾಡಿದರೆ ವೃತ್ತಿಗಳನ್ನೆಲ್ಲಾ ಐದುಗುಂಪಾಗಿ ಮಾಡಬಹುದು. ಅವಾವುವೆಂದರೆ—ಪ್ರಮಾಣ, ತಪ್ಪು ತಿಳಿವಳಿಕೆ, ಶಬ್ದದಭ್ರಮೆ, ನಿದ್ರೆ, ನೆನಪು. ಪ್ರಮಾಣ ವೆಂದರೆ ಪ್ರತ್ಯಕ್ಷ, ಅನುಮಾನ, ಆಗಮ. ಇವುಗಳೇ ಸರಿಯಾದ ತಿಳಿವಳಿಕೆಯ ಸಾಧನ-ಗಳು. ತಪ್ಪು ತಿಳಿವಳಿಕೆಯೆಂದರೆ ಒಂದುಪದಾರ್ಥವನ್ನು ಮತ್ತೊಂದೆಂದು ತಪ್ಪಾಗಿ ತಿಳಿದು ಕೊಳ್ಳುವದು. ನಿಜವ ತಿಳಿಯುತ್ತಲೇ ಈ ತಿಳಿವಳಿಕೆಯು ಹೋಗುವದು. ಶಬ್ದದಭ್ರಮ ವೆಂದರೆ, ಶಬ್ದಕ್ಕೆ ತಕ್ಕನಿಜವಾದ ವಸ್ತುವಿಲ್ಲದೆ ಒರೀಮಾತಿನಿಂದ ಏನೋ ಒಂದರ್ಥವನ್ನು ಮಾಡಿಕೊಂಡು ತಿಳಿವದು. ನಿದ್ರೆಯೆಂದರೆ ತಮೋಗುಣದಿಂದ ಮುಚ್ಚಿಕೊಂಡು ಏನೂ ಇಲ್ಲವೆಂಬ ತಮೋಗುಣಪ್ರಧಾನವಾದ ವೃತ್ತಿ. ನೆನಪೆಂದರೆ ಅನುಭವಿಸಿದ ವಿಷಯಗಳು ಮತ್ತೆ ಮನಸ್ಸಿನಲ್ಲಿ ತೋರುವಿಕೆ. ಈ ಐದುಬಗೆಯ ವೃತ್ತಿಗಳನ್ನು ತಡೆಯುವದಕ್ಕೂ ಅಭ್ಯಾಸ ಮತ್ತು ವೈರಾಗ್ಯ ಇವೆರಡೇ ಸಾಧನಗಳು. ಭರ್ರನೆ ಓಡುತ್ತಿರುವ ನದಿಯು ಪ್ರವಾಹವನ್ನು ಒಡ್ಡುಕಟ್ಟೆಯಿಂದ ತಡೆದು ಕಾಲುವೆಗಳಿಂದ ಅದನ್ನು ಹೊಲಗದ್ದೆಗಳ ಕಡೆಗೆ ತಿರುಗಿಸಿ ಕೊಳ್ಳುವಂತೆ, ಚಿತ್ತವೆಂಬ ನದಿಯು ವಿಷಯಪ್ರವಾಹವನ್ನು ವೈರಾಗ್ಯದಿಂದ ತಡೆದು ಸಮಾಧಿಯ ಅಭ್ಯಾಸದಿಂದ ಅದು ಮೆಲ್ಲಗೆ ಹರಿಯುವಂತೆ ಮಾಡಿಕೊಳ್ಳಬೇಕು. ಸಮಾಧಿ ಯನ್ನು ಅಭ್ಯಾಸಮಾಡುವುದೆಂದರೆ, ಮೇಲಿಂದ ಮೇಲೆ ಮಂತ್ರಜಪಗಳನ್ನೂ ದೇವತಾ-ಧ್ಯಾನವನ್ನೂ ಮತ್ತೆ ಮತ್ತೆ ಮಾಡುವದು. ಯಾವದೊಂದು ವ್ಯಾಪಾರವೂ ಇಲ್ಲದ ಸಮಾಧಿ ಯನ್ನು ಅಭ್ಯಾಸಮಾಡುವದೆಂಬ ಮಾತೇ ಒಪ್ಪುವದಿಲ್ಲವೆಂದರೆ ಯಾವದೊಂದು ವ್ಯಾಪಾ ರವೂ ಇಲ್ಲದೆ ಇರುವಿಕೆಯನ್ನೇ ಪ್ರಯತ್ನದಿಂದ ಬೆಳೆಸಿಕೊಳ್ಳುವದೇ ಅಭ್ಯಾಸ. ಪ್ರಯತ್ನ ವೆಂದರೆ ಹಾಗೆಯೇ ಬಿಗಿಹಿಡಿದುಕೊಂಡಿರಬೇಕೆಂಬ ಉತ್ಸಾಹ. ಎಂದಿಗೆ ಹೊರಬಿದ್ದೇನೋ ಎಂದು ತವಕಿಸುವದೇ ಮನಸ್ಸಿನ ಹುಟ್ಟುಗುಣ. ಏನಾದಗೂ ಮಾಡಿ ಅದನ್ನು ಬಿಗಿಹಿಡಿದೇ ಹಿಡುತ್ತೇನೆಂದು ಉತ್ಸಾಹದಿಂದ ಆ ವೃತ್ತಿಯನ್ನೇ ಮತ್ತೆ ಮತ್ತೆ ತಂದುಕೊಳ್ಳುವದೇ ಅಭ್ಯಾಸ. ಎಷ್ಟೋ ದಿನಗಳಿಂದ ಹೊರಗೇ ಹರಿದಾಡಿ ಹರಿದಾಡಿ ಬಳಕೆಯಾಗಿರುವ ಕಾರಣ-ದಿಂದ ಹೊರಕ್ಕೆ ಹರಿದು ಹೋಗಬೇಕೆಂದೇ ಮನಸ್ಸು ತವಕಿಸುತ್ತಿರುವಾಗ ಈಗೀಗಿನ ಪ್ರಯತ್ನದಿಂದ ಅದನ್ನು ಹೇಗೆ ಜಗ್ಗಿಹಿಡಿಯುವದಕ್ಕಾದೀತೆಂದರೆ ಬಹುಕಾಲ ಎಡೆಬಿಡದೆ ಬಿಗಿಹಿಡಿಯುವ ಪ್ರಯತ್ನವನ್ನೇ ನಡೆಸಿದರೆ ಅದು ದಿನದಿನಕ್ಕೆ ಹೊರಗೆ ಹರಿದಾಡುವ ಅಭ್ಯಾಸ-

ವನ್ನು ಗೆಲ್ಲುವ ಶಕ್ತಿಯನ್ನು ಪಡೆದು ತಾನೇ ಅದಕ್ಕಿಂತಲೂ ಬಲವಾಗುವದು. ಮನಸ್ಸನ್ನು ತಡೆಯುವದೆಂಬುದು ಒಂದುದಿನದ ಮಾತಲ್ಲ. ಈ ವಿಷಯದಲ್ಲಿ ಜನರು ಒಬ್ಬ ದಡ್ಡನ ಕಥೆಯನ್ನು ಹೇಳುತ್ತಾರೆ. ಒಬ್ಬನು ತನ್ನ ಮಗನನ್ನು ವೇದಾಧ್ಯಯನಕ್ಕೆ ಕಳುಹಿಸಿ ಐದನೇ ದಿನವೇ "ವೇದಗಳಿರುವದೇ ನಾಲ್ಕು, ಐದುದಿನಗಳಾದರೂ ನನ್ನ ಮಗನೇಕೆ ಬರಲಿಲ್ಲ" ವೆಂದು ಹಂಬಲಿಸಿದವನಂತೆ ಯೋಗಿಯು ಕೆಲವು ದಿನಗಳಲ್ಲಿಯೋ ಕೆಲವು ತಿಂಗಳುಗಳಲ್ಲಿಯೋ ಯೋಗಸಿದ್ಧಿಯನ್ನು ಪಡೆಯುತ್ತೇನೆಂದರೆ ಅವನೂ ಆ ದಡ್ಡನಂತೆ [illegible] ಯೋಗಸಿದ್ಧಿ ಯಾಗಬೇಕಾದರೆ ಕೆಲವು ವರ್ಷಗಳೋ ಅಥವಾ ಕೆಲವು ಜನ್ಮಗ[illegible] ಬೇಕು. ಎಷ್ಟೋ ಜನ್ಮಗಳು ಪ್ರಯತ್ನವನ್ನುಮಾಡಿ ಆಮೇಲೆ ಸಿದ್ಧಿಯನ್ನು [illegible] ರೆಂದು ಸ್ಮೃತಿಯು ಹೇಳುವದು. ಬಹುಕಾಲ ಅಭ್ಯಾಸಮಾಡುವದರಲ್ಲಿಯೂ ನಡುವೆ ಬಿಟ್ಟು ಬಿಟ್ಟು ಅಭ್ಯಾಸಮಾಡಿದರೆ ಒಂದುಸಲ ಮನಸ್ಸನ್ನು ಜಗಿಜಿಡಿದ ಅಭ್ಯಾಸದ ಶಕ್ತಿಯನ್ನು ಆಮೇಲೆ ಅದನ್ನು ಹರಿಯಬಿಟ್ಟ ಅಭ್ಯಾಸದ ಶಕ್ತಿಯು ತ[illegible] ಹಾಕಿ ತುಳಿದು ಬಿಡುವದು. ಮುಂದಿನದನ್ನು ಓದುತ್ತ ಹಿಂದಿನದನ್ನು ಮರೆಯುತ್ತ ಹೋದಂಥವನ ಪಾಂಡಿತ್ಯವೇ ಆ ಯೋಗಿಗೆ ಉಂಟಾಗುವದು. ಆದಕಾರಣ ಆ ಅಭ್ಯಾಸವನ್ನು ಎಡೆಬಿಡದೆ ಆದರದಿಂದ ಮಾಡಬೇಕು. ಅಭ್ಯಾಸದಲ್ಲಿ ಅನಾದರವನ್ನು ತೋರಿಸಿದರೂ ಯೋಗಸಿದ್ಧಿಯಾಗುವುದಿಲ್ಲ. ಈ ಯೋಗದ ಅಭ್ಯಾಸದಲ್ಲಿ, ಬಹುಕಾಲ, ಎಡೆಬಿಡದಪ್ರಯತ್ನ, ಆದರ, ಈ ಮೂರೂ ಇರಬೇಕು. ಹೀಗೆ ಅಭ್ಯಾಸಮಾಡಿ ಯೋಗವು ಚನ್ನಾಗಿ ಹುರಿಗೂಡಿಕೊಂಡು ವಿಷಯಸುಖಗಳ ಚಾಳಿಯಿಂದಾಗಲೀ ದುಃಖವಾಸನೆಯಿಂದಾಗಲೀ ಹರಿದುಹೋಗದೆ ಇರುವದು. ಆ ಯೋಗವೊಂದು ಸಿಕ್ಕಿತೆಂದರೆ ಅವನಿಗೆ ಬೇರೆ ಯಾವದೂ ಅದಕ್ಕಿಂತ ಹೆಚ್ಚಿನದೆನಿಸುವದಿಲ್ಲವೆಂದೂ ಆ ಯೋಗದಲ್ಲಿರುವವನನ್ನು ಯಾವ ಹೆಚ್ಚಿನ ದುಃಖವೂ ಅಲ್ಲಾಡಿಸಲಾರದೆಂದೂ ಭಗವಂತನೇ ಹೇಳಿರುವನು. ಯೋಗದ ಸವಿ ಹತ್ತಿದವನಿಗೆ ಇನ್ನೊಂದೇನೂ ಹೆಚ್ಚಿನದೆನಿಸುವದಿಲ್ಲವೆಂಬ ವಿಷಯದಲ್ಲಿ ವಸಿಷ್ಠರು ಕಚನೆಂಬುವನ ಉದಾಹರಣೆಯನ್ನು ಕೊಟ್ಟಿದ್ದಾರೆ. ಕಚನು ಒಂದುಸಲ ಸಮಾಧಿಯಿಂದ ಎದ್ದಾಗ ಗದ್ಗದ ಸ್ವರದಿಂದ ತನ್ನಲ್ಲಿತಾನೇ "ಏನು ಮಾಡಲಿ? ಎಲ್ಲಿಗೆ ಹೋಗಲಿ? ಏನು ತೆಗೆದುಕೊಳ್ಳಲಿ? ಏನುಬಿಡಲಿ? ಮಹಾಪ್ರಳಯದಲ್ಲಿ ಎಲ್ಲೆಲ್ಲಿಯೂ ನೀರುನೀರೇ ಆಗಿರುವಂತೆ ಎಲ್ಲೆಲ್ಲಿಯೂ ಪರಮಾತ್ಮನೇ ತುಂಬಿಕೊಂಡಿದ್ದಾನೆ. ಒಳಗೂ ಆತ್ಮನೇ, ಹೊರಗೂ ಆತ್ಮನೇ, ನಡುವೆಯೂ ಆತ್ಮನೇ, ಮೇಲೂ ಆತ್ಮನೇ, ಕೆಳಗೂ ಆತ್ಮನೇ, ಅತ್ತಲೂ ಆತ್ಮನೇ ಇತ್ತಲೂ ಆತ್ಮನೇ ಸುತ್ತಲೂ ಆತ್ಮನೇ ಎತ್ತಲೂ ಆತ್ಮನೇ, ಆತ್ಮನಿಲ್ಲದಕಡೆಯೇ ಇಲ್ಲ. ಇಲ್ಲಿರುವನೂ ನಾನೆಂದು ಬೇರೆ ಕರೆದುಕೊಳ್ಳುವಹಾಗೇ ಇಲ್ಲ. ನನ್ನೊಳಗಿಲ್ಲದ ವಸ್ತುವೇ ಇಲ್ಲ. ಎಲ್ಲವೂ ಜ್ಞಾನಮಯ. ನಾನಿನ್ನೇನನ್ನು ತಾನೆ ಬಯಸಲಿ? ನಮ್ಮ ಕಣ್[illegible] ಹಿಡಿಯಲಾಗದಂಥ ಈ ಮಹಾ ಮಹಾ ಕುಲಾಚಲ ಪರ್ವತಗಳೆಲ್ಲಾ ದೇದೀಪ್ಯಮಾನವಾದ ಆತ್ಮಸ್ವರೂಪವೆಂಬ ಸಮುದ್ರದ ನೊರೆಗಳಾಗಿವೆ. ಮತ್ತೂ ಈ ಪ್ರಪಂಚದ ಕೋಟಿಕ[illegible]ಲ್ಲಾ

ತ ಚಿತ್ಸ್ವರೂಪವೆಂಬ ಸೂರ್ಯನ ಮಹಾ ತೇಜಸ್ಸಿನಿಂದ ಕಾಣುವ ಬಿಸಿಲ ಗುದುರೆಯಲ್ಲದೆ, ಮತ್ತೇನೂ ಅಲ್ಲ. " ಎಂದು ಹೇಳಿಕೊಂಡನಂತೆ. ಯೋಗಿಯನ್ನು ಯಾವ ಹೆಚ್ಚಿನ ದುಃಖವೂ ಅಲ್ಲಾಡಿಸಲಾರದೆಂಬ ವಿಷಯಕ್ಕೆ ವಸಿಷ್ಠರು ಶಿಖಿಧ್ವಜನ ಮೂರುವರ್ಷದ ಸಮಾಧಿಯ ಸುದ್ದಿಯನ್ನು ಹೇಳಿರುತ್ತಾರೆ. ಶಿಖಿಧ್ವಜನು ನಿರ್ವಿಕಲ್ಪಸಮಾಧಿಯೊಳಗಿದ್ದುಬಿಟ್ಟನು. ಆ ರಾಜನನ್ನು ಏನಾದರೂ ಮಾಡಿ ಎಚ್ಚರಗೊಳಿಸಬೇಕೆಂದು ಚೂಡಾಲನೆಂಬುವನು ಅವನ ಮುಂದಕ್ಕೆ ಬಂದು ಗಟ್ಟಿಯಾಗಿ ಸಿಂಹನಾದವನ್ನು ಮಾಡಿದನು. ಅದು ಆ ರಾಜನನ್ನು ಮುಟ್ಟಲಿಲ್ಲ. ಮತ್ತೂ ಮಾಡಿದನು. ಅದೂ ಅವನಿಗೆ ತಾಕಲಿಲ್ಲ. ಎಷ್ಟು ಭಯಂಕರವಾದ ಗದ್ದಲವನ್ನು ಮಾಡಿದರೂ ಏನೂ ಆಗಲಿಲ್ಲ. ಆಗ ಚೂಡನು ಅವನನ್ನು ಹಿಡಿದು ಅಲ್ಲಾಡಿಸಿದನು. ಆದರೂ ಎಚ್ಚರವಾಗಲಿಲ್ಲ. ಆ ಮೇಲೆ ಉರುಳಾಡಿಸಿಬಿಟ್ಟನು. ಅವನ ಪ್ರಯತ್ನವೇನೂ ಸಾಗಲಿಲ್ಲ. ಪ್ರಹ್ಲಾದನ ವಿಷಯದಲ್ಲಿಯೂ ಹೀಗೆಯೇ ಆಗಿದೆ. ಪ್ರಹ್ಲಾದನು ಒಂದು ವೇಳೆ ನಿರ್ವಿಕಲ್ಪಸಮಾಧಿಯನ್ನು ತಂದುಕೊಂಡನು. ಆಗ ಅವನು ಚಿತ್ರದಲ್ಲಿ ಬರೆದ ಬೊಂಬೆಯಂತೆ ಆಗಿದ್ದನು. ಐದುಸಹಸ್ರವರ್ಷಗಳು ಪರಮಾತ್ಮಚಿಂತನೆಯೊಂದರಲ್ಲಿಯೇ ಇದ್ದುಕೊಂಡು ಸಮಾಧಿಯಲ್ಲಿದ್ದನು. ಅವನನ್ನು ಎಬ್ಬಿಸಬೇಕೆಂದು ವಿಷ್ಣುವು ಪಾಞ್ಚಜನ್ಯವನ್ನು ಊದಿ ಹತ್ತು ದಿಕ್ಕುಗಳೂ ಬಿರಿಯುವಂತೆ ಮಾಡಿದನು. ಆ ಮಹಾಶಬ್ದದಿಂದ ಪ್ರಹ್ಲಾದನಿಗೆ ಸ್ವಲ್ಪ ಸ್ವಲ್ಪ ಎಚ್ಚರವಾಗುತ್ತಬಂತು. ಹೀಗೆಯೇ ವೀತಹವ್ಯ ಮೊದಲಾದ ಎಷ್ಟೋ ಜನರ ಸಮಾಧಿಗಳಿರುವವು.

ವೈರಾಗ್ಯವು ಎರಡುಬಗೆ. ಒಂದು ಪರ ಇನ್ನೊಂದು ಅಪರ. ಈ ಅಪರವೈರಾಗ್ಯದಲ್ಲಿ ಯತಮಾನ, ವ್ಯತಿರೇಕ, ಏಕೇಂದ್ರಿಯತ್ವ, ಮತ್ತು ವಶೀಕಾರ, ಎಂಬ ನಾಲ್ಕು ಬಗೆಗಳುಂಟು. ಇವುಗಳಲ್ಲಿ ಕಾಣಬರುವ ಮತ್ತು ಕೇಳಬರುವ ಯಾವ ವಿಷಯವನ್ನೂ ಬಯಸದೆ ಇರುವದು ವಶೀಕಾರವೈರಾಗ್ಯ. ಹೂ, ಗಂಧ, ಹೆಂಡತಿ, ಮಕ್ಕಳು, ಹೊಲ, ಹಣ ಕಾಸು ಮೊದಲಾದವುಗಳೆಲ್ಲಾ ಕಾಣಬರುವ ವಿಷಯಗಳು. ಇವುಗಳಲ್ಲಿ ಬಯಕೆ ಇದ್ದರೂ ಆ ಬಯಕೆ ಎಷ್ಟೆಷ್ಟು ಹೆಚ್ಚುಕಡಿಮೆ ಇರುವುದೆಂಬುದರಮೇಲೆ ಯತಮಾನ ಮೊದಲಾದ ಮೂರುಬಗೆಯ ವೈರಾಗ್ಯಗಳಿರುವವು. ಈ ಜಗತ್ತಿನಲ್ಲಿ ಸಾರವಾದುದು ಯಾವದು? ಅಸಾರವಾದುದು ಯಾವದು? ಎಂಬುದನ್ನು ಗುರುವಿನ ಮೂಲಕವಾಗಿಯೂ ಶಾಸ್ತ್ರದ ಮೂಲಕವಾಗಿಯೂ ತಿಳಿಯುತ್ತೇನೆಂದು ಪ್ರಯತ್ನಿಸುವದಕ್ಕೆ ಯಾತಮಾನವೆಂದು ಹೆಸರು. ವಿಷಯಗಳಲ್ಲಿ ಎಷ್ಟೆಷ್ಟು ದೋಷಗಳಿರುವವೋ ಎಂದು ತನಗೆ ಮೊದಲೇ ತಿಳಿದಿತ್ತೊ ಅವುಗಳಲ್ಲಿ ತನ್ನ ವಿವೇಕಪೂರ್ವಕವಾದ ಅಭ್ಯಾಸದಿಂದ ಇಷ್ಟು ದೋಷಗಳನ್ನು ಕಳೆದುಕೊಂಡೆನೆಂದು ಇಷ್ಟು ದೋಷಗಳುಳಿದಿರುವವೆಂದೂ ವಿವೇಚನ ಮಾಡುವದು ವ್ಯತಿರೇಕ. ಕಾಣಬರುವ ಮತ್ತು ಕೇಳಬರುವ ವಿಷಯಗಳಮೇಲೆ ಹರಿದು ಹೋದರೆ ದುಃಖವಾಗುವದೆಂದು ಯೋಚಿಸಿ ಆ ದಾರಿಯನ್ನು ಹಿಡಿಯದೆ ಮನಸ್ಸಿನಲ್ಲಿ ಬರೀ ಔತ್ಸುಕ್ಯವೊಂದನ್ನು ಮಾತ್ರ ಇಟ್ಟುಕೊಂಡಿರುವದು ಏಕೇಂದ್ರಿಯತ್ವ. ಯಾವಬಯಕೆಯೂ ಇಲ್ಲದೆ

ಇರುವದೇ ವಶೀಕಾರ. ಈ ಅಪರವೈರಾಗ್ಯವು ಮನುಷ್ಯನನ್ನು ಅಷ್ಟಾಂಗ ಯೋಗವನ್ನು ಸಾಧಿಸುವದಕ್ಕೆ ಹೊರಡುವಂತೆ ಮಾಡುವದರಿಂದ ಸಂಪ್ರಜ್ಞಾತಸಮಾಧಿಗೆ ಹತ್ತಿರದಸಾಧನ. ಅಸಂಪ್ರಜ್ಞಾತಕ್ಕೆ ದೂರದಸಾಧನ. ಪರವೈರಾಗ್ಯವೆಂದರೆ ಮೂರುಗುಣಗಳನ್ನೂ ಮೀರುವಂಥ ಉತ್ತಮವಾದ ವೈರಾಗ್ಯವು. ಸಂಪ್ರಜ್ಞಾತಸಮಾಧಿಯನ್ನು ಅಭ್ಯಾಸ ಮಾಡಿ ಮಾಡಿ ಮೂರುಗುಣಗಳ ಸೇರಿಕೆಯಿಂದಾಗಿರುವ ಪ್ರಕೃತಿಗಿಂತ ಪರಮಾತ್ಮನನ್ನು ಬೇರೆಯಾಗಿ ಅರಿಯುವದಕ್ಕಾಗುತ್ತದೆ. ಆ ಪರಮಾತ್ಮಸ್ವರೂಪವನ್ನರಿತು ಆ ಮೇಲೆ ಮೂರುಗುಣಗಳ ಸಂಬಂಧವಾದ ಯಾವ ನಡವಳಿಕೆಯನ್ನೂ ಬಯಸದೆ ಇರುವದೇ ಪರವೈರಾಗ್ಯ. ಈ ವೈರಾಗ್ಯವು ಎಷ್ಟು ಬಲವಾಗಿದ್ದರೆ ಸಿದ್ಧಿಯು ಅಷ್ಟು ಬೇಗನೆ ಆಗುವದು. ಈ ವೈರಾಗ್ಯದಲ್ಲಿಯೂ ಮೃದು, ಮಧ್ಯ, ತೀವ್ರ, ಎಂದು ಮೂರುಬಗೆ. ಈ ಮೂರು ಬಗೆಯವರಲ್ಲಿ ಮೃದುವೈರಾಗ್ಯದವನಿಗಿಂತ ಮಧ್ಯವೈರಾಗ್ಯದವನಿಗೂ ಮಧ್ಯವೈರಾಗ್ಯದವನಿಗಿಂತ ತೀವ್ರವೈರಾಗ್ಯನವನಿಗೂ ಬೇಗಸಮಾಧಿ ಸಿದ್ಧಿಸುವದು. ತೀವ್ರವೈರಾಗ್ಯದವರಲ್ಲಿಯೇ ಸಮಾಧಿಯು ಮೃದು ತೀವ್ರ, ಮಧ್ಯತೀವ್ರ, ಮತ್ತು ಅಧಿಮಾತ್ರತೀವ್ರ, ಎಂದು ಮೂರುಬಗೆ. ಹಿಂದ ಹಿಂದಣ ಸಮಾಧಿಗಿಂತ ಮುಂದ ಮುಂದಣ ಸಮಾಧಿಯಲ್ಲಿ ಸಿದ್ಧಿಯು ಬೇಗ ಆಗುವದು. ಜನಕ ಮತ್ತು ಪ್ರಹ್ಲಾದ ಮೊದಲಾದವರು ಅಧಿಮಾತ್ರತೀವ್ರದವರು. ಅವರು ಉತ್ತಮೋತ್ತಮರು. ಒಂದು ರೆಪ್ಪೆಹೊಡೆಯುವಷ್ಟು ಹೊತ್ತು ಮನಸ್ಸಿಗೆ ವಿಚಾರವನ್ನು ತಂದುಕೊಂಡರೆಸಾಕು. ಅವರಿಗೆ ಬಲವಾದ ಸಮಾಧಿ ಹತ್ತಿಬಿಡುತ್ತಿತ್ತು. ಮೃದುವೈರಾಗ್ಯ ಉಳ್ಳಂಥ ಉದ್ದಾಲಕ ಮೊದಲಾದವರು ತೀರ ಕೀಳು. ಅವರಿಗೆ ಸಮಾಧಿಹತ್ತಬೇಕಾದರೆ ಬಹಳಹೊತ್ತು ಪ್ರಯತ್ನ ಮಾಡಬೇಕಾಗಿತ್ತು. ಹೀಗೆ ಅಧಿಮಾತ್ರತೀವ್ರರಾಗಿರತಕ್ಕವರಿಗೆ ಬಲವಾದ ಅಸಂಪ್ರಜ್ಞಾತ ಸಮಾಧಿ ಬಂತೆಂದರೆ ಮತ್ತೆ ತಲೆ ಎತ್ತಲಾರದೆ ಮನಸ್ಸು ಅಲ್ಲಿಯೇ ನಾಶವಾಗಿ ಬಿಡುವದು. ಹೀಗೆ ಮನೋನಾಶವನ್ನು ಮಾಡಿಕೊಂಡು ವಾಸನಾಕ್ಷಯವನ್ನು ಕಾಪಾಡಿಕೊಂಡರೆ ಜೀವನ್ಮುಕ್ತಿಸುಖವು ನೆಲೆಯಾಗಿನಿಲ್ಲುವದು. ಮನೋನಾಶದಿಂದ ವಿದೇಹಮುಕ್ತಿಯಾದೀತೇ ಹೊರತು ಜೀವನ್ಮುಕ್ತಿಯಾಗಲಾರದೆಂದು ಸಂಶಯಪಡಬಾರದು. ಮನೋನಾಶವಾದರೆ ಗೆಳೆಯತನ ಮೊದಲಾದ ಗುಣಗಳು ಹುಟ್ಟುವುದಕ್ಕೆಲ್ಲಿ ಅವಕಾಶವೆಂದು ಶ್ರೀರಾಮನು ವಸಿಷ್ಠರನ್ನು ಕೇಳಿದಾಗ ಅವರು ಹೇಳಿರುವದೇನೆಂದರೆ. "ಮನೋನಾಶದಲ್ಲಿ ಇದ್ದೂ ಇಲ್ಲದಂತಾಗಿರುವದೊಂದು ಬಗೆ. ಇಲ್ಲದಂತೆಯೇ ಹೋಗಿಬಿಡುವದೊಂದುಬಗೆ. ಜೀವನ್ಮುಕ್ತನಲ್ಲಿ ಮನಸ್ಸು ಇದ್ದೂ ಇಲ್ಲದಂತಾಗಿರುವದು. ವಿದೇಹಮುಕ್ತಿಯಲ್ಲಿ ಮನಸ್ಸೇ ಇಲ್ಲದಂತೆ ಹೋಗಿಬಿಡುವದು. ಇದು ನನ್ನದು ಅದು ನನ್ನದೆಂದು ಯೋಚಿಸುತ್ತ ಸುಖದುಃಖಗಳನ್ನು ತಂದುಕೊಳ್ಳುತ್ತಿರುವದೇ ಮನಸ್ಸಿರುವದರ ಲಕ್ಷಣ. ನಿಶ್ವಾಸದ ಗಾಳಿಯು ಮಹಾಮೇರುವನ್ನು ಹೇಗೆ ಅಲ್ಲಾಡಿಸಲಾರದೋ ಹಾಗೆ ಯಾವನನ್ನು ಸುಖ ದುಃಖಗಳು ಕದಲಿಸಲಾರವೋ ಅವನ ಮನಸ್ಸು ನಾಶವಾಯಿತೆಂದು

ತಿಳಿಯಬೇಕು. ಆಪತ್ತಾಗಲಿ, ದೀನತೆಯಾಗಲಿ, ಉತ್ಸಾಹವಾಗಲಿ, ಮದವಾಗಲಿ, ಮಾಂದ್ಯವಾಗಲೀ ಯಾವನಿಗೆ ಹರ್ಷವಿಷಾದಗಳನ್ನುಂಟುಮಾಡುವದಿಲ್ಲವೊ ಅವನ ಮನಸ್ಸು ನಾಶವಾದಂತೆಯೇ ಸರಿ. ಮನಸ್ಸಿನಲ್ಲಿ ಬಯಕೆ ಯೆಂಬುದೊಂದು ಹುಟ್ಟಿದಂತೆ ಆದರೆ ಗೆಳೆಯುತನ ವೊದಲಾದ ಗುಣಗಳಿಂದ ಕೂಡಿದ ಸತ್ತ್ವಗುಣವು ಹುಟ್ಟುವವು. ಮುಂದಿನ ಹುಟ್ಟುವಿಕೆ ಯಿಲ್ಲದೆ ಜೀವನ್ಮುಕ್ತನಾಗಿರುವವನ ಮನಸ್ಸು ಇದ್ದೂ ಇಲ್ಲದಂತಾಗಿರುವದು. ವಿದೇಹಮುಕ್ತನಿಗೆ ಮನಸ್ಸೇ ಇಲ್ಲದಂತೆ ಹೋಗಿಬಿಡುವದು. ಆಗ ಉತ್ತಮ ಗುಣಗಳಿಗೆಲ್ಲ ಆಧಾರವಾದ ಸತ್ತ್ವವೂ ಪರಮ ಪವಿತ್ರವಾದ ಆತ್ಮನಲ್ಲಿಯೇ ಹೊಂದಿ ಬಿಡುವದು. ಆ ವಿದೇಹಮುಕ್ತಿಯೆಂಬುದರಲ್ಲಿ ಯಾವ ದುಃಖವೂ ಇರುವದಿಲ್ಲ. ಅದು ಚಿದ್ರೂಪವಾಗಿ ಹೆಚ್ಚು ಕಡಿಮೆಯಾಗಿ ರಜೋಗುಣ ತಮೋಗುಣಗಳ ಸಂಬಂಧವೇ ಇಲ್ಲದೆ ಆನಂದದಿಂದ ತುಂಬಿರುವದು. ಇಂಥ ದೊಡ್ಡಸ್ಥಿತಿಯಲ್ಲಿ ಚಿತ್ತನಾಶವನ್ನು ಪಡೆದಂಥವರು ಆಕಾಶದಂತೆ ಶರೀರಉಳ್ಳವರಾಗಿ ಎಂದರೆ ನಿಜವಾಗಿ ಯಾವ ಶರೀರವೂ ಇಲ್ಲದೆ ಇರುತ್ತಿರುವರು.

ಜೀವನ್ಮುಕ್ತರಾದವರು ಸುಖದುಃಖಗಳ ಎದುರಿಗೆ ಬಂದರೂ ಎಂದಿಗೂ ಭ್ರಾಂತರಾಗುವುದಿಲ್ಲ. ಪ್ರಾಪಂಚಿಕ ಕಾರ್ಯಗಳಲ್ಲಿ ಅವರು ಏನಾದರೂ ಮಾಡುವರೋ ಬಿಡುವರೋ ಹೇಳುವದಕ್ಕಾಗುವಂತಿರುವುದಿಲ್ಲ. ಹೀಗೆ ಮನಸ್ಸು ಇದ್ದರೂ ಇಲ್ಲದಂತೆ ಆಗುವ ಮನೋನಾಶವೇ ಜೀವನ್ಮುಕ್ತಿಸಾಧನವೆಂದು ಸಿದ್ಧವಾಯಿತು.

ಇಲ್ಲಿಗೆ ಶ್ರೀಮದ್ವಿದ್ಯಾರಣ್ಯಕೃತವಾದ ಜೀವನ್ಮುಕ್ತಿವಿವೇಕವೆಂಬ ಗ್ರಂಥದಲ್ಲಿ
ಮನೋನಾಶವೆಂಬ ಎರಡನೆಯ ಪ್ರಕರಣವು ಮುಗಿದುದು.



## ವಾಸನಾಕ್ಷಯ ಪ್ರಕರಣ.

ಇನ್ನು ಜೀವನ್ಮುಕ್ತಿಯ ಸಾಧನವನ್ನು ಹೇಳುತ್ತೇವೆ—ತತ್ವಜ್ಞಾನ, ಮನೋನಾಶ, ವಾಸನಾಕ್ಷಯ ಇವೇ ಅದರ ಸಾಧನಗಳು. ಈ ವಿಷಯದಲ್ಲಿ ವಸಿಷ್ಠರು ಹೇಳಿರುವುದೇನಂದರೆ ಈ ಮೂರನ್ನೂ ಎಷ್ಟೋಕಾಲ ಒಟ್ಟಿಗೆ ಅಭ್ಯಾಸಮಾಡಿದರೆ ಫಲಿಸುವವು. ಮೂರನ್ನು ಒಟ್ಟಿಗೆ ಚನ್ನಾಗಿ ಬೇರುಬಿಟ್ಟುಕೊಳ್ಳುವಂತೆ ಮಾಡಿಕೊಳ್ಳದೇಹೋದರೆ ನೂರುವರ್ಷ ಅಭ್ಯಾಸಮಾಡಿದರೂ ಅವುಗಳಿಂದಾಗಬೇಕಾದ ಪ್ರಯೋಜನವಾಗುವುದಿಲ್ಲ. ಬೇರೆ ಬೇರೆ ಮಂತ್ರಗಳಿಂದಕೂಡಿದ ಕರ್ಮದಲ್ಲಿ ಒಂದೊಂದು ಮಂತ್ರವನ್ನು ಉಚ್ಚರಿಸಿದ ಮಂತ್ರಕ್ಕೇ ಕರ್ಮಸಾಂಗವಾಗದೇ ಇರುವಂತೆ, ಈ ಮೂರರಲ್ಲಿ ಒಂದೊಂದನ್ನೆ ಎಷ್ಟೋಕಾಲ ಎಷ್ಟೋಚನ್ನಾಗಿ ಅಭ್ಯಾಸಮಾಡಿದರೂ ಅದರಿಂದ ಆಗಬೇಕಾದ್ದು ಆಗುವುದಿಲ್ಲ. ಸಂಧ್ಯಾವಂದನೆಯಲ್ಲಿ ತನ್ನ ಮೇಲೆ ಪ್ರೋಕ್ಷಿಸಿಕೊಳ್ಳುವುದಕ್ಕೆ ಆಪೋಹಿಷ್ಠ ವೊದಲಾದ ಮೂರು ಮಂತ್ರಗಳಿವೆ. ಅವುಗಳಲ್ಲಿ ಒಂದೊಂದು ದಿನ ಒಂದ್ಹೊಂದು ಮಂತ್ರದಂತೆ ಹೇ-

ಕೊಂಡು ಪ್ರೋಕ್ಷಿಸಿಕ್ಕೊಂಡರೆ ಶಾಸ್ತ್ರದೃಷ್ಟಿಯಿಂದ ಆ ಕರ್ಮವು ಆದಹಾಗೆ ಆಗುವುದಿಲ್ಲ. ಹಾಗೆಯೇ ಆರು ಅಂಗಗಳಿಗೆ ಸಂಬಂಧಪಟ್ಟ ಮಂತ್ರಗಳಿವೆ. ಒಂದೊಂದು ಅಂಗದ ಮಂತ್ರವನ್ನು ಉಚ್ಚರಿಸಿದರೆ ಅದು ಪೂರ್ಣವೆನಿಸುವುದೇ ಇಲ್ಲ. ಇದು ಶಾಸ್ತ್ರೀಯ ಕರ್ಮದ ಮಾತಾಯಿತು. ವ್ಯವಹಾರದಲ್ಲಿಯೇ ನೋಡಿರಿ. ಒಂದು ದಿನ ಬರೀಪಲ್ಯ. ಒಂದುದಿನ ತೊವ್ವೆ, ಒಂದುದಿನ ಬರೀ ಅನ್ನ ಹೀಗೆ ಮಾಡಿದರೆ ಅದು ಸರಿಯಾದ ಊಟವೆನಿಸೀತೆ? ಈ ಮೂರನ್ನು ಒಟ್ಟಿಗೆ ಎಷ್ಟೋಕಾಲ ಅಭ್ಯಾಸಮಾಡಿದರೇನೇ ಮನಸ್ಸಿನ ಪ್ರಬಲವಾದ ಸಂಶಯಗ್ರಂಥಿಗಳು ಥಟ್ಟನೆ ತುಂಡಾಗಿಹೋಗುವುವು. ಲೆಕ್ಕವಿಲ್ಲದ ಜನ್ಮಗಳಿಂದ ನಮಗೆ ಈ ಸಂಸಾರದ ಗಂಟುಗಳು ಹಾಕಿಕೊಳ್ಳುತ್ತಾ ಬಂದಿರುವವು ನಾವು ಎಷ್ಟೋಕಾಲ ಅದಕ್ಕಾಗಿ ಹೆಣಗಿದಹೊರತು ಅವು ಎಷ್ಟುಮಾತ್ರಕ್ಕೂ ಸಡಿಲವಾಗುವುದಿಲ್ಲ. ಒಂದೊಂದನ್ನೇ ಅಭ್ಯಾಸಮಾಡಿದರೆ ಫಲವಾಗುವುದಿಲ್ಲವೆಂಬುದಿಷ್ಟೇ ಅಲ್ಲ. ಒಂದೊಂದನ್ನೆ ಅಭ್ಯಾಸಮಾಡುವುದೆಂಬಮಾತೇ ಒಪ್ಪುವುದಿಲ್ಲ. ಏಕೆಂದರೆ ಅವು ಒಂದಕ್ಕೊಂದು ಕಾರಣಗಳಾಗಿವೆ. ಆದುದರಿಂದ ಒಂದನ್ನು ಬಿಟ್ಟು ಒಂದು ಸಾಗುವುದೇ ಇಲ್ಲ. ಈ ಮೂರರಲ್ಲಿ ಎರಡೆರಡನ್ನು ಸೇರಿಸಿದರೆ ಮೂರು ಜೋಡಿಗಳಾಗುತ್ತವೆ ಹೇಗೆಂದರೇ. (೧) ಮನೋನಾಶ, ವಾಸನಾಕ್ಷಯ. (೨) ತತ್ತ್ವಜ್ಞಾನ, ಮನೋನಾಶ (೩) ವಾಸನಾಕ್ಷಯ ತತ್ತ್ವಜ್ಞಾನ. ) ಇವುಗಳಲ್ಲಿ ಮನೋನಾಶ ವಾಸನಾಕ್ಷಯದ ಜೋಡಿಯನ್ನು ತೆಗೆದುಕೊಳ್ಳೋಣ. ಮನಸ್ಸು ಲಯವಾಗಿಹೋಗುವವರಿಗೂ ವಾಸನೆ ಹೋಗುವುದಿಲ್ಲ. ವಾಸನೆಹೋಗುವವರಿಗೂ ಮನಸ್ಸಿನಹಾವಳಿನಿಲ್ಲುವುದಿಲ್ಲ. ಹೀಗೆ ಇವೆರಡೂ ಒಂದಕ್ಕೊಂದು ಕಾರಣಗಳಾಗಿವೆ. ಧಗಧಗಿಸುತ್ತಿರುವ ದೀಪದಲ್ಲಿ ಒಂದು ಜ್ವಾಲೆ ಮೇಲಕ್ಕೆದ್ದು ಬೆಳಕನ್ನು ಕೊಡುತ್ತ ಸಾಗುವುದರೊಳಗೆ ಇತರರಿಗೆ ಅರಿವಿಲ್ಲದಂತೆ ಇನ್ನೊಂದು ಜ್ವಾಲೆ ಹಿಂದೆಯೇ ಎದ್ದು ಮುಂದಿನದನ್ನು ಹಿಂಬಾಲಿಸುತ್ತಿದ್ದು ನಿಜವಾಗಿ ಒಂದರಹಿಂದೊಂದು ಜ್ವಾಲೆಯು ಸಾಲುಹಿಡಿದಿರುವಂತೆ ಮನಸ್ಸು ತೆರಪಿಲ್ಲದಂತೆ ಏನಾದರೂ ಒಂದೊಂದು ವಿಷಯವನ್ನು ಹಿಡಿದುಕೊಂಡು ಅದರ ಆಕಾರವಾಗುವುದು. ಹೀಗೆ ಮನಸ್ಸು ಒಂದೊಂದು ಆಕಾರವನ್ನು ಪಡೆಯುವುದಕ್ಕೆ ವೃತ್ತಿ ಎಂದು ಹೆಸರು. ಇಂದ್ರಿಯಗಳಿಂದ ಜ್ಞಾನವಾಗುವಾಗಲೆಲ್ಲಾ ಮನಸ್ಸಿಗೆ ವೃತ್ತಿಯುಂಟಾಗಿಯೇ ಇರುತ್ತದೆ. ನಾವು ಕಣ್ಣಿನಿಂದ ಒಂದು ಪದಾರ್ಥವನ್ನು ಕಂಡೆವೆಂದರೆ ಮನಸ್ಸು ಕಣ್ಣಿನದಾರಿಯಿಂದ ಹೊರಕ್ಕೆಹೋಗಿ ಆ ಪದಾರ್ಥವನ್ನು ಸುತ್ತಿಕೊಳ್ಳುತ್ತದೆ ಎಂದರೆ ನಮ್ಮಮನಸ್ಸಿನವೃತ್ತಿ ಆ ಪದಾರ್ಥದ ಆಕಾರವಾಗುತ್ತದೆ. ಆಗ ನಾವು ಆ ಪದಾರ್ಥವನ್ನು ಕಣ್ಣಿನಿಂದ ಕಾಣುತ್ತೇವೆ. ಹೀಗೆ ಮನಸ್ಸು ಯಾವುದಾದರೊಂದು ಇಂದ್ರಿಯದ ದಾರಿಯಿಂದ ಹೊರಬಿದ್ದು ಏನಾದರೊಂದು ವಿಷಯವನ್ನು ತಬ್ಬಿಕೊಂಡು ಅದರ ಆಕಾರವಾದ ವೃತ್ತಿಯಾಗುತ್ತಿರುವುದು. ಒಂದರಹಿಂದೊಂದು ವೃತ್ತಿಗಳಾಗುತ್ತ ಹೋಗುತ್ತಿರುವುದೇ ಮನಸ್ಸಿನಸ್ವಭಾವ. ಮನಸ್ಸು ಲಯವಾಗುವುದೆಂದರೆ ಯಾವುದೊಂದು ವೃತ್ತಿಯೂ ಆಗದೇ ತನ್ನ ಚೇಷ್ಟೆಯನ್ನೆಲ್ಲಾ ಹಿಮ್ಮೆಟ್ಟಿಸಿಕೊಂಡಿ-

ವುದು. ಹೀಗಿರುವುದನ್ನು ಮನಸ್ಸಿಗೆ ಕಲಿಸಿದರೆ ಎದ್ದು ತಿರಿದಾಡಬೇಕೆಂಬ ಚಪಲವು ತಪ್ಪುವುದೆಂದೂ ತನ್ನಷ್ಟಕ್ಕೆ ತಾನೆ ಉಡುಗಿಕೊಂಡಿರುವ ಅಭ್ಯಾಸವಾಗುವುದೆಂದೂ, ಶ್ರೀಪತಂಜಲಿಗಳು ಯೋಗಶಾಸ್ತ್ರದಲ್ಲಿ ಹೇಳಿದ್ದಾರೆ. ಇದೇ ಮನೋನಾಶವೆಂದೂ ತಿಳಿಯಬೇಕು.

ಹಿಂದು ಮುಂದು ನೋಡದೇ ಒಮ್ಮೆಗೇ ಸಿಟ್ಟುಮೊದಲಾದ ವೃತ್ತಿಗಳು ಹುಟ್ಟುವುದಕ್ಕೆ ಮನಸ್ಸಿನಲ್ಲಿ ಹಿಂದಿನ ಅಭ್ಯಾಸಬಲದಿಂದಾಗಿರುವ ಚಟವೇ ಕಾರಣ. ಹಿಂದೆ ಎಷ್ಟೋಸಲ ಒಮ್ಮೆಗೇ ಸಿಟ್ಟು ಮಾಡಿ ಮಾಡಿ ಅದೇಚಾಳಿಬಿದ್ದಿರುವುದು. ಆ ಚಾಳಿ ಹೋಗುವುದೆಂದರೆ ವಿವೇಕದಿಂದ ಮನಸ್ಸನ್ನು ತಡೆದುಕೊಳ್ಳುವುದು, ಇಂದ್ರಿಯಗಳನ್ನು ಬಿಗಿಹಿಡಿಯುವುದು ಮೊದಲಾದ ಒಳ್ಳೇಚಾಳಿಗಳು ಮೈದುಂಬಿಕೊಂಡಿರುವುದರ ಪ್ರಭಾವದಿಂದ ಹೊರಗೆ ಸಿಟ್ಟಿನಕಾರಣಗಳಿದ್ದರೂ ಮನಸ್ಸಿನಲ್ಲಿ ಸಿಟ್ಟು ತಲೆ ಎತ್ತದೆ ಇರುವುದು. ಮನಸ್ಸನ್ನು ಮೂಲೆಯಲ್ಲಿ ಮುದುರಿಕೊಂಡಿರುವಂತೆ ಮಾಡದೆ ಇದ್ದರೆ ಸಮುದ್ರದಲ್ಲಿ ಅಲೆಗಳಮೇಲೆ ಅಲೆಹುಟ್ಟುತ್ತಾ ಹೋಗುವಂತೆ ಮನಸ್ಸಿನಲ್ಲಿ ವೃತ್ತಿಗಳಮೇಲೆ ವೃತ್ತಿಗಳಾಗುತ್ತ ಹೋಗಿ ನೆಪಮಾತ್ರಕ್ಕೆ ಹೊರಗಣ ಕಾರಣಸಿಕ್ಕಿದರೂ ಸಾಕು. ಅಷ್ಟು ಮಾತ್ರದಿಂದಲೇ ಸಿಟ್ಟುಮೊದಲಾದವು ಚಿಟ್ಟನಂತೆ ಏಳಬಹುದಾದ್ದರಿಂದ ವಾಸನಾಕ್ಷಯ ವಾಗುವುದಿಲ್ಲ. ವಾಸನೆತಗ್ಗಿದ ಹೊರತು ಎಂದಿನಂತೆ ವೃತ್ತಿಗಳು ಏಳುತ್ತಲೇ ಇರುವುದರಿಂದ ಮನೋನಾಶವೆಂಬುದೂ ಇಲ್ಲ.

ಈಗ ತತ್ತ್ವಜ್ಞಾನ ಮನೋನಾಶಗಳ ಜೋಡಿಯನ್ನು ನೋಡೋಣ. ಎಲ್ಲಿಯವರಿಗೆ ತತ್ತ್ವಜ್ಞಾನವಾಗುವುದಿಲ್ಲವೋ ಅಲ್ಲಿಯವರಿಗೆ ಮನಸ್ಸು ಹೇಗೆ ಉಡುಗೀತು? ಮನಸ್ಸು ಉಡುಗುವವರೆಗೂ ತತ್ತ್ವಜ್ಞಾನವಾಗುವುದಿಲ್ಲ. ನಮಗೆ ತೋರುವಂಥ ರೂಪ ರಸ ಮೊದಲಾದ ಜಗತ್ತೆಲ್ಲಾ ಬರೀತೋರಿಕೆಯ ಮಾತ್ರದೆಂದೂ ಇದೆಲ್ಲಾ ಎಂದೆಂದಿಗೂ ಹೀಗೆಯೇ ಇರುವಂಥಾದ್ದಲ್ಲವೆಂದೂ ಆತ್ಮಸ್ವರೂಪವೇ ಹೀಗೆ ಬಗೆಬಗೆಯಾಗಿ ಕಂಗೊಳಿಸುತ್ತಿರುವುದೆಂದೂ ನಿಶ್ಚಯವಾಗಿ ತಿಳಿಯುವುದೇ ತತ್ತ್ವಜ್ಞಾನ. ಈ ತಿಳಿವಳಿಕೆ ಯುಂಟಾಗದೇ ಇದ್ದರೆ ರೂಪರಸಮೊದಲಾದ ಬಗೆಬಗೆಯ ವಿಷಯಗಳಕಡೆಗೆ ಹರಿಯುವ ಮನಸ್ಸಿನಲ್ಲಿ ತಂಡತಂಡವಾದ ವೃತ್ತಿಗಳಾಗದೇ ಇರುವುದೇ ಇಲ್ಲ. ಕಟ್ಟಿಗೆಯನ್ನು ಚಾಚುತ್ತಲೇ ಇದ್ದರೆ ಉರಿತಗ್ಗುವುದುಂಟೆ? ಮನಸ್ಸು ಉಡುಗದೆ ವೃತ್ತಿಗಳಮೇಲೆ ವೃತ್ತಿಗಳ ರೂಪದಲ್ಲಿ ಹಬ್ಬುತ್ತಹೋದರೆ ಆ ವೃತ್ತಿಗಳಮೂಲಕ ಒಂದುವೇಳೆ ರೂಪ, ಒಂದುವೇಳೆ ರಸ, ಒಂದುವೇಳೆ ಗಂಧ, ಹೀಗೆ ಒಂದರಹಿಂದೊಂದು ಎಡೆಬಿಡದೆ ಬೇರೆಬೇರೆ ವಿಷಯಗಳ ಜ್ಞಾನವಾಗುತ್ತಲೇ ಇರುವುದರಿಂದ ಬ್ರಹ್ಮ ಒಂದೇ ಸತ್ಯವೆಂಬ ವೇದಾಂತ ಸಿದ್ಧಾಂತವು ಮನಸ್ಸಿನಲ್ಲಿ ಅಂಕುರಿಸುವುದಕ್ಕೆ ದಾರಿಯಿಲ್ಲ.

ವಾಸನಾಕ್ಷಯ ತತ್ತ್ವಜ್ಞಾನಗಳ ಜೋಡಿಯ ವಿಚಾರವೂ ಹಾಗೆಯೇ. ವಾಸನೆಹೋಗುವವರೆಗೂ ತತ್ತ್ವಜ್ಞಾನವು ಹೇಗೆ ಉಂಟಾದೀತು? ತತ್ತ್ವಜ್ಞಾನವಾಗುವವರೆಗೂ

ವಾಸನೆ ಹೋಗುವುದಿಲ್ಲ, ಸಿಟ್ಟು, ಬಯಕೆ, ಮೊದಲಾದ ವಾಸನೆಗಳು ಮನಸ್ಸಿನಲ್ಲಿ ಮನೆಮಾಡಿಕೊಂಡೇ ಇದ್ದರೆ ಅಲ್ಲಿಗೆ ಮನಸ್ಸನ್ನು ತಡೆಯುವುದು ಇಂದ್ರಿಯಗಳನ್ನು ಬಿಗಿಹಿಡಿಯುವುದು ಮೊದಲಾದಗುಣಗಳು ಕಾಲಿಡುವದು ಹೇಗೆ? ಮನಸ್ಸನ್ನು ತಡೆಯುವದು ಮೊದಲಾದಗುಣಗಳು ಬಂದು ಅಲ್ಲಿ ಬೇರುಬಿಟ್ಟುಕೊಂಡಹೊರತು ತತ್ತ್ವಜ್ಞಾನವಾಗುವುದಿಲ್ಲ. ಆತ್ಮವೊಂದರ ಹೊರತು ಉಳಿದವುಗಳೆಲ್ಲಾ ಬರೀತೋರಿಕೆಯದೆಂಬ ಅಭಿಪ್ರಾಯವನ್ನು ಮನಗಂಡಹೊರತು ಸಿಟ್ಟಿನ ಅಥವ ಬಯಕೆಯಕಾರಣಗಳುಂಟಾದಾಗ ಅವು ಬರೀತೋರಿಕೆಯ ಮಾತ್ರದವುಗಳೆಂಬ ನಿಶ್ಚಯವಿಲ್ಲದ್ದರಿಂದ ವಾಸನೆ ಜಿಂಜರಿಯುವುದಿಲ್ಲ.

ಇದುವರಿಗೂ ಬಂದಿಲ್ಲದಿದ್ದರೆ ಇನ್ನೊಂದಾಗುವುದಿಲ್ಲವೆಂಬ ಕ್ರಮವನ್ನುಹಿಡಿದು ಹೇಳಿದುದಾಯಿತಷ್ಟೆ? ಬಂದಿದ್ದರೆ ಇನ್ನೊಂದು ಆದರ ಬೆನ್ನುಹತ್ತಿರುವುದೆಂಬ ರೀತಿಯನ್ನುನೋಡಿರಿ.

ಮನಸ್ಸು ಉಡುಗಿಕೊಂಡು ಬಿಟ್ಟರೆ ಸಿಟ್ಟು ಬಯಕೆ ಮೊದಲಾದ ಚಪಲವನ್ನು ಎಬ್ಬಿಸುವ ಹೊರಗಣ ಕಾರಣಗಳೇ ಮನಸ್ಸಿಗೆ ತೋರದೇ ಹೋಗುವುದರಿಂದ ವಾಸನೆಯು ಬಾಲವನ್ನು ಮುದುರಿಕೊಂಡು ಹಿಂದಕ್ಕೆ ಸರಿಯುವುದು.

ವಾಸನೆಯು ಹಿಮ್ಮುಖವಾಗಿ ಮೈಗರೆದರೆ ಸಿಟ್ಟು ಬಯಕೆ ಮೊದಲಾದವುಗಳಿಗೆ ಕಾರಣವೇ ಇಲ್ಲದಂತಾಗಿ, ಮನಸ್ಸು ಸುಮ್ಮನೆ ಮೂಲೆಗೆ ಮುಟ್ಟಾಗಿ ಮುದುರಿಕೊಳ್ಳುತ್ತದೆ. ಇದು ಮನೋನಾಶ, ವಾಸನಾಕ್ಷಯಗಳ ಜೋಡಿಯವಿಷಯ.

ಮನಸ್ಸು ವಿಷಯಗಳ ಕಡೆಗೆ ಹಾಯದೆ ಯಾವವೃತ್ತಿಯೂ ಆಗದೆ ತನ್ನಷ್ಟಕ್ಕೆ ತಾನು ಹಾಯಾಗಿನಿಂತಿತೆಂದರೆ ಅದರ ಹೊಲಸೆಲ್ಲಹೋಗಿ ಆಗ ಅದು ಆತ್ಮಜ್ಞಾನಕ್ಕೆ ಸಾಧನವಾಗುತ್ತದೆ. ತತ್ತ್ವಜ್ಞಾನವಾದರೆ ವಿಷಯಗಳೆಲ್ಲಾ ಬರೀತೋರಿಕೆಯ ಮಾತ್ರದ್ದೆಂದು ಅವುಗಳಮೇಲೆ ಹಾಯದೇ ಹೋಗುವುದರಿಂದ ಕಟ್ಟಿಗೆಯನ್ನು ಚಾಚದೆಹೋದರೆ ಉರಿ ತನ್ನಷ್ಟಕ್ಕೆತಾನೇ ಆರುವಂತೆ ಮನಸ್ಸು ತಾನಾಗಿಯೇ ಒಳಸರಿಯುವುದು. ಇದು ಮನೋನಾಶ ತತ್ತ್ವಜ್ಞಾನಗಳ ಜೋಡಿಯವಿಷಯ.

ತತ್ತ್ವಜ್ಞಾನವಾದರೆ ಸಿಟ್ಟು ಬಯಕೆಮೊದಲಾದುವುಗಳ ಚಟವೆಲ್ಲಾ ಹಾರಿಹೋಗುವುದು. ಹಗೆಯನ್ನೂ ಬಂಧುವನ್ನೂ ತನ್ನ ದೇಹವನ್ನೂ, ಒಂದೇ ಆಗಿ ಕಾಣುವಂಥ ಜಾಣನಿಗೆ ಸಿಟ್ಟು ಹೇಗೆಬಂದೀತು. ತನ್ನ ಅವಯವಗಳ ಮೇಲೆಯೇ ತನಗೆ ಸಿಟ್ಟು ಬರುವುದುಂಟೇ? ಎಂದು ವಾರ್ತಿಕಕಾರರು ಹೇಳಿದ್ದಾರೆ.

ಸಿಟ್ಟು ಬಯಕೆ ಮೊದಲಾದವುಗಳ ಚಾಳಿಬಿಟ್ಟು ಹೋದರೆ ಮನಸ್ಸನ್ನು ತಡೆಯುವುದು ಮೊದಲಾದ ಗುಣಗಳುಬಂದು ಅದರಿಂದ ಜ್ಞಾನವು ಆಗುವುದೆಂಬುದು ಎಲ್ಲರಿಗೂ ತಿಳಿದಮಾತೇ ಆಗಿದೆ. ಕಮಲದಿಂದಸರಸ್ಸೂ ಸರಸ್ಸಿನಿಂದ ಕಮಲವೂ ಒಂದರಿಂದೊಂದು ಹೆಚ್ಚಿಗೆಯನ್ನು ಪಡೆಯುವಂತೆ ಮನೋನಿಗ್ರಹಮೊದಲಾದ ಗುಣಗಳು

ಜ್ಞಾನದಿಂದಲೂ, ಜ್ಞಾನವು ಮನೋನಿಗ್ರಹವೊದಲಾದ ಗುಣಗಳಿಂದಲೂ, ಬೆಳೆಯು ವವೆಂದು ವಸಿಷ್ಠರು ಹೇಳಿದ್ದಾರೆ. ಇದು ವಾಸನಾಕ್ಷಯ ತತ್ತ್ವಜ್ಞಾನಗಳ ಜೋಡಿ.

ಆದುದರಿಂದ ಜಾಣನಾದವನು ವಿಷಯಗಳಿಂದ ಸುಖಪಡಬೇಕೆಂಬ ಇಚ್ಛೆಯನ್ನು ಪಾತಾಳಕ್ಕೆ ತುಳಿದು ತನ್ನ ಪ್ರಯತ್ನದಿಂದ ಈ ಮೂರನ್ನೂ ಸಾಧಿಸಬೇಕು. ಆ ಪ್ರಯತ್ನವು ಯಾವ ಹಂಚಿಕೆಯಿಂದಲಾದರೂ ತಪ್ಪದೇಸಾಧಿಸಿಯೇ ತೀರುತ್ತೇನೆಂಬ ಉತ್ಸಾಹದಿಂದ ಕೂಡಿದ ಹಟವಾಗಿರಬೇಕು. ಮೂರುಗಳಿಗೆಯ ಬಾಳಿನವುಗಳು ಯಾವವೂ ಎಂದೆಂದಿಗೂ ಏಕಪ್ರಕಾರವಾಗಿರುವುದು ಯಾವುದು? ಎಂಬೀವಿಚಾರವು ಅವನಲ್ಲಿ ಯಾವಾಗಲೂ ಜಾಗರೂಕವಾಗಿರಬೇಕು. ತತ್ತ್ವಜ್ಞಾನವಾಗುವುದಕ್ಕೆ ಗುರುಗಳ ಮುಖದಿಂದ ಅಥವಾ ಶಾಸ್ತ್ರದಿಂದ ಆತ್ಮಸ್ವರೂಪದ ವಿಚಾರವನ್ನು ಕೇಳುವುದು ಸಾಧನವಾಗುವುದು. ಮನಸ್ಸನ್ನು ಮೂಲೆಗೆಕೂಡಿಸುವುದಕ್ಕೆ ಯೋಗವು ಸಾಧನವಾಗುವದು. ಕೆಟ್ಟವಾಸನೆಗಳನ್ನು ಬಿಡಿಸಬೇಕಾದರೆ ಅದಕ್ಕೆ ವಿರುದ್ಧವಾದ ಒಳ್ಳೇವಾಸನೆಗಳನ್ನು ವೈಗೂಡಿಸಿಕೊಳ್ಳಬೇಕು. ವಿಷಯಗಳಿಂದ ಸುಖವನ್ನು ಪಡಬೇಕೆಂಬ ಬಯಕೆ ಒಂದಿಷ್ಟು ತಲೇಹಾಕಿದರೂ ಸಾಕು? ತುಪ್ಪವನ್ನು ತೊಟ್ಟಿಕ್ಕಿಸಿದರೆ ಉರಿಯು ಧಗ್ಗನೆ ಏಳುವಂತೆ ಅದುಹೆಚ್ಚಿ ಆಮೇಲೆ ದಕ್ಕದೆ ಹೋಗಬಹುದಾದುದರಿಂದ ಆ ಬಯಕೆ ಮತ್ತೇಳದಂತೆ ಪಾತಾಳದತಳಕ್ಕೆ ತುಳಿದುಬಿಡಬೇಕು. ಹಿಂದೆ ವಿವಿದಿಷಾಸನ್ಯಾಸಕ್ಕೆ ತತ್ತ್ವಜ್ಞಾನವೂ ವಿದ್ವತ್ಸನ್ಯಾಸಕ್ಕೆ ಜೀವನ್ಮುಕ್ತಿಸುಖವೂ ಫಲವಾದುದರಿಂದ ವೊದಲು ತತ್ತ್ವಜ್ಞಾನವನ್ನು ಪಡೆದು ಆಮೇಲೆ ತಾನು ಬದುಕಿರುವಾಗಲೇ ತನಗೆ ಬಂಧಗಳಾಗಿರುವ ವಾಸನೆಗಳನ್ನೂ ಮನೋವೃತ್ತಿಗಳನ್ನೂ ಕಳೆದುಕೊಳ್ಳಬೇಕೆಂದು ಹೇಳಿದ್ದು ಈಗ ತತ್ತ್ವಜ್ಞಾನವನ್ನೂ ಮನೋನಾಶವನ್ನೂ ವಾಸನಾಕ್ಷಯವನ್ನೂ ಒಮ್ಮೆಗೇ ಸಾಧಿಸಬೇಕೆಂದು ಹೇಳುವುದು ಹೇಗೆ ಒಪ್ಪುವುದೆಂದರೆ? ಹಿಂದೆಹೇಳಿದ್ದೂ ಸರಿ. ಈಗ ಹೇಳುವುದೂ ಸರಿ. ಯಾವುದೂ ತಪ್ಪಲ್ಲ. ವಿವಿದಿಷಾಸನ್ಯಾಸಿಗೆ ತತ್ತ್ವಜ್ಞಾನವು ಫಲವೆಂದರೆ, ಅವನಭಾಗಕ್ಕೆ ವಾಸನಾಕ್ಷಯ ಮತ್ತು ಮನೋನಾಶಗಳ ಭಾರವಿಲ್ಲವೇ ಇಲ್ಲವೆಂದಲ್ಲ? ವಾಸನಾಕ್ಷಯ ಮನೋನಾಶಗಳಿಂದ ಹೊರತು ಜ್ಞಾನವಾಗಲಾರದು. ವಿವಿದಿಷಾಸನ್ಯಾಸಿಯು ಮುಖ್ಯವಾಗಿ ಜ್ಞಾನವನ್ನು ಅಭ್ಯಾಸಮಾಡುವನು. ಅದಕ್ಕೆ ಸಹಾಯಕವಾಗಿ ವಾಸನಾಕ್ಷಯ ಮನೋನಾಶಗಳನ್ನು ಮಾಡಿಕೊಳ್ಳುತ್ತಿರುವನು. ವಿದ್ವತ್ಸನ್ಯಾಸಿಗೆ ಹಾಗಲ್ಲ. ಅವನಿಗೆಜ್ಞಾನವಾಗಿಯೇ ಇರುವುದರಿಂದ ಅದಕ್ಕಾಗಿ ಇವನು ಹೆಣಗಬೇಕಾದುದಿಲ್ಲ. ಅದು ಸಿದ್ಧವಾಗಿಯೇ ಇರುವುದು. ಇವನಿಗೆ ಮನೋನಾಶ ವಾಸನಾಕ್ಷಯಗಳನ್ನು ಮಾಡಿಕೊಳ್ಳುವುದೇ ಮುಖ್ಯವಾದ ಕೆಲಸ. ಹೀಗೆ ವಾಸನಾಕ್ಷಯ ಮನೋನಾಶಗಳ ಭಾವವು, ಇಬ್ಬರಿಗೂ ಬಿಟ್ಟಿದ್ದಲ್ಲ. ವಿವಿದಿಷಾಸನ್ಯಾಸಿಗೆ ಅವು ಸಹಾಯಕಸ್ಥಿತಿಯಲ್ಲಿರುವವು, ವಿದ್ವತ್ಸನ್ಯಾಸಿಗೆ ಮುಖ್ಯಸ್ಥಿತಿಯಲ್ಲಿರುವವು. ಇಷ್ಟೇಭೇದವೇ. ಹೊರತು ಮೂರನ್ನೂ ಒಟ್ಟಿಗೇ ಒಮ್ಮೆಗೇ ಸಾಧಿಸುತ್ತಿರಬೇಕೆಂಬ ಮಾತಿಗೇನೂ ಕೊರತೆಯಿಲ್ಲ. ವಿವಿದಿಷಾಸನ್ಯಾಸಮಾಡಿ ಜ್ಞಾನವನ್ನು

ಪಡೆವಾಗಲೇ ಅವನು ಕೃತಾರ್ಥನಾದನು.

ಆಮೇಲೆ ಸುಮ್ಮಸುಮ್ಮನೇ ವಾಸನಾಕ್ಷಯ ಮನೋನಾಶಗಳ ಹೊರೆಯನ್ನೇಕೆ ಹೊರಬೇಕೆಂದರೆ? ಬದುಕಿರುವಾಗಲೇ ಮುಕ್ತಿಸುಖವನ್ನು ಅನುಭವಿಸುವುದೇ ಅದರ ಪ್ರಯೋಜನ. ವಿದ್ವತ್ಸನ್ಯಾಸಿಯು ಜ್ಞಾನಕ್ಕೆ ಸಾಧನವಾದ ವೇದಾಂತಶ್ರವಣಮೊದಲಾದವುಗಳನ್ನು ಮಾಡಬೇಕಾದ ಅಗತ್ಯವಿಲ್ಲದುದರಿಂದಲೂ ಅವನಿಗೆ ಆಗಿರುವ ಜ್ಞಾನವು ಯಾರಿಂದಲೂ ಯಾವರೀತಿಯಿಂದಲೂ ತಿರುಗಿಸುವುದಕ್ಕೆ ಬರುವಂಥಾದ್ದಲ್ಲವಾದ್ದರಿಂದಲೂ ಅಂಥಾಜ್ಞಾನವಾದಮೇಲೆಯೂ ಅವನಿನ್ನೂ ಏನನ್ನೂ ಮಾಡಿಕೊಂಡಿರಬೇಕೆಂಬುದೆಂಥವಾತೆಂದರೆ, ಯಾವರೀತಿಯಿಂದಲಾದರೂ ಮತ್ತೆ ಮತ್ತೆ ಆ ಜ್ಞಾನವು ನೆನಪಿಗೆ ಬರುತ್ತಿರಬೇಕಾಗುವುದು, ಆ ಬಗೆಯ ಅಭ್ಯಾಸಉಂಟೆಂಬುದನ್ನೂ ಲೀಲೆಯಂಬಾಕೆಯ ಕಥೆಯು ತೋರಿಸುವುದು. ಯಾವಾಗಲೂ ಮನಸ್ಸಿಗೆ ಅದರ ವಿಚಾರವನ್ನೇ ತಂದುಕೊಳ್ಳುತ್ತಿರುವುದೂ ಅದರವಿಚಾರವನ್ನೇ ಇತರರಿಗೆ ತಿಳಿಯಹೇಳುವುದೂ, ಅದರ ವಿಚಾರವನ್ನೇ ಒಬ್ಬರಿಗೊಬ್ಬರು ಮಾತಾಡುವುದೂ ಯಾವಾಗಲೂ ಅದರ ವಿಚಾರದಲ್ಲಿಯೇ ಮುಳುಗಿರುವುದೂ ಇದೇ ಜ್ಞಾನದ ಅಭ್ಯಾಸ. ಈ ಕಾಣುತ್ತಿರುವ ಜಗತ್ತೆಂಬುದೂ, ನಾನೆಂಬುದೂ, ಸೃಷ್ಟಿಯ ಆದಿಯಲ್ಲಿಕೂಡ ಹುಟ್ಟಿಯೇ ಇಲ್ಲವೆಂದೂ, ಅವು ಯಾವಾಗಲೂ ಹೀಗೆಯೇ ಇರುವುದಿಲ್ಲವೆಂದೂ, ಮತ್ತೆ ಮತ್ತೆ ಮನಸ್ಸಿಗೆ ತಂದುಕೊಳ್ಳುತ್ತಿರಬೇಕು. ಮನೋನಾಶ ಮತ್ತು ವಾಸನಾಕ್ಷಯಗಳ ಅಭ್ಯಾಸವೂ ಆ ಕಥೆಯಲ್ಲಿ ತೋರುವುದು.

ನಾನು ಕಾಣುತ್ತೇನೆಂಬುದೂ ಮತ್ತು ಕಾಣುವವಸ್ತುಗಳೂ ಸಹ ಬರೀತೋರಿಕೆಯ ಮಾತ್ರವೆಂಬುದಂತೂ ಸರಿಯಷ್ಟೆ. ಅವುಗಳ ಇರುವಿಕೆ ಕೂಡ ತೋರಿಬರದಂತೆ ಯುಕ್ತಿಯಿಂದಲೂ ಶಾಸ್ತ್ರದಿಂದಲೂ ಪ್ರಯತ್ನಮಾಡುವ ಅಭ್ಯಾಸವೇ ಮನೋನಾಶದ ಅಭ್ಯಾಸ. ಹೊರಗಿರುವ ಎಲ್ಲವನ್ನು ಮನಸ್ಸಿಗೆ ಹತ್ತಗೊಡದಂತೆ ಮಾಡುತ್ತಲೇ ಪ್ರೀತಿ ಮತ್ತು ಹಗೆತನಗಳೂ ವೈರಿಯಳಿದು ಹೋಗುವುವು. ಇದೇವಾಸನಾಕ್ಷಯದ ಅಭ್ಯಾಸ.

ಈ ಮೂರರ ಅಭ್ಯಾಸಗಳು ಒಂದೇರೀತಿಯಲ್ಲಿ ತೋರುತ್ತಿರುವಾಗ ಇವುಗಳಲ್ಲಿ ಮುಖ್ಯತ್ವ ಮತ್ತು ಸಹಾಯಕತ್ವಗಳನ್ನು ಬಿಡಿಸಿ ತಿಳಿಯುವದೆಂತೆಂದರೆ, ಪ್ರಯೋಜನದಿಂದ ಅದನ್ನು ಗೊತ್ತುಮಾಡಿಕೊಳ್ಳಬೇಕು. ಮೋಕ್ಷವನ್ನು ಬಯಸಬೇಕೆಂಬ ಮನುಷ್ಯನಿಗೆ ಜೀವನ್ಮುಕ್ತಿ ಮತ್ತು ವಿದೇಹಮುಕ್ತಿಗಳೆಂಬೆರಡು ಪ್ರಯೋಜನಗಳಿರುವವು. ಬದುಕಿರುವ ಮನುಷ್ಯನಿಗೆ ದೈವೀಸಂಪತ್ತಿನಿಂದ ಮೋಕ್ಷವೂ ಆಸುರೀಸಂಪತ್ತಿನಿಂದ ಬಂಧವೂ ಆಗುವುವೆಂದು ಭಗವದ್ಗೀತೆಯ ಹದಿನಾರನೇ ಅಧ್ಯಾಯದಲ್ಲಿ ಶ್ರೀಕೃಷ್ಣಪರಮಾತ್ಮನೇ ಹೇಳಿರುವನು ಏನೆಂದರೆ? ಹೆದರದೇ ಇರುವುದು, ಶುದ್ಧವಾದಮನಸ್ಸು, ಜ್ಞಾನವನ್ನು ಅನುಭವಕ್ಕೆ ತಂದುಕೊಳ್ಳುತ್ತಿರುವುದು, ದಾನ, ಇಂದ್ರಿಯಗಳನ್ನು ಜಗ್ಗಿಹಿಡಿಯುವುದು, ಯಜ್ಞ, ವೇದಪಾಠ, ತಪಸ್ಸು ಸರಳತನ, ಯಾರನ್ನೂ ಪೀಡಿಸದೇ ಇರುವುದು, ನಿಜವನ್ನು ಹೇಳುವುದು, ಸಿಟ್ಟನ್ನು ತಡೆದುಕೊಳ್ಳುವುದು, ಫಲವನ್ನೂ

ಬಯಸದೆ ಇರುವದು, ಸಮಾಧಾನದಿಂದಿರುವದು, ಹೊಟ್ಟೇಕಿಚ್ಚಿಲ್ಲದೆ ಇರುವದು, ಪ್ರಾಣಿಗಳವಿಷಯದಲ್ಲಿ ಕನಿಕರವನ್ನು ತೋರಿಸುವದು, ಯಾವದರಲ್ಲಿಯೂ ಆಸಕ್ತನಾಗದೆ ಇರುವದು, ಮೃದುಸ್ವಭಾವದಿಂದಿರುವದು, ಅಯೋಗ್ಯವಾದ ಕೆಲಸಗಳ ವಿಷಯದಲ್ಲಿ ನಾಚುವದು, ಮನಸ್ಸು ತಳಮಳಿಸದೆ ಇರುವದು, ಎದೆಗುಂದದೆ ಇರುವದು, ಕಷ್ಟವಾದರೂ ಸಹಿಸುವದು, ಸ್ಥಿರಬುದ್ಧಿಯುಂಟಾಗಿರುವದು, ದೇಹದಲ್ಲಿಯೂ ಮಾತಿನಲ್ಲಿಯೂ ಮನಸ್ಸಿನಲ್ಲಿಯೂ ಶುಚಿಯಾಗಿರುವದು, ಇನ್ನೊಬ್ಬರಿಗೆ ಕೇಡುಮಾಡದಿರುವದು, ತಾನೇದೊಡ್ಡವನೆಂದು ಹೆಮ್ಮೆಗೊಳ್ಳದೆ ಇರುವದು, ಈ ಗುಣಗಳು ದೈವೀಸಂಪತ್ತಿನಿಂದ ಹುಟ್ಟಿದವನಲ್ಲಿ ತೋರುವವು. ಇನ್ನುಹೊರಗೆಮಾತ್ರ ಮಹಾ ಆಚಾರನಿಷ್ಠನೆಂದು ತೋರಿಸಿಕೊಳ್ಳುವದು, ಎಲ್ಲರಮೇಲೂ ತನ್ನ ಅಧಿಕಾರವನ್ನು ನಡೆಸುವದು, ತನಗೆ ಎದುರಿಲ್ಲವೆಂದು ಸೊಕ್ಕುವದು, ಸಿಟ್ಟಿನಿಂದ ಕಣ್ಣಿನಲ್ಲಿ ಕೆಂಡವನ್ನು ಸುರಿಸುತ್ತಿರುವದು ಬಿರುಸು ಮಾತುಗಳನ್ನಾಡುವದು, ನಿಜವನ್ನು ತಿಳಿಯದೆ ಇರುವದು ಈ ಗುಣಗಳು ಆಸುರೀಸಂಪತ್ತಿನಿಂದ ಹುಟ್ಟಿದವನಲ್ಲಿ ತೋರುವವು. ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಆ ಅಧ್ಯಾಯದ ಕೊನೆಯವರಿಗೂ ಆ ಆಸುರೀಸಂಪತ್ತನ್ನೇ ವಿವರಿಸಿರುವನು. ಈ ಆಸುರೀಸಂಪತ್ತನ್ನು ಶಾಸ್ತ್ರಗಳೆಲ್ಲಾ ಬಹುಬಗೆಯಾಗಿ ನಿಂದಿಸುವವು. ಈ ಕೆಟ್ಟವಾಸನೆಗಳೆಲ್ಲಾ ಹೇಗೋ ಹಿಂದಿನಿಂದ ಮನುಷ್ಯನ ಬೆನ್ನುಹತ್ತಿ ಬಂದಿರುವವು. ಇವುಗಳನ್ನು ಹೋಗಲಾಡಿಸಬೇಕಾದರೆ ಪ್ರಯತ್ನದಿಂದ ದೈವೀಸಂಪತ್ತನ್ನು ಮೈಗೂಡಿಸಿಕೊಳ್ಳುತ್ತ ಹೋಗಬೇಕು. ದೈವೀಸಂಪತ್ತಿನ ವಿಜೃಂಭಣೆಯಿಂದ ಆಸುರೀಸಂಪತ್ತು ಮುಖಕ್ಕೆ ಮುಸುಕುಹಾಕಿಕೊಂಡು ಹೋಗಿಬಿಟ್ಟರೆ ಜೀವನ್ಮುಕ್ತಿಯುಂಟಾಗುವುದು.

ವಾಸನಾಕ್ಷಯದಂತೆ ಮನೋನಾಶವೂಕೂಡ ಜೀವನ್ಮುಕ್ತಿಗೆ ಸಾಧನವೆಂದು ಶ್ರುತಿಯಲ್ಲಿ ಹೇಳಿದೆ. ಮನುಷ್ಯನನ್ನು ಬಲೆಯೊಳಕ್ಕೆ ಬೀಳಿಸುವುದೂ ಮನಸ್ಸೆ. ಬಲೆಯಿಂದ ಬಿಡಿಸುವುದೂ ಮನಸ್ಸೆ. ಮನಸ್ಸು ವಿಷಯಗಳ ಮುಂದೆ ಸೆರಗೊಡ್ಡಿ ಬಾಯಿನೀರು ಕರೆದರೆ ಬಲೆಗೆ ಬೀಳುತ್ತದೆ. ವಿಷಯಗಳ ವಿಚಾರವನ್ನೇ ಮನಸ್ಸಿಗೆ ತಂದುಕೊಳ್ಳುವುದನ್ನು ಬಿಟ್ಟರೇ ಬಲೆಯಿಂದ ಬಿಡಿಸಿಕೊಳ್ಳುತ್ತದೆ. ಮನಸ್ಸು ವಿಷಯಗಳ ವಿಚಾರವನ್ನು ತಂದುಕೊಳ್ಳದಿರುವುದೇ ಮುಕ್ತಿ. ಆದುದರಿಂದ ಮೋಕ್ಷವಾಗಬೇಕೆಂದು ಬಯಸುವವನು ತನ್ನ ಮನಸ್ಸಿನೊಳಕ್ಕೆ ವಿಷಯಗಳು ತಲೇಹಾಕದಂತೆ ಯಾವಾಗಲೂ ಎಚ್ಚರದಿಂದ ಕಾದುಕೊಂಡಿರಬೇಕು. ವಿಷಯಗಳ ಕಡೆಗೆ ಬಗ್ಗುವುದನ್ನು ಬಿಟ್ಟು ಮನಸ್ಸು ಹೃದಯದಲ್ಲಿ ತೆಪ್ಪಗೆ ನಿಂತಿತೆಂದರೆ ಅದಕ್ಕೆ ಉನ್ಮನೀಭಾವವೆಂದು ಹೆಸರು. ಅದೇ ಪರಮಪದವಿ. ಅಷ್ಟಾಗುವವರೆಗೂ ಮನಸ್ಸನ್ನು ತಡೆದುಕೊಳ್ಳುತ್ತಲೇ ಇರಬೇಕು. ಇದೇಜ್ಞಾನ, ಇದೇಧ್ಯಾನ, ಎಂದು ಶ್ರುತಿಯ ಅಭಿಪ್ರಾಯ. ಮನಸ್ಸಿಗೆ ಬಿದ್ದಿರುವ ಕಟ್ಟು ಬಿಗಿಯಾಗಿ ಯಾದರೂ ಇರಬಹುದು ಸಡಿಲವಾಗಿಯಾದರೂ ಇರಬಹುದು. ಆಸುರೀಸಂಪತ್ತು ಕಣ್ಣಿಗೆ ಕಾಣುವಹಾಗೆಯೇ ಮನಸ್ಸನ್ನು ಸಂಕಟಗೊಳಿಸುವುದರಿಂದ ಅದರಕಟ್ಟು ಬಿಗಿಯಾ-

ದದ್ದು. ಇನ್ನು ಆಸುರೀಸಂಪತ್ತಿಲ್ಲದೆ ಬೇರೆಬೇರೆ ಹೆಸರುಗಳಿಂದಲೂ ಬೇರೆಬೇರೆ ಆಕಾರಗಳಿಂದಲೂ ಬಗೆಬಗೆಯಾದ ವಿಷಯಗಳು ಮನಸ್ಸಿಗೆ ಕಂಗೊಳಿಸುವ ಮಾತ್ರವಾದ ಕಟ್ಟು, ಸಡಿಲವಾದಕಟ್ಟು, ಈ ವಿಷಯಗಳತೋರಿಕೆಯು ಕಾಣಿಸಿ ಯಾವಸಂಕಟವನ್ನೂ ತಂದುಹಾಕುವುದಿಲ್ಲ; ಆದರೆ ಮೆಲ್ಲಮೆಲ್ಲಗೆ ಆಸುರೀಸಂಪತ್ತಿಗೆ ದಾರಿಯಾಗುವ ಸಂಭವವುಂಟು. ವಾಸನಾಕ್ಷಯವಾದರೆ ಆ ಬಿಗಿಯಾದ ಕಟ್ಟು ಮಾತ್ರ ಅಂದರೆ ಆಸುರೀಸಂಪತ್ತು ಮಾತ್ರ ಕಳಚಿಕೊಳ್ಳುವುದು. ಮನೋನಾಶವಾದರೆ ಎರಡು ಕಟ್ಟುಗಳೂ ಕಳಚಿಕೊಳ್ಳುವುವು. ಮನೋನಾಶದಿಂದಲೇ ಎರಡುಕಟ್ಟುಗಳೂ ಕಳಚಿಕೊಳ್ಳುವುವೆಂದಮೇಲೆ ಸುಮ್ಮಸುಮ್ಮನೆ ವಾಸನಾಕ್ಷಯದ ಕಷ್ಟವೇಕೆಂದರೆ ಒಂದುವೇಳೆ ಯಾವಾಗಲಾದರೂ ನಮ್ಮ ಬಲವಾದ ಒಂದು ಪ್ರಾರಬ್ಧಕರ್ಮವು ನಮಗೆ ಸುಖವನ್ನು ಕೊಡುವುದಕ್ಕೆ ಮೇಲೆಬಿದ್ದುಬಂದಾಗ ಮನಸ್ಸು ತಲೆ ಎತ್ತಿದರೂ ವಾಸನಾಕ್ಷಯವಾಗಿದ್ದರೆ ಬಿಗಿಯಾದಕಟ್ಟಾಗಿರುವ ಆಸುರೀಸಂಪತ್ತನ್ನು ಒಳಕ್ಕೆ ಬಿಟ್ಟುಕೊಳ್ಳದೇ ಇರುವುದಕ್ಕೆ ಸಹಾಯವಾಗುವುದು. ಈ ಪ್ರಾರಬ್ಧಕರ್ಮದ ಅನುಭವವು ವಿಷಯಗಳ ಬಗೆಬಗೆಯ ತೋರಿಕೆಯೆಂಬ ಸಡಿಲವಾದ ಕಟ್ಟಿನೊಳಗೆ ಸಾಗಿಹೋಗಬಹುದು, ಬಿಗಿಯಾದ ಕಟ್ಟಾಗಿರುವ ಆಸುರೀ ಸಂಪತ್ತೆಲ್ಲಾ ತಾಮಸವೃತ್ತಿಗಳು. ಸಾತ್ತ್ವಿಕವೃತ್ತಿಗಳೂ ರಾಜಸವೃತ್ತಿಗಳೂ ಎರಡೂ ಸಡಿಲವಾದ ಕಟ್ಟುಗಳು. ಇವುಗಳಲ್ಲಿ ಬಿಗಿಯಾದ ಕಟ್ಟಾಗಿರುವ ಆಸುರೀಸಂಪತ್ತುಗಳು ವಾಸನಾಕ್ಷಯದಿಂದಲೇ ಹೋಗಿಬಿಡುತ್ತವೆ. ಸಡಿಲವಾದ ಕಟ್ಟಾಗಿರುವ ವಿಷಯಗಳ ಬರೀ ತೋರಿಕೆಯಿದ್ದರೂ ಅದರಿಂದ ಕೊರತೆಯಿಲ್ಲ. ಹೀಗಿರುವಾಗ ಮನೋನಾಶವೇತಕ್ಕೆಂದು ತೋರಬಹುದು. ಸುಖವನ್ನೊ ದುಃಖವನ್ನೊ ಕೊಡುವ ಪ್ರಾರಬ್ಧವು ಅಷ್ಟೇನೂ ಪ್ರಬಲವಾಗಿಲ್ಲನೇ ಇರುವಾಗ ಅದರ ಉಲ್ಬಣವನ್ನು ಹಿಮ್ಮುಖಮಾಡುವುದಕ್ಕೆ ಮನೋನಾಶವು ಬೇಕಾಗುತ್ತದೆ. ಪ್ರಾರಬ್ಧದ ಕೈಮೇಲಾಗಿರುವಾಗ ಅದರಿಂದ ಬರುವ ಸುಖದುಃಖಗಳನ್ನು ತಪ್ಪಿಸಿಕೊಳ್ಳುವುದಕ್ಕೆ ಯಾರಿಂದಲೂ ಆಗುವುದಿಲ್ಲ. ಹಾಗೆ ಆಗುತ್ತಿದ್ದರೆ, ನಳ, ರಾಮ, ಧರ್ಮರಾಯ ಇವರಿಗೆ ದುಃಖದ ತೊಡಕು ಬೀಳುತ್ತಲೇ ಇರಲಿಲ್ಲ. ಆದಕಾರಣ ಜೀವನ್ಮುಕ್ತಿಗೆ ವಾಸನಾಕ್ಷಯ ಮನೋನಾಶಗಳೆರಡೂ ಸಾಕ್ಷಾತ್ಸಾಧನಗಳು. ಆದುದರಿಂದ ಜ್ಞಾನವಾದಮೇಲೆ ಇವು ಅವರಿಗೆ ಮುಖ್ಯಸಾಧನಗಳೆನಿಸುವುವು. ಈ ಎರಡುಸಾಧನಗಳನ್ನು ಮೈಗೂಡಿಸಿಕೊಳ್ಳುವುದರಲ್ಲಿ ತತ್ತ್ವಜ್ಞಾನವು ಮೇಲೆಮೇಲೆ ತನಗೆತಾನೇ ತೋರಿಕೊಳ್ಳುತ್ತಲೇ ಇರುವುದರಿಂದ ಜ್ಞಾನಿಗಳಿಗೆ ಆ ಜ್ಞಾನದ ಅಭ್ಯಾಸವು ಸಹಾಯಕವಾಗಿರುವುದು.

ತತ್ತ್ವಜ್ಞಾನವು ವಾಸನಾಕ್ಷಯಕ್ಕೆ ಸಾಧನವಾಗುವುದೆಂದು ಎಷ್ಟೋ ಶ್ರುತಿಗಳು ಹೇಳುತ್ತವೆ. ಪರಮಾತ್ಮನ ಜ್ಞಾನವಾದರೆ ಕಟ್ಟುಗಳೆಲ್ಲಾ ಹರಿದುಕೊಂಡು ಹೋಗುತ್ತವೆ. ಕ್ಲೇಶಗಳು ಕರಗುತ್ತಬಂದರೆ ಹುಟ್ಟುಸಾವುಗಳು ಇಲ್ಲದಂತಾಗುತ್ತವೆ. ಒಂದೇ ಮನಸ್ಸಿನಿಂದ ದೇವರನ್ನು ತಿಳಿದವನ ಮೇಲೆ ಹರ್ಷಶೋಕಗಳು ಕೈಮಾಡುವುದಿಲ್ಲ. ಆತ್ಮಸ್ವರೂಪವನ್ನು

ತಿಳಿದವನು ಪಾರಾಗುತ್ತಾನೆ. ಎಲ್ಲೆಲ್ಲಿಯೂ ಒಂದನ್ನೇ ನೋಡುವವನಿಗೆ ಮೋಹವೆಲ್ಲಿ? ಶೋಕವೆಲ್ಲಿ? ಆತ್ಮಸ್ವರೂಪವನ್ನು ತಿಳಿದವರೇ ಎಲ್ಲಾ ಕಟ್ಟುಗಳನ್ನೂ ಕಳೆದುಕೊಳ್ಳುತ್ತಾರೆ. ಇವೆಲ್ಲಾ ಅಂಥಾಶ್ರುತಿಯ ಅಭಿಪ್ರಾಯಗಳು. ಹೀಗೆಯೇ ತತ್ತ್ವಜ್ಞಾನವು ಮನೋನಾಶಕ್ಕೂ ಸಾಧನವಾಗುವದೆಂದೂ ಶ್ರುತಿಗಳಿವೆ. ಜ್ಞಾನಿಗೆ ಎಲ್ಲವೂ ಆತ್ಮವೇ ಆಗಿರುವಾಗ ಯಾರು ಯಾರನ್ನು ನೋಡುತ್ತಾರೆ? ಎಂದು ಶ್ರುತಿಯ ಅಭಿಪ್ರಾಯ.

ಆತ್ಮತತ್ತ್ವವನ್ನು ತಿಳಿದುಕೊಂಡು ಮನಸ್ಸಿನ ವೃತ್ತಿಗಳಾಗುವದನ್ನು ಬಿಟ್ಟರೆ ಆ ಮನಸ್ಸು ಮನಸ್ಸೇ ಅಲ್ಲವೆಂದು ಗೌಡಪಾದಾಚಾರ್ಯರು ಹೇಳಿದ್ದಾರೆ. ಜೀವನ್ಮುಕ್ತಿಗೆ ವಾಸನಾಕ್ಷಯ ಮತ್ತು ಮನೋನಾಶಗಳು ಹೇಗೆ ಸಾಕ್ಷಾತ್ಸಾಧನೆಗಳೋ ಹಾಗೆ ವಿದೇಹಮುಕ್ತಿಗೆ ಅಂದರೆ ದೇಹವನ್ನು ಬಿಟ್ಟಮೇಲೆ ಆಗುವಮುಕ್ತಿಗೆ ಜ್ಞಾನವೇ ಸಾಕ್ಷಾತ್ಸಾಧನವಾಗಿ ಮುಖ್ಯವೆನಿಸಿಕೊಳ್ಳುವದು. ಜ್ಞಾನದಿಂದಲೇ ಕೈವಲ್ಯವೆಂದು ಸ್ಮೃತಿಯೂ ವುಂಟು. ಕೈವಲ್ಯವೆಂದರೆ ದೇಹಾದಿಗಳಿಲ್ಲದೆ ಆತ್ಮಸ್ವರೂಪದಲ್ಲಿರುವದು. ಅದು ಕೈಗೂಡಬೇಕಾದರೆ ಜ್ಞಾನದಿಂದಲೇ ಸರಿ, ದೇಹದಿಂದ ಕೂಡಿರುವವನಿಗೆ ಆ ದೇಹವು ಅಜ್ಞಾನದಿಂದಲೇ ಆದದ್ದಾಗಿರುವದು. ಆದ್ದರಿಂದ ಅದು ಜ್ಞಾನವೊಂದರಿಂದಲೇ ಹೋಗತಕ್ಕದ್ದು. ಜ್ಞಾನದಿಂದಲೇ, ಎಂದರೆ ಕರ್ಮ, ಮಕ್ಕಳು ಮರಿ ಮುಂತಾದ ಬೇರೆ ಯಾವುದರಿಂದಲೂ ಅಲ್ಲವೆಂದರ್ಥ.

ಯಾವನಾದರೂ ಜ್ಞಾನಶಾಸ್ತ್ರವನ್ನು ಅಭ್ಯಾಸಮಾಡದೆ ಆದಷ್ಟು ವಾಸನಾಕ್ಷಯ ಮನೋನಾಶಗಳನ್ನು ಮಾಡಿಕೊಂಡು ಸಗುಣಬ್ರಹ್ಮನನ್ನು ಉಪಾಸನೆಮಾಡಿದರೆ ಅವನಿಗೆ ಕೈವಲ್ಯವಾಗಲಾರದು. ಏಕೆಂದರೆ ಅವನ ಸೂಕ್ಷ್ಮದೇಹವು ನಾಶವಾಗುವದಕ್ಕೆ ಕಾರಣವಿಲ್ಲ. ಅದು ಜ್ಞಾನದಿಂದಲೇ ನಾಶವಾಗತಕ್ಕದ್ದು. ವಾಸನಾಕ್ಷಯವಾಗಲಿ ಮನೋನಾಶವಾಗಲಿ ಎರಡೂ ಸೇರಿ ಆಗಲೀ ಅದನ್ನು ಧ್ವಂಸಮಾಡಲಾರವು. ಜ್ಞಾನದಿಂದ ಆಗುವ ಕೈವಲ್ಯದಿಂದಲೇ ಎಲ್ಲಾಬಂಧಗಳೂ ಬಿಚ್ಚಿಕೊಳ್ಳುವವು. ಬಂಧಗಳು ಅನೇಕಬಗೆಯಾಗಿರುವವು.

ಅವಿದ್ಯಾಗ್ರಂಥಿ, ಅಬ್ರಹ್ಮತ್ವ, ಹೃದಯಗ್ರಂಥಿ, ಸಂಶಯ, ಕರ್ಮಗಳು, ಸರ್ವಕಾಮತ್ವ, ಮೃತ್ಯು, ಪುನರ್ಜನ್ಮ ಮೊದಲಾದ ಮಾತುಗಳಿಂದ ಅಲ್ಲಲ್ಲಿ ಕಾಣಿಸಿಕೊಳ್ಳುವವು. ಇವೆಲ್ಲಾ ಅಜ್ಞಾನದಿಂದಲೇ ಆದವುಗಳು. ಆದ್ದರಿಂದ ಜ್ಞಾನದಿಂದಲೇ ಹೋಗತಕ್ಕವುಗಳು. ಈ ಅಭಿಪ್ರಾಯವನ್ನು ಎಷ್ಟೋ ಶ್ರುತಿಗಳು ಹೇಳುತ್ತವೆ. ಈ ವಿದೇಹಮುಕ್ತಿಯು ಜ್ಞಾನವಾದಾಗಲೇ ಆಯಿತೆಂದು ತಿಳಿಯಬೇಕು. ಏಕೆಂದರೆ ಈ ಬಂಧನಗಳೆಲ್ಲಾ ಅಜ್ಞಾನದಿಂದ ಬ್ರಹ್ಮವಸ್ತುವಿನಲ್ಲಿ ಕಲ್ಪಿತವಾದವುಗಳು. ಜ್ಞಾನವಾದಮೇಲೆ ಮತ್ತೆ ಅವು ತಲೆ ಎತ್ತುವಹಾಗಿಲ್ಲ. ಆದುದರಿಂದಲೇ ಜ್ಞಾನವೂ ವಿದೇಹಮುಕ್ತಿಯೂ ಒಂದೇ ಸಮಯದಲ್ಲಿ ಆಗತಕ್ಕವುಗಳೆಂದು ಭಗವಾನ್ ಭಾಷ್ಯಕಾರರು ಸೂತ್ರದಲ್ಲಿ ವಿವರಿಸಿರುತ್ತಾರೆ.

“ ಈಗ ಇರುವ ದೇಹವು ಬಿದ್ದುಹೋದಮೇಲೆ ಇನ್ನೊಂದು ದೇಹವಿಲ್ಲದಂತೆ ವಿದೇಹಮುಕ್ತಿಯಾಗುವುದೆಂದು ಬಹುಜನರು ಹೇಳುವದರಿಂದಲೂ ಅದರಂತೆ ಶ್ರುತಿಯೂ ಇರುವುದರಿಂದಲೂ ಪ್ರಾರಬ್ಧ ಕರ್ಮಬಲದಿಂದ ಒಬ್ಬನು ಜೀವನ್ಮುಕ್ತನಾದರೆ ಅವನು ಕೆಲವುಕಾಲ ಅದನ್ನು ಅನುಭವಿಸಿ ಆ ಕರ್ಮದ ಆಟವು ಮುಗಿಯುತ್ತಲೇ ಮತ್ತೆ ಹುಟ್ಟದಂಥ ನಿರತಿಶಯಾನಂದ ಸ್ವರೂಪವಾದ ಕೈವಲ್ಯವನ್ನು ಪಡೆಯುವನೆಂದು ವಾಕ್ಯವೃತ್ತಿಕಾರರು ಹೇಳಿರುವುದರಿಂದಲೂ ಜನ್ಮಕ್ಕೆ ಹತ್ತಿಬಂದಿರುವ ಪ್ರಾರಬ್ಧದ ಪುಣ್ಯಪಾಪಗಳನ್ನೆಲ್ಲಾ ಅನುಭವಿಸಿ ಮುಗಿಸಿದಮೇಲೆ ಕೈವಲ್ಯವನ್ನು ಪಡೆಯುವನೆಂದು ಸೂತ್ರಕಾರರು ಹೇಳಿರುವುದರಿಂದಲೂ ತನ್ನ ದೇಹವು ಬಿದ್ದುಹೋದಮೇಲೆ ಜೀವನ್ಮುಕ್ತಿ ಸ್ಥಿತಿಯನ್ನು ಬಿಟ್ಟು-ಗಾಳಿಯು ಅಲ್ಲಾಡುವುದನ್ನು ಬಿಟ್ಟಂತೆ-ವಿದೇಹಮುಕ್ತಸ್ಥಿತಿಯನ್ನು ಪಡೆಯುತ್ತಾನೆಂದು ವಸಿಷ್ಠರು ಹೇಳಿರುವುದರಿಂದಲೂ ದೇಹವನ್ನು ಬಿಟ್ಟಮೇಲೆಯೇ ವಿದೇಹಮುಕ್ತಿಯಲ್ಲವೆ?” ಎಂದರೆ ಈ ಎಲ್ಲಾ ಅಭಿಪ್ರಾಯಗಳೂ ಸರಿಯೇ ದೇಹವು ಬಿಟ್ಟುಹೋದಮೇಲೆಯೇ ವಿದೇಹಮುಕ್ತಿ ಎಂಬಮಾತೂ ಒಂದುರೀತಿಯಿಂದ ಸರಿ. ದೇಹದಿಂದ ಕೂಡಿದ್ದರೂ ಜ್ಞಾನವಾಗುತ್ತಲೇ ವಿದೇಹಮುಕ್ತಿ ಎಂಬಮಾತೂ ಒಂದುರೀತಿಯಿಂದ ಸರಿ. ದೇಹವು ಬಿದ್ದುಹೋದಮೇಲೆಯೇ ವಿದೇಹಮುಕ್ತಿಯೆಂದು ಹೇಳುವವರು ದೇಹವೆಂಬಮಾತಿನಲ್ಲಿ ಈಗ ಇರುವುದನ್ನೂ ಸೇರಿಸಿಕೊಳ್ಳುವರು. ಮುಂದೆ ಬರುತ್ತಿದ್ದ ದೇಹಗಳಿಂದ ಮಾತ್ರವೇ ಬಿಡುಗಡೆಯಾಗುವುದಲ್ಲದೆ ಈಗ ಇರುವ ದೇಹದಿಂದಲೂ ಬಿಡುಗಡೆಯಾಗುವುದೆಂದರೆ ಈ ದೇಹವು ಬಿದ್ದುಹೋದಮೇಲೆಯೇ ಎಂದು ಸ್ಪಷ್ಟವಾಯಿಯಿತು. ಇನ್ನು ಜ್ಞಾನವಾಗುತ್ತಲೆ ವಿದೇಹಮುಕ್ತಿಯಾಯಿತೆಂಬ ಅಭಿಪ್ರಾಯದಲ್ಲಿ ದೇಹವೆಂಬಮಾತಿನೊಳಗೆ ಈಗ ಇರುವ ದೇಹವು ಸೇರುವುದಿಲ್ಲ. ಮುಂದೆಬರುತ್ತಿದ್ದ ದೇಹಗಳೆಂದು ಅದರ ಅರ್ಥ. ಜ್ಞಾನವಾಗುತ್ತಲೇ ಮುಂದೆ ದೇಹಮೊದಲಾದವುಗಳನ್ನು ಕೊಡುವಕರ್ಮಗಳೆಲ್ಲಾ ಸುಟ್ಟುಹೋಗುವುದರಿಂದ ಆಗಲೇ ಅವನನ್ನು ವಿದೇಹಮುಕ್ತನೆಂದು ಕರೆಯುವುದಕ್ಕೇನೂ ಹಿಂದುಮುಂದು ನೋಡಬೇಕಾದುದೇ ಇಲ್ಲ. ಜ್ಞಾನವನ್ನು ಪಡೆಯುವದೆಂಬುದು ಮುಂದೆ ದೇಹಗಳು ಬಂದು ಗಂಟುಬೀಳದಂತೆ ಆಗುವುದಕ್ಕೇ ಹೊರತು ಈ ದೇಹದ ಕಟ್ಟನ್ನು ಕಳಚಿಕೊಳ್ಳುವುದಕ್ಕಲ್ಲ. ಈ ದೇಹ ಮೊದಲೇ ಗಂಟು ಬಿದ್ದೇಬಿಟ್ಟಿರುವದ್ದರಿಂದ ಇದು ನಮಗೆ ಬಂದಂತೆ ಮಾಡುವುದು ಜ್ಞಾನದಿಂದಲೂ ಆಗುವುದಿಲ್ಲ. ಈ ದೇಹವು ಬಿದ್ದುಹೋಗುವುದೂ ಜ್ಞಾನದ ಫಲವಲ್ಲ. ಏಕೆಂದರೆ, ಅಜ್ಞಾನಿಗಳಿಗಾದರೂ ಪ್ರಾರಬ್ಧಕರ್ಮವು ಮುಗಿಯುತ್ತಲೆ ಅವರ ದೇಹವು ಬಿದ್ದುಹೋಗುತ್ತದೆ. ಸ್ಥೂಲದೇಹವು ಪ್ರಾರಬ್ಧಕರ್ಮದಿಂದ ಹೋದರೂ ಸೂಕ್ಷ್ಮದೇಹವು ಜ್ಞಾನದ ಹೊರತು ಇನ್ನೊಂದರಿಂದ ಹೋಗುವುದಿಲ್ಲವಾದುದರಿಂದ ಈಗ ಆದ ಜ್ಞಾನಕ್ಕೆ ಸೂಕ್ಷ್ಮದೇಹದ ಭಂಗವೇ ಫಲವೆಂದಾಗಲೆಂದರೆ ಅದು ಸರಿಯಲ್ಲ. ಜ್ಞಾನವಾದಮೇಲೂ ಜೀವನ್ಮುಕ್ತರಲ್ಲಿ ಲಿಂಗದೇಹ ಇದ್ದುಕೊಂಡೇ ಇರುವುದು, ಹಾಗಾದರೆ ಜ್ಞಾನವು ಪ್ರಾರಬ್ಧಕರ್ಮದ ಮುಂದೆ ತನ್ನ ಆಟವನ್ನು ಸಾಗಿಸಲಾರದೆ ಕೆಲವುಕಾಲ ಸುಮ್ಮನಿದ್ದು ಆ ಕರ್ಮವು

ನೆಯುತ್ತಲೇ ಲಿಂಗದೇಹವನ್ನು ಇಲ್ಲದಂತೆ ಮಾಡುವುದೆಂದೇಕೆ ಹೇಳಬಾರದು? ಎಂದರೆ
ಗೆ ಆಗಲಾರದು. ಜ್ಞಾನವು ಅಜ್ಞಾನವನ್ನು ಭಂಗಮಾಡುವುದೇ ಹೊರತು ಯಾವ-
ಹವನ್ನೂ ಭಂಗಮಾಡುವುದಿಲ್ಲ. ಹಾಗಾದರೆ ಲಿಂಗದೇಹದ ಭಂಗವು ಏತರಿಂದಾಗು-
ದೆಂದರೆ? ಏತರಿಂದಲೂ ಅಲ್ಲ. ತಾನಾಗಿಯೇ ಹೋಗುವುದು. ಯಾವುದಾದರೊಂದು ಹೋ-
ವುದಕ್ಕೆ ಎರಡುಬಗೆಯ ಕಾರಣಗಳಿರುತ್ತವೆ. ಅದಕ್ಕೆ ವಿರುದ್ಧವಾದುದೇನಾದರೂ ಒದ-
ವದೊಂದು, ಏನೂ ಒದಗದೇ ಇರುವುದೊಂದು. ಉದಾಹರಣೆ ನೋಡಿರಿ! ವಿರುದ್ಧವಾದ
ಳಿಬಂದರೂ ದೀಪವು ಹೋಗುವುದು. ಎಣ್ಣೆಯೂ ಬತ್ತಿಯೂ ಮುಗಿದರೂ ದೀಪವು
ಹೋಗುವುದು. ಲಿಂಗದೇಹಕ್ಕೆ ಸಾಕ್ಷಾತ್ತಾಗಿ ವಿರೋಧವಾದದ್ದಾಗಿ ಯಾವುದೂ ಕಂ-
ಬಂದಿಲ್ಲ. ಇನ್ನು ಏನೊಂದೂ ಒದಗದೇಇರುವುದು ಕಾರಣವಾಗಿರಬೇಕು. ಈ ಒದಗುವ-
ಂಬುದು ಎರಡುಬಗೆ. ಈ ಜನ್ಮಕ್ಕೆ ಹತ್ತಿಬಂದಿರುವ ಪ್ರಾರಬ್ಧ ಕರ್ಮವೊಂದು, ಇವಲ್ಲದೆ
ಂದೆ ರಾಸಿಯಾಗಿ ಬಿದ್ದಿರುವದಿನ್ನೊಂದು. ಅಜ್ಞಾನಿಗಳಿಗೆ ಈ ಎರಡುಬಗೆಯ ಸಹಾಯ-
ಂಪತ್ತಿನಿಂದಲೂ ಲಿಂಗದೇಹವು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಅಂಟಿಕೊಂ-
ರುವುದು. ಜ್ಞಾನಿಗಳಿಗಾದರೋ ಹಿಂದೆ ರಾಸಿಯಾಗಿ ಬಿದ್ದಿರುವ ಕರ್ಮವೆಲ್ಲಾ ಜ್ಞಾನ-
ಂದಲೇ ಸುಟ್ಟುಭಸ್ಮವಾಗಿರುವುದು. ಪ್ರಾರಬ್ಧವು ಅನುಭವದಿಂದಲೇ ತೀರಿ ಎಣ್ಣೆಯೂ
ತ್ತಿಯೂ ಇಲ್ಲದ ದೀಪದಹಾಗೆ ಸಹಾಯಸಂಪತ್ತಿಲ್ಲದ ಕಾರಣ ಹೋಗಿಬಿಡುವುದು.
ದಕಾರಣ ಲಿಂಗದೇಹವು ಹೋಗುವುದೆಂಬುದು ಜ್ಞಾನದ ಫಲವಲ್ಲ. ಇದೇ ಕಾರಣದಿಂ-
ವಲೇ ಮುಂದೆ ದೇಹಗಳು ಬರದೆ ಇರುವುದೆಂಬುದೂ ಜ್ಞಾನದ ಫಲವಲ್ಲ, ಏಕೆಂದರೆ.
ಜ್ಞಾನಕ್ಕೆ ದೇಹವು ಹುಟ್ಟದೇಇರುವುದೇ ಫಲವೋ? ಅಥವಾ ಎಂದೆಂದಿಗೂ ಹುಟ್ಟದಂತೆ
ಆಗುವದೇ ಫಲವೋ? ಎಂದು ವಿಚಾರಿಸಿದರೆ ಹುಟ್ಟದೇ ಇರುವುದು ಪ್ರಾಗಭಾವವಾದುದ-
ರಿಂದ ಯಾವಾಗಲೂ ಇದ್ದೇಇರುವುದು. ಅದುದರಿಂದ ಅದುಫಲವಲ್ಲ. ಇನ್ನು ಫಲವು
ಪ್ರಾರಂಭವಾಗದೆ ಇರುವ ಕರ್ಮವೆಂಬ ಸಾಮಗ್ರಿಯು ಹೋಗುವುದರಿಂದಲೇ ಮುಂದೆ
ಎಂದೆಂದಿಗೂ ದೇಹಗಳು ಬರದೇ ಇರುವುದರಿಂದ ಕರ್ಮ ಹೋಗುವುದೇ ಜ್ಞಾನಕ್ಕೆ ಫಲ-
ವೆನ್ನಬೇಕಾಗುವುದು. ಅದೂ ಸರಿಯಲ್ಲ. ಏಕೆಂದರೆ— ಜ್ಞಾನದಿಂದ ಅಜ್ಞಾನವೇ ಸಾಕ್ಷಾ-
ತ್ತಾಗಿ ಹೋಗುತ್ತದೆ. ಹೀಗಿರುವುದರಿಂದ ಮುಂದಿನ ದೇಹಗಳು ಬರದೇ ಇರುವುದು ಜ್ಞಾ-
ನದ ಫಲವೆಂದು ಹೇಳಿದ್ದು ಹೇಗೇ ಎಂದರೆ? ಇದಕ್ಕೆ ಶ್ರುತಿಪ್ರಮಾಣವಿರುವುದು. ಜ್ಞಾನ-
ದಿಂದ ಅಜ್ಞಾನಹೋಗುವುದೆಂಬ ಕಡೆ ಅಬ್ರಹ್ಮತ್ವವೊದಲಾದವುಗಳೆಲ್ಲ ಅಜ್ಞಾನವೆಂದೇ
ಅರ್ಥ.

ಯಾಜ್ಞವಲ್ಕ್ಯರೂ ಹೀಗೆ ಹೇಳಿರುವುದಲ್ಲದೆ ಈ ಅರ್ಥವನ್ನೇ ಬೇರೆಶ್ರುತಿಗಳೂ ಹೇ-
ಳಿರುವುವು. ತತ್ತ್ವಜ್ಞಾನವಾಗುತ್ತಲೇ ಅದರ ಫಲವಾದ ವಿದೇಹಮುಕ್ತಿಯು ಆಗಲೇ
ಆಗದೆ ಮುಂದೆ ಯೆಂದೋ ಆಗುವುದಾದರೆ ಅದು ಜ್ಯೋತಿಷ್ಟೋಮ ಮೊದಲಾದವುಗಳ
ಹಾಗೆ ಒಂದು ಅದೃಷ್ಟವನ್ನು ಹುಟ್ಟಿಸುವಂಥಾದ್ದೆನ್ನಿಸಿಕೊಳ್ಳುವುದು. ಹಾಗಾಗುವ

ಪಕ್ಷದಲ್ಲಿ ಜ್ಞಾನಶಾಸ್ತ್ರವೆಂಬುದು ಕರ್ಮಶಾಸ್ತ್ರದೊಳಗೇ ಅಡಗಿಕೊಳ್ಳುವುದು. ಮಂತ್ರವೊದಲಾದವುಗಳಿಂದ ಬೆಂಕಿಯು ಸುಡುವ ಶಕ್ತಿಯನ್ನು ತಡೆದಿಡುವುದಕ್ಕಾಗುವಂತೆ ಪ್ರಾರಬ್ಧ ಕರ್ಮವು ಜ್ಞಾನದ ಪ್ರಭಾವವನ್ನು ನಡೆಯಗೊಡದೇ ಇದ್ದು ಕೆಲವುಕಾಲದ ಮೇಲೆ ವಿದೇಹಮುಕ್ತಿಯನ್ನು ಕೊಡುವುದೆಂದು ಕೂಡ ಹೇಳಬಾರದು. ನಮ್ಮ ಅಭಿಪ್ರಾಯದಂತೆ ಮುಂದೆ ಬರತಕ್ಕ ದೇಹಗಳಿಂದ ಬಿಡುಗಡೆಮಾಡುವ ವಿದೇಹಮುಕ್ತಿಯನ್ನು ಕೊಡುವ ಜ್ಞಾನವು ಈಗ ಬಂದಿರುವ ದೇಹಕ್ಕೆ ಸಂಬಂಧಪಟ್ಟ ಪ್ರಾರಬ್ಧಕ್ಕೆ ವಿರುದ್ಧವಾದುದೇನೂ ಇಲ್ಲ. ಆ ಜ್ಞಾನಕ್ಕೂ ಈ ಪ್ರಾರಬ್ಧಕ್ಕೂ ಒಂದಕ್ಕೊಂದು ವಿರೋಧವಿದ್ದರೆ ಈ ಪ್ರಾರಬ್ಧವು ಆ ಜ್ಞಾನದ ಆಟವನ್ನು ನಿಲ್ಲಿಸುವುದೆಂದರೂ ಒಪ್ಪುತ್ತಿತ್ತು. ಇದೂ ಅಲ್ಲದೆ ಜ್ಞಾನವು ಕ್ಷಣಿಕವಾದದ್ದು. ಕಾಲಾಂತರದಲ್ಲಿ ತಾನೇ ಇರುವುದಿಲ್ಲ. ಆಗ ಅದರಿಂದ ಮುಕ್ತಿ ಹೇಗಾದೀತು? ಕೊನೆಯ ಸಾಕ್ಷಾತ್ಕಾರವೆಂಬ ಮತ್ತೊಂದು ಜ್ಞಾನವು ಹುಟ್ಟುತ್ತದೆ ಎಂದು ಹೇಳುವುದಕ್ಕಿಲ್ಲ ಏಕೆಂದರೆ? ಅದಕ್ಕೆ ಸಾಧನವಿಲ್ಲ? ಅಡ್ಡಿಯಾಗಿರುವ ಪ್ರಾರಬ್ಧವು ಹೋಗುವುದರ ಜೊತೆಗೆ, ಗುರು, ಶಾಸ್ತ್ರ, ದೇಹ, ಇಂದ್ರಿಯವೊದಲಾದ ಜಗತ್ತು ತೋರುವುದೇ ನಿಂತುಹೋದಮೇಲೆ ಸಾಧನವೇನು ಇದ್ದೀತು? ಹಾಗಾದರೆ ಮತ್ತೆ ಎಲ್ಲಾ ಮಾಯೆಯೂ ನಾಶವಾಗುವುದು. ಎಂಬ ಶ್ರುತಿಯ ಅರ್ಥವೇನು? ಎಂದರೆ? ಪ್ರಾರಬ್ಧ ಕರ್ಮವು ಹೋಗುವುದರಿಂದ ಕಾರಣ ಹೋಗೆಲಾಗಿ ದೇಹವೊದಲಾದವುಗಳು ಹೋಗಿಬಿಡುವುವೆಂದೇ ಅಭಿಪ್ರಾಯವು. ಆದಕಾರಣ ಈಗ ಇರುವ ದೇಹವು ಇಲ್ಲದಂತೆ ಆಗುವಂಥ ವಿದೇಹಮುಕ್ತಿಯು ಈ ದೇಹವನ್ನು ಬಿಟ್ಟಮೇಲೆಯೇ ಆಗಲಿ ಮುಂದೆ ದೇಹವು ಗಂಟುಬೀಳುವುದನ್ನು ತಪ್ಪಿಸುವಂಥ ವಿದೇಹಮುಕ್ತಿಯು ಜ್ಞಾನದೊಡನೆಯೇ ಆಗುವುದು. ಈ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡೇ ಭಗವಾನ್ ಶೇಷನು ಜ್ಞಾನವನ್ನು ಪಡೆದು ಅದರ ಜೊತೆಯಲ್ಲಿಯೇ ಮುಕ್ತಿಯನ್ನು ಸಂಪಾದಿಸಿಕೊಂಡವನು ಪುಣ್ಯತೀರ್ಥಗಳಲ್ಲಾದರೂ ದೇಹವನ್ನು ಬಿಡಲಿ ಹೊಲೆಯನ ಮನೆಯಲ್ಲಾದರೂ ದೇಹವನ್ನು ಬಿಡಲಿ ಎಚ್ಚರದಪ್ಪಿ ದೇಹವನ್ನು ಬಿಡಲಿ ಅವನಿಗೆ ಕೈವಲ್ಯವಾಗುವುದು ಎಂದು ಹೇಳಿರುವನು. ಆದಕಾರಣ ವಿದೇಹಮುಕ್ತಿಯ ವಿಷಯದಲ್ಲಿ ತತ್ತ್ವಜ್ಞಾನವು ಸಾಕ್ಷಾತ್ಸಾಧನವಾಗಿ ಮುಖ್ಯವೆನ್ನಿಸಿಕೊಂಡಿರುವುದು. ಆ ಜ್ಞಾನವಾಗುವುದಕ್ಕೆ ಮೊದಲು ವಾಸನಾಕ್ಷಯ ಮನೋನಾಶಗಳು ಜ್ಞಾನಕ್ಕೇ ಸಾಧನವಾಗಿರುವುದರಿಂದ ಸಹಾಯಕರಗಳೆನ್ನಿಸಿಕೊಳ್ಳುವವು. ಅಸುರೀಸಂಪತ್ತಿನ ವಾಸನೆಯನ್ನು ಕಳೆಯುವುದಕ್ಕೆ ದೈವೀಸಂಪತ್ತಿನ ಅಭ್ಯಾಸವೇ ತಕ್ಕಸಾಧನವೆಂದು ಶ್ರುತಿಸ್ಮೃತಿಗಳೆಲ್ಲಾ ಸಾರುವವು. ಮನಸ್ಸನ್ನೂ ಇಂದ್ರಿಯಗಳನ್ನೂ ಬಿಗಿಹಿಡಿದು ವಿಷಯಗಳ ಕಡೆಗೆ ಹರಿಯಗೊಡದೆ ಸುಖದುಃಖಗಳನ್ನು ಸಹಿಸಿಕೊಂಡು ಸ್ವಸ್ಥನಾಗಿರುವವನು ಆತ್ಮನನ್ನು ಕಾಣುವನು ಎಂಬರ್ಥದಲ್ಲಿ ಶ್ರುತಿ ಇರುವುದು. (೧) ಅಭಿಮಾನವಿಲ್ಲದಿರುವುದು. (೨) ಡಂಭವಿಲ್ಲದಿರುವದು (೩) ಹಿಂಸೆಮಾಡದೇ ಇರುವುದು (೪) ಸಹನಶೀಲತೆ (೫) ಸರಳತನ (೬) ಗುರುಸೇವೆ (೭) ಶುಚಿಯಾಗಿರುವಿಕೆ

೮) ಹಿಡಿದುದನ್ನು ಬಿಡದಿರುವಿಕೆ (೯) ಮನಸ್ಸನ್ನು ಬಿಗಿಹಿಡಿಯುವಿಕೆ (೧೦) ಇಂದ್ರಿಯಗಳು ಬಯಸುವಂಥ ಶಬ್ದವೇ ಮೊದಲಾದ ವಿಷಯಗಳಲ್ಲಿ ಆಸಕ್ತಿಯಿಲ್ಲದೆ ಇರುವದು (೧೧) ನಾನೇ ಎಲ್ಲರಿಗಿಂತ ದೊಡ್ಡವನೆಂಬ ಗರ್ವವಿಲ್ಲದೇ ಇರುವುದು (೧೨) ಗರ್ಭದಲ್ಲಿದ್ದು ಹೊರಕ್ಕೆ ಬರುವುದೆಂಬ ಹುಟ್ಟುವಿಕೆಯೂ ಎಲ್ಲಾ ಮರ್ಮಸ್ಥಳಗಳನ್ನು ಕತ್ತರಿಸುವಂಥ ಸಾಯುವಿಕೆಯೂ ಬುದ್ಧಿಬಲವನ್ನೂ ತೇಜೋಬಲವನ್ನೂ ಹಾಳುಮಾಡಿ ಎಲ್ಲರ ಅನಾದರಕ್ಕೆ ಗುರಿಮಾಡುವಂಥ ಮುಪ್ಪು ಜ್ವರವೊದಲಾದ ರೋಗಗಳೂ, ನಮಗೆ ಬೇಡವಾದುದು ಗಂಟುಬಿದ್ದಾಗ ಮತ್ತು ಬೇಕಾದದ್ದು ಹೋದಾಗ ಆಗುವ ದುಃಖಗಳೂ ವಾತಪಿತ್ತ ಶ್ಲೇಷ್ಮಗಳೂ ಮತ್ತು ಮಲಮೂತ್ರಗಳೂ ಇರುವ ದೋಷಗಳು ಇವುಗಳನ್ನು ಮತ್ತೆಮತ್ತೆ ಆಲೋಚನೆಗೆ ತಂದುಕೊಳ್ಳುತ್ತಿರುವುದು (೧೩) ಮಗ ಹೆಂಡತಿ ಮನೆ ಮೊದಲಾದವುಗಳ ಮೇಲೆ ಅತಿಪ್ರೀತಿ ಇಲ್ಲದೆ ಇರುವುದು (೧೪) ಮಗ, ಹೆಂಡತಿಮೊದಲಾದವರಿಗೆ ಸುಖವಾದರೆ ತನಗೆಸುಖವಾಯಿತೆಂದೂ ಅವರಿಗೆ ದುಃಖವಾದರೆ ತನಗೆ ದುಃಖವಾಯಿತೆಂದೂ ಅವರನ್ನು ತಾನೆಂದು ಭಾವಿಸದಿರುವಿಕೆಯೂ (೧೫) ತನಗೆ ಬೇಡವಾದುದಾದರೂ ಬರಲಿ ಬೇಕಾದುದಾದರೂ ಬರಲಿ ಅವುಗಳಿಂದ ಹರ್ಷವನ್ನೂ ವಿಷಾದವನ್ನೂ ಪಡದೆ ಯಾವಾಗಲೂ ಒಂದೇರೀತಿಯಾಗಿರುವದೂ (೧೬) ಇನ್ನೊಂದು ವಿಷಯವನ್ನು ಮನಸ್ಸಿಗೆ ತಂದುಕೊಳ್ಳದೆ ಆತ್ಮಸ್ವರೂಪನಾದ ನನ್ನನ್ನು ಬಿಟ್ಟು ಅತ್ತಿತ್ತ ಹೋಗದೆ ನನ್ನಮೇಲೆ ಪ್ರೀತಿಯನ್ನು ಮಾಡುವುದು (೧೭) ಏಕಾಂತಸ್ಥಳದಲ್ಲಿರುವುದು (೧೮) ವಿಷಯಾಸಕ್ತರಾದ ಜನರಗುಂಪಿನಲ್ಲಿ ಸೇರಬೇಕೆಂದು ಬಯಸದೆ ಇರುವುದು. (೧೯) ನಿತ್ಯವಾದ ಆತ್ಮಸ್ವರೂಪದಲ್ಲಿಯೇ ಮನಸ್ಸನ್ನುಹಾಕುವುದು. (೨೦) ತತ್ತ್ವಜ್ಞಾನದ ಫಲವು ಮೋಕ್ಷವೆಂಬುದನ್ನು ಯಾವಾಗಲೂ ಆಲೋಚಿಸುತ್ತಿರುವುದು ಇವುಗಳೆಲ್ಲಾ ಜ್ಞಾನಸಾಧನಗಳೆಂಬ ಅರ್ಥವನ್ನು ಈಶ್ವರನು ಹೇಳುತ್ತಿರುವನು. ಮನೋನಾಶವೂ ಜ್ಞಾನಕ್ಕೆ ಸಾಧನವೆಂಬ ಅರ್ಥದಲ್ಲಿಯೂ ಶ್ರುತಿಸ್ಮೃತಿಗಳುಂಟು. ಹೀಗೆ ತತ್ತ್ವಜ್ಞಾನ, ಮನೋನಾಶ, ವಾಸನಾಕ್ಷಯ, ಈ ಮೂರರ ಮುಖ್ಯತ್ವವೂ ವಿದೇಹಮುಕ್ತಿ ಮತ್ತು ಜೀವನ್ಮುಕ್ತಿಗಳಮೇಲೆ ನಿಂತಿರುವುದು. ಈ ಸಾಧನಗಳನ್ನೆಲ್ಲಾ ಸಾಧಕನ ಸ್ಥಿತಿಯಲ್ಲಿ ಅಭ್ಯಾಸಮಾಡಿದ್ದಾಗಿರುವುದರಿಂದ ಜ್ಞಾನವಾದಮೇಲೆ ಇವುಗಳನ್ನು ಸುಮ್ಮನೆ ಆಗಾಗ ನೆನಪಿಗೆ ತಂದುಕೊಳ್ಳುತ್ತಿರುವುದಷ್ಟೇನೋ? ಅಥವಾ ಮತ್ತೆ ಸಂಪಾದಿಸುವ ಪ್ರಯತ್ನವನ್ನೇ ಮಾಡಬೇಕಾಗಿರುವುದೋ? ಎಂದರೆ? ಜ್ಞಾನವಾದಮೇಲೆ ತಾನಾಗಿಯೇ ಜ್ಞಾನವು ನಿಂತಿರುವಂತೆ ವಾಸನಾಕ್ಷಯ ಮನೋನಾಶಗಳೂ ತಮಗೆ ತಾವೇ ಇರುತ್ತಿದ್ದರೆ, ಅವುಗಳನ್ನೇ ಮುಖ್ಯವೆಂದು ಎಣಿಸಬೇಕಾದ ಅವಶ್ಯಕವೇ ಇರುವದಿಲ್ಲ. ಅಥವಾ ಮನೋನಾಶ ವಾಸನಾಕ್ಷಯಗಳಂತೆ, ಜ್ಞಾನವನ್ನು ಯತ್ನದಿಂದಲೇ ಸಂಪಾದಿಸಬೇಕೆಂದರೆ ಜ್ಞಾನಿಯಾದವನಿಗೆ ಜ್ಞಾನವು ಎರಡನೆಯದು ಮನೋನಾಶಾದಿಗಳೇ ಮುಖ್ಯವೆಂಬುದು ಹೊಂದುವುದಿಲ್ಲ. ಇದಕ್ಕೇನು ಸಮಾಧಾನವೆಂದರೆ? ಜ್ಞಾನವು ತಾನಾಗಿಯೇ ಇರುವುದು. ಮನೋನಾಶ ವಾಸನಾಕ್ಷಯಗಳು

ಯತ್ನದಿಂದಲೇ ವಶವಾಗುವವು. ಹೇಗೆಂದರೆ? ಜ್ಞಾನಕ್ಕೆ ಅಧಿಕಾರಿಗಳು ಎರಡುಬಗೆ. ಕೆಲವರು ಉಪಾಸನೆಮಾಡಿ ಜ್ಞಾನವನ್ನು ಪಡೆದವರು, ಕೆಲವರು ಉಪಾಸನೇಮಾಡದೇ ಜ್ಞಾನವನ್ನು ಪಡೆದವರು. ಯಾವುದನ್ನು ಕಣ್ಣಾರೆ ಕಾಣಬೇಕೋ ಅದನ್ನು ಉಪಾಸನೆ ಮಾಡಿಮಾಡಿ ಅದರ ಜ್ಞಾನವನ್ನು ಪಡೆದುಕೊಂಡವರಲ್ಲಿ ವಾಸನಾಕ್ಷಯ ಮನೋನಾಶಗಳೂ ನೆಲೆಗೊಂಡೇ ಇರುವುದರಿಂದ ಜ್ಞಾನವಾಗುತ್ತಲೇ ಅವರಿಗೆ ವಿದ್ವತ್ಸನ್ಯಾಸವೂ ಜೀವನ್ಮುಕ್ತಿಯೂ ತಾವಾಗಿಯೇ ಸಿದ್ಧವಾಗಿರುವವು. ಈ ಯೋಗ್ಯತೆಯವರಿಗೆ ಶಾಸ್ತ್ರದಲ್ಲಿ ಪ್ರಾಶಸ್ತ್ಯಹೆಚ್ಚು. ಅವರ ವಿಷಯಕ್ಕೆ ವಿವಿದಿಷಾ ಸನ್ಯಾಸವೂ ವಿದ್ವತ್ಸನ್ಯಾಸವೂ ಬೇರೆಬೇರೆ ಅಲ್ಲ. ಅವರಲ್ಲಿ ಎರಡೂ ಬೆರೆತುಕೊಂಡೇ ತೋರುವವು. ಈಗಿನವರಿಗೆ ಉಪಾಸನೆಯು ಬೆಂಬಲಕಡಮೆ. ಆಗಿನ ಪೂರ್ತ ಅಗತ್ಯವಾದಷ್ಟು ವಾಸನಾಕ್ಷಯ ಮನೋನಾಶಗಳನ್ನು ಮಾಡಿಕೊಂಡಿರುತ್ತಾರೆ. ಅವರಿಗೆ ಶ್ರವಣಮನನನಿದಿಧ್ಯಾಸಗಳು ಆಗಿರುವವು. ಅವುಗಳನ್ನು ಅವರು ಚನ್ನಾಗಿ ದೃಢಮಾಡಿಕೊಳ್ಳುವದರ ಪ್ರಭಾವದಿಂದ ಅವರಿಗೆ ಜ್ಞಾನವಾಗಿಬಿಡುತ್ತದೆ. ಒಂದು ಸಲ ಜ್ಞಾನವಾಯಿತೆಂದರೆ ಅದನ್ನು ಕಳೆಯುವಂಥಾದ್ದನ್ನೊಂದಿಲ್ಲವಾದ್ದರಿಂದ ಅದುಹೋಗುವುದಿಲ್ಲ. ಒಂದುಸಲ ಅಜ್ಞಾನಹೋಯಿತೆಂದರೆ ಅಲ್ಲಿ ತಲೆಹಾಕುವುದಕ್ಕೆ, ಅದಕ್ಕೆ ಆಗದಕಾರಣ ಮತ್ತೆ ಅದೂ ಅಲ್ಲಿಗೆಬರುವುದಿಲ್ಲ. ಆದರೆ ವಾಸನಾಕ್ಷಯ ಮನೋನಾಶಗಳು ಚೆನ್ನಾಗಿ ಬೇರು ಬಿಟ್ಟುಕೊಳ್ಳದೇ ಇದ್ದರೆ ಗಾಳಿ ಬೀಸುವಕಡೆ ಇರುವ ದೀಪದಂತೆ ಪ್ರಾರಬ್ಧದ ಸುಖದುಃಖಗಳಿಂದ ಆಗಾಗ ಆ ವಾಸನಾಕ್ಷಯ ಮನೋನಾಶಗಳು ತಲೇತಪ್ಪಿಸಿಕೊಳ್ಳುವವು. ಆದುದರಿಂದ ವಾಸನೆಯನ್ನು ಹಿಮ್ಮಟ್ಟಿಸುವುದು ಮೇರುಪರ್ವತವನ್ನು ಬುಡಮೇಲುಮಾಡುವುದಕ್ಕಿಂತ ಹೆಚ್ಚು ಕಷ್ಟವೆಂದು ವಸಿಷ್ಠರುಹೇಳಿದ್ದಾರೆ. ಅರ್ಜುನನು ಮನಸ್ಸನ್ನು ಬಿಗಿಹಿಡಿಯುವುದು ಗಾಳಿಯನ್ನು ಮೂಟೇಕಟ್ಟುವಷ್ಟು ಅಸಾಧ್ಯವೆಂದು ಕೃಷ್ಣನಿಗೆ ಹೇಳಿಕೊಂಡಿದ್ದಾನೆ. ಆದಕಾರಣ ಈಗಿನ ಕಾಲಜ್ಞಾನಿಗಳು ಜ್ಞಾನವನ್ನು ನೆನಪಿಗೆ ತಂದುಕೊಳ್ಳುವ ಮಾತ್ರವೇಸಾಕು. ವಾಸನಾಕ್ಷಯ ಮನೋನಾಶಗಳನ್ನು ಮಾತ್ರ ಪ್ರಯತ್ನದಿಂದ ಸಂಪಾದಿಸಬೇಕೆಂದಾಯಿತು.

ಯಾವುದನ್ನು ಕಳೆದುಕೊಳ್ಳಬೇಕೆಂದು ಪ್ರಯತ್ನಿಸಬೇಕಾಗಿದೆಯೋ ಆ ವಾಸನೆಯೆಂಬುದು ಯಾವುದೆಂದರೆ? ಹಿಂದೆ ಒಂದನ್ನು ಅನೇಕವೇಳೆ ಅಭ್ಯಾಸಮಾಡಿದ ಬಲದಿಂದ ಈಗ ಹಿಂದುಮುಂದಿನ ವಿಚಾರವಿಲ್ಲದೆ ಅದು ತಾನಾಗಿ ನಮ್ಮನಡವಳಿಕೆಯೊಳಗೆ ಬಂದರೆ ಅದು ವಾಸನೆ. ಯಾವನು ಯಾವುದನ್ನು ಮಿತಿಮೀರಿ ಬಳಕೆಮಾಡಿಕೊಳ್ಳುವನೋ ಅವನು ಅದೇ ಆಗಿಹೋಗಿ ಶೀಘ್ರದಲ್ಲಿಯೇ ಉಳಿದವುಗಳನ್ನೆಲ್ಲಾ ಮರೆತುಬಿಡುವನು. ಒಬ್ಬನು ಹಾಗೆ ಆದರೆ ಅವನು ವಾಸನೆಗೆ ವಶವಾಗಿರುವನೆಂದು ತಿಳಿಯಬೇಕು. ಅವನು ಅದನ್ನೇ ತನ್ನ ಸರ್ವಸ್ವವೆಂದು ಮೋಹಗೊಳ್ಳುವನು. ಆ ವಾಸನೆಯ ಆವೇಶವು ಹೆಚ್ಚುಹೆಚ್ಚಾದಷ್ಟೂ ನಿಜಸ್ವರೂಪವನ್ನು ತಳಕ್ಕೊತ್ತುವುದು. ಆಗ ಅವನು ಹುಚ್ಚನಾಗಿ ಅಮಲುಹತ್ತಿದವನಂತೆ ಒಂದನ್ನು ಇನ್ನೊಂದನ್ನಾಗಿ ನೋಡುತ್ತಿರುವನು. ತಮ್ಮ ತಮ್ಮ ಕುಲಧರ್ಮ,

ತಮ್ಮ ತಮ್ಮ ಭಾಷಾಭೇದ ಇವುಗಳಲ್ಲಿ ಜನರು ಅತಿಪ್ರೀತಿಯನ್ನಿಟ್ಟುಕೊಂಡಿರುವುದೇ ಸಾಮಾನ್ಯವಾಗಿ ಇದಕ್ಕೆ ಉದಾಹರಣೆ. ಇರಲಿ. ಮೊದಲು ಭೇದಗಳನ್ನು ಹೇಳಿ ಆಮೇಲೆ ಉದಾಹರಣೆ ಕೊಡುತ್ತೇವೆ. ವಾಸನೆಯ ವಿಷಯವು ಬೃಹದಾರಣ್ಯಕದಲ್ಲಿಯೂ ಬಂದಿದೆ. ವಾಸನೆಯು ಒಳ್ಳೇವಾಸನೆ ಕೆಟ್ಟವಾಸನೆ ಯೆಂದೆರಡುಬಗೆಯೆಂದೂ ಕೆಟ್ಟದ್ದು ಹುಟ್ಟು ಸಾವುಗಳಿಗೆ ಕಾರಣವಾಗಿಯೂ ಒಳ್ಳೇದು ಹುಟ್ಟುಸಾವುಗಳನ್ನು ಕಳೆಯುವಂಥಾದ್ದಾಗಿಯೂ ಇರುವುದೆಂದೂ, ಕೆಟ್ಟವಾಸನೆಯು ಹೆಪ್ಪುಗಟ್ಟಿಕೊಂಡು ಅಜ್ಞಾನವಾಗಿ ಚನ್ನಾಗಿ ಬಲಿತು ಅಹಂಕಾರದಿಂದ ಕೂಡಿರುವುದೆಂದೂ, ಒಳ್ಳೇವಾಸನೆಯು ಹುರಿದ ಬೀಜದಂತೆ ದೇಹಧಾರಣಕ್ಕೆ ಮಾತ್ರ ಸಾಧಕವಾಗಿರುವುದೆಂದೂ ವಾಲ್ಮೀಕಿಗಳು ಹೇಳಿರುತ್ತಾರೆ? ದೇಹವೇ ಮೊದಲಾದವುಗಳನ್ನೂ, ಅವುಗಳಲ್ಲಿರುವ ಚೈತನ್ಯವನ್ನೂ ಒಂದೇ ಆಗಿ ತಿಳಿಯುವುದೇ ಅಜ್ಞಾನ. ಹಾಲಿಗೆ ಮಜ್ಜಿಗೆಯನ್ನು ಕೂಡಿಸಿದರೆ ಹೆತ್ತುಕೊಳ್ಳುವಂತೆ ಅಥವ ಕರಗಿದ ತುಪ್ಪವನ್ನು ಹೆಚ್ಚುಶೀತಲವಾದ ಕಡೆಯಲ್ಲಿಟ್ಟರೆ ಚನ್ನಾಗಿ ಹೆತ್ತುಕೊಳ್ಳುವಂತೆ ಆ ಅಜ್ಞಾನವು ಕೆಟ್ಟವಾಸನೆಯವರಲ್ಲಿ ಚನ್ನಾಗಿ ಹೆತ್ತುಕೊಂಡಿರುವುದು. ಈ ಕೆಟ್ಟವಾಸನೆಯ ವಿಷಯವು ಭಗವದ್ಗೀತೆಯ ಹದಿನಾರನೇ ಅಧ್ಯಾಯದಲ್ಲಿ ಆಸುರೀ ಸಂಪತ್ತೆಂಬ ಹೆಸರಿನಿಂದ ಹೇಳಿದೆ ಅವರಿಗೆ ಯಾವುದನ್ನು ಮಾಡಬೇಕು ಯಾವುದನ್ನು ಬಿಡಬೇಕೆಂಬುದು ತಿಳಿಯುವುದಿಲ್ಲ. ಒಳಗೂ ಹೊರಗೂ ಎಲ್ಲಿಯೂ ಶುಚಿಎಂಬುದಿಲ್ಲ. ಅದಕ್ಕೆ ಸಾಧನವಾದ ಸ್ನಾನಸಂಧ್ಯಾವಂದನ ಮೊದಲಾದ ಆಚಾರಗಳು ಅವರಲ್ಲಿಲ್ಲ. ಆ ಆಚಾರಗಳಿಗೆಲ್ಲ ಮೂಲಪ್ರಮಾಣವಾದ ಶ್ರುತಿಸ್ಮೃತಿ ಪುರಾಣೇತಿಹಾಸಗಳು ಸತ್ಯವೆಂಬುದನ್ನೂ ಅವರು ತಿಳಿಯುವುದಿಲ್ಲ. ಜಗತ್ತಿನಲ್ಲಿ ಸತ್ಯವೆಂಬುದು ಯಾವುದೂ ಇಲ್ಲವೆಂದೂ, ಧರ್ಮಾಧರ್ಮಗಳ ವ್ಯವಸ್ಥೆ ಏನೂ ಇಲ್ಲವೆಂದೂ, ಜಗತ್ತಿನ ಸೃಷ್ಟಿಗೆ ಸ್ತ್ರೀಪುರುಷರ ಸೇರುವಿಕೆಯ ಹೊರತು ಬೇರೇಕಾರಣವಿಲ್ಲವೆಂದೂ ಈಶ್ವರನೆಂಬುವ ನಿಲ್ಲವೆಂದೂ ಅವರು ಹೇಳುವರು. ಅವರು ಹೀಗೆ ಯೋಚನೆ ಮಾಡಿಯೇ ತಾವೂ ಕೆಟ್ಟು ಕ್ಷುದ್ರಬುದ್ಧಿಗಳಾಗಿ ಲೋಕವನ್ನೆಲ್ಲಾ ಹಾಳುಮಾಡುವಂಥ ಕೇಡಿಗರಾಗಿ ಕ್ರೂರವಾದ ಕರ್ಮಗಳನ್ನು ಮಾಡುವರು. ಎಂದಿಗೂ ಸಾಕೆನ್ನಿಸದಂಥ ಆಸೆಯನ್ನಿಟ್ಟುಕೊಂಡು ಅವಿವೇಕದಿಂದ ಕೆಟ್ಟ ಹಠಗಳನ್ನು ಹಿಡಿದು ದಂಭದಿಂದಲೂ ಮಾನದಿಂದಲೂ ಮದದಿಂದಲೂ ಕೂಡಿ ಪಾಪಕರ್ಮಿಗಳಾಗಿ ನಡೆಯುವರು. ಅವರಿಗೆ ಸಾಯುವವರಿಗಿನ ಯೋಚನೆಯೇ ಯೋಚನೆ, ಅದಕ್ಕೂ ಪಾರವಿಲ್ಲ. ವಿಷಯಗಳನ್ನು ಅನುಭವಿಸುವದಕ್ಕಿಂತ ಹೆಚ್ಚಿನದೇನೂ ಇಲ್ಲವೆಂದೂ ಇಷ್ಟೇಸರಿಯೆಂದೂ ಅವರು ಗೊತ್ತುಮಾಡಿಕೊಂಡಿರುವರು. ಅವರು ತಮಗೆಮಾತ್ರ ಒಳ್ಳೆಯದಾಗಬೇಕೆಂಬ ಮತ್ತು ಇತರರಿಗಾದರೆ ಕೆಟ್ಟದಾಗಬೇಕೆಂಬ ಕಾಮಕ್ರೋಧಗಳಿಗೆ ಮನಸ್ಸನ್ನುಸೋತು ನೂರಾರು ಆಶೆಗಳೆಂಬ ಹಗ್ಗಗಳಿಂದ ಕಟ್ಟುಹಾಕಿಕೊಂಡು ಬಯಕೆಗಳನ್ನು ತೀರಿಸಿಕೊಳ್ಳುವುದಕ್ಕಾಗಿ ಮೋಸಮೊದಲಾದವುಗಳಿಂದ ಹಣವನ್ನು ಗುಡ್ಡೆಹಾಕಬೇಕೆಂದು ಅಪೇಕ್ಷಿಸುವರು. ಅವರ

ಅಹಂಕಾರದ ವಿಷಯವೂ ಗೀತೆಯಲ್ಲಿ ಅಲ್ಲಿಯೇ ಬಂದಿರುವುದು. ಇವತ್ತು ಇದು ನನಗೆ ಸಿಕ್ಕಿತು ನಾಳೆ ನಾಡಿದ್ದರಲ್ಲಿ ಇಂತಿಂಥ ಬಯಕೆಗಳನ್ನು ತೀರಿಸಿಕೊಳ್ಳುತ್ತೇನೆ ಇದು ಹಿಂದೆಯೇ ಸಂಪಾದಿಸಿದ್ದು. ಇಂಥಾವಸ್ತು ಇನ್ನು ನನಗೆ ಹೆಚ್ಚುತ್ತದೆ. ಈ ಹಗೆಯನ್ನು ನಾನು ಕೊಂದೆನು. ಇತರ ಶತ್ರುಗಳನ್ನು ನಾನು ಕೊಂದುಬಿಡುವೆನು. ಅವರ ಹೊಲ ಮನೆಗಳನ್ನೆಲ್ಲಾ ಸೂರೆಮಾಡಿಕೊಂಡು ಬಿಡುವೆನು. ನಾನು ಎಲ್ಲರಿಗೂ ಒಡೆಯನು. ನಾನೇ ಎಲ್ಲಾ ಭೋಗಸಾಧನಗಳನ್ನೂ ಉಳ್ಳವನು. ನನಗೆ ಹೆಂಡತಿಮಕ್ಕಳು ಮುಂತಾದ ಎಲ್ಲಾ ಸಹಾಯ ಸಂಪತ್ತು ಇದೆ. ನಾನೊಳ್ಳೇಬಲಿಷ್ಠನು, ನನಗೆ ರೋಗವಿಲ್ಲ. ನಾನು ಹಣಗಾರನು. ನಾನು ಕುಲೀನನು. ನನಗೆ ಸಮಾನರು ಯಾರಿದ್ದರೆ? ಯಾಗವನ್ನುಮಾಡಿ ದೊಡ್ಡವನೆನ್ನಿಸಿಕೊಳ್ಳುತ್ತೇನೆ. ಹೊಗಳುವವರಿಗೂ ನಟವಿಟರಿಗೂ ಹಣಕಾಸುಗಳನ್ನು ಕೊಡುತ್ತೇನೆ. ಅವರಿಂದ ಸಂತೋಷವನ್ನು ಪಡೆಯುತ್ತೇನೆ ಹೀಗೆಂದು ಬಗೆಬಗೆಯಾದ ಯೋಚನೆಗಳನ್ನು ತಂದುಕೊಂಡು ದಿಕ್ಕುತೋಚದೆ ಅವಿವೇಕವೆಂಬ ಬಲೆಗೆ ಸಿಕ್ಕುಬಿದ್ದು ಇಂದ್ರಿಯಗಳ ಬಯಕೆಗಳನ್ನು ತೀರಿಸಿಕೊಳ್ಳುವುದರಲ್ಲಿ ಆಸಕ್ತರಾಗಿ ಹೊಲಸಾದ ನರಕದಲ್ಲಿ ಬೀಳುವರು. ಅವರ ಅಭಿಪ್ರಾಯವು ಹೀಗೆ ಇರುವುದರಿಂದಲೇ ಅವರು ಮತ್ತೆ ಹುಟ್ಟುಸಾವುಗಳನ್ನು ಪಡೆಯಬೇಕಾಗಿರುವುದು. ಯಾಗವನ್ನೂ ದಾನವನ್ನೂ ಮಾಡುತ್ತೇನೆಂದು ಹೇಳುತ್ತ ವೇದೋಕ್ತಕರ್ಮಗಳನ್ನು ನಡೆಸುವವರಿಗೆ ನರಕವಾಗುವುದೇಕೆಂದರೆ? ಅವರು ತಮ್ಮನ್ನು ತಾವೇ ದೊಡ್ಡವರೆಂದು ತಿಳಿದುಕೊಂಡು ವಿನಯವಿಲ್ಲದೆ ತಾವು ಹಣಗಾರರೆಂದೂ ತಾವು ಸತ್ಕಾರಕ್ಕೆ ಯೋಗ್ಯರೆಂದೂ ಗುರುಹಿರಿಯರೆಷ್ಟರವರೆಂದೂ ಭಾವಿಸುತ್ತ, ವಿಧಿಯನ್ನು ಅನುಸರಿಸದೆ ದಂಭದಿಂದ ದೀಕ್ಷಿತನೆಂದೂ ಸೋಮಯಾಜಿಯೆಂದೂ ಹೆಸರು ಬರುವಮಾತ್ರಕ್ಕೇ ಯಜ್ಞವನ್ನು ಮಾಡುವರು. ಆದುದರಿಂದ ಅವರಿಗೆ ಯಜ್ಞದ ಫಲವು ಸಿಕ್ಕುವುದಿಲ್ಲ. ಹೀಗೆ ಯಾಗದಾನಗಳೇ ಸಿದ್ಧಿಸುವುದಿಲ್ಲವೆಂದಮೇಲೆ ವಿವೇಕವೈರಾಗ್ಯಗಳ ಮಾತೆಲ್ಲಿಯದು? ತಾವೇ ಎಲ್ಲರಿಗಿಂತದೊಡ್ಡವರೆಂದೂ, ಎಲ್ಲರಿಗಿಂತಲೂ ಬಲಿಷ್ಠರೆಂದೂ, ಇತರರನ್ನು ಕಡೆಗಣ್ಣಿಂದ ನೋಡುತ್ತ ಪರಸ್ತ್ರೀ ಮೊದಲಾದವರನ್ನು ಬಯಸುತ್ತ ಅವರು ಅನುಕೂಲರಾಗದೇ ಹೋದರೆ ಸಿಟ್ಟಿಗೇಳುತ್ತ ಎಲ್ಲಾ ಕಾರ್ಯಗಳನ್ನು ನಾವುಮಾಡುತ್ತೇವೇ ಹೊರತು ನಮ್ಮಿಂದ ಮಾಡಿಸುವವನೆಂಬ ಇನ್ನಾರೂ ನಮ್ಮೊಳಗೆ ಇಲ್ಲವೆಂದು ತಮ್ಮೊಳಗೆ ಇರುವ ಆತ್ಮನನ್ನು ಧಿಕ್ಕರಿಸುತ್ತ, ಶ್ರೀರಾಮ ಕೃಷ್ಣ ಮೊದಲಾದವರು, ಮನುಷ್ಯರಲ್ಲವೆಂದು ನಂಬುವಂತೆ ಎಷ್ಟೋ ಮಹಿಮೆಗಳನ್ನು ತೋರಿಸಿದ್ದರೂ ಅವುಗಳನ್ನು ಲೆಖ್ಖಕ್ಕೆ ತರದೆ ಮನುಷ್ಯಬುದ್ಧಿಯಿಂದ ಅವರಮೇಲೆ ದೋಷಗಳನ್ನು ಹೊರಿಸಿ ಅವರ ದೇವತ್ವವನ್ನು ದೂಷಿಸುತ್ತ ಯಾರಾದರೂ ತಿಳಿವಳಿಕೆಯ ಮಾತನ್ನು ಹೇಳಿದರೆ ಅದು ಮೂರ್ಖತನದ ಮಾತೆಂದು ಭಾವಿಸುತ್ತ ಇರುವರು. ಹೀಗೆ ಭಗವಂತನಮೇಲೆ ಹಗೆತನವನ್ನು ಮಾಡುತ್ತ ಯಾವಾಗಲೂ ಪಾಪವನ್ನು ಮಾಡುವಂಥ ಕೆಟ್ಟಜನರಿಗೆ ಯಾವಾಗಲೂ ಸಂಸಾರದಲ್ಲಿ ಅಮಂಗಲವಾದ ಮತ್ತು ಅತಿಕ್ರೂರವಾದ

ಹುಟ್ಟುಸಾವುಗಳನ್ನು ಪಡೆಯುವುದೇ ಗತಿ. ಹೀಗಾಗಿ ಅವರು ಎಂದಿಗೂ ನನ್ನನ್ನು ಪಡೆಯದೆ ಇನ್ನೂ ಹೆಚ್ಚು ಹೆಚ್ಚು ಕೆಟ್ಟಗತಿಯನ್ನೇ ಪಡೆಯುತ್ತಾ ಹೋಗುವರು.

ಏನನ್ನು ತಿಳಿದಿರಬೇಕೋ ಅದನ್ನು ತಿಳಿದಿರುವುದು ಶುದ್ಧವಾಸನೆ. ತಿಳಿಯಬೇಕಾದುದರ ಸ್ವರೂಪವು ಭಗವದ್ಗೀತೆಯ ಹದಿಮೂರನೆ ಅಧ್ಯಾಯದಲ್ಲಿ ಹೇಳಿದೆ—ತಿಳಿಯಬೇಕಾದುದೆಂಬುದು ಪರಬ್ರಹ್ಮವಸ್ತು. ಅದಕ್ಕೆ ಮೊದಲೂ ಇಲ್ಲ ಕೊನೆಯೂ ಇಲ್ಲ. ಅದನ್ನು ಇರುವುದೆಂದೂ ಅಥವ ಇಲ್ಲದ್ದೆಂದೂ ಹೇಳುವುದಕ್ಕೇ ಬರುವುದಿಲ್ಲ. ಎಲ್ಲರ ಕೈಗಳೂ ಕಾಲುಗಳೂ ಅವರ ಸಾನ್ನಿಧ್ಯದಿಂದಲೇ ಆಡುವವಾದುದರಿಂದ ಎಲ್ಲೆಲ್ಲಿಯೂ ಅದರ ಕೈಗಳೇ ಅದರ ಕಾಲುಗಳೇ ಅದರ ಕಣ್ಣುಗಳೇ ಅದರ ತಲೆಗಳೇ ಅದರ ಮುಖವೇ ಅದರ ಕಿವಿಗಳೇ. ಹೀಗೆ ಇದು ಸರ್ವಪ್ರಾಣಿಗಳಲ್ಲಿಯೂ ಚೈತನ್ಯರೂಪದಿಂದ ವ್ಯಾಪಿಸಿಕೊಂಡಿರುವುದು. ಸಮಸ್ತ ಇಂದ್ರಿಯಗಳ ಗುಣಗಳಾದ ಶ್ರವಣ ವಚನ ಮೊದಲಾದ ವ್ಯಾಪಾರಗಳಲ್ಲಿ ಅದು ತೋರಿಕೆಯಮಾತ್ರಕ್ಕೆ ಇರುವುದು ಹೊರತಾಗಿ, ನಿಜವಾಗಿ ನೋಡಿದರೆ ಅದಕ್ಕೆ ಯಾವ ಇಂದ್ರಿಯುಗಳೂ ಇಲ್ಲ. ಅದಕ್ಕೆ ಯಾವುದರ ಸಂಬಂಧವೂ ಎಷ್ಟುಮಾತ್ರವೂ ಇಲ್ಲ. ಆದರೂ ಅದು ಸರ್ವವಸ್ತುಗಳಿಗೂ ಆಧಾರಭೂತವಾಗಿರುವುದು. ಪರಮಾರ್ಥ ದೃಷ್ಟಿಯಿಂದ ಅದು ನಿರ್ಗುಣವು. ಆದರೂ ವ್ಯವಹಾರದೃಷ್ಟಿಯಿಂದ ಸತ್ವಮೊದಲಾದ ಗುಣಗಳನ್ನು ಪಾಲಿಸುವುದು. ಸ್ಥಾವರವಾದ ಮತ್ತು ಜಂಗಮವಾದ ವಸ್ತುಗಳ ಹೊರಗೂ ಒಳಗೂ ಅದು ಸೂಕ್ಷ್ಮವಾಗಿರುವದರಿಂದ ಅದನ್ನು ತಿಳಿಯುವುದು ಕಷ್ಟ. ಅದು ದೂರದಲ್ಲಿರುವುದೆಂದರೂ ಒಪ್ಪುವುದು. ಹತ್ತಿರದಲ್ಲಿರುವುದೆಂದರೂ ಒಪ್ಪುವುದು. ಅದು ಬೇರೆ ಬೇರೆಯಾಗಿರುವಂಥಾದ್ದಲ್ಲದಿದ್ದರೂ, ಪ್ರಾಣಿಗಳಲ್ಲಿ ಬೇರೆ ಬೇರೆಯಾಗಿರುವಹಾಗೆ ಇರುವುದು. ಮತ್ತು ಚರಾಚರ ಪ್ರಪಂಚವನ್ನೆಲ್ಲಾ ರಕ್ಷಿಸುವಂಥಾದ್ದಾಗಿಯೂ, ನುಂಗುವಂಥಾದ್ದಾಗಿಯೂ, ಹೊರಗೆಡುವುವಂಥಾದ್ದಾಗಿಯೂ ಇರುವುದು. ಬೆಳಗುವ ಪದಾರ್ಥಗಳಿಗೆಲ್ಲಾ ಅದೇ ಬೆಳಕನ್ನು ಕೊಡುವುದು. ಅದು ಅಜ್ಞಾನವನ್ನು ದಾಟಿ ಆಚೆ ಇರುವುದು.

ವಿಚಾರವಿಲ್ಲದೆ ತಾನಾಗಿಬರುವ ನಡವಳಿಕೆಯೇ ವಾಸನೆಯಾದರೆ ತಿಳಿಯಬೇಕಾದ ಪರಮಾತ್ಮಸ್ವರೂಪಸಂಬಂಧವಾದ ಶುದ್ಧವಾಸನೆಯು ವಿಚಾರದಿಂದ ಬರತಕ್ಕದ್ದಾದಕಾರಣ ಅದುವಾಸನೆಯೇ ಆಗಲಾರದಲ್ಲ. ಎಂದರೆ ವಾಸನೆಯಲ್ಲಿ ವಿಚಾರವಿಲ್ಲದಿದ್ದರೂ ಹಿಂದಿನ ಅಭ್ಯಾಸದ ಬಲವಿರುತ್ತದೆ. ಹಿಂದೆ ಎಷ್ಟೋಸಲ ಹುಟ್ಟಿದಾಗಲೆಲ್ಲ ನಾನು ನನ್ನದೆಂದು ಹೊಡೆದಾಡಿದ ಬಲದಿಂದ ಈ ಜನ್ಮದಲ್ಲಿ ಇನ್ನೊಬ್ಬರು ಯಾರೂ ನಮಗೆ ಹೇಳಿಕೊಡದೆ ಇದ್ದರೂ ನಮ್ಮಲ್ಲಿ ನಾವು ನಮ್ಮದೆಂಬ ಅಭಿಮಾನ ಬಯಕೆ ಸಿಟ್ಟು ಮೊದಲಾದ ಮಲಿನವಾಸನೆಗಳು ತಾವಾಗಿ ಹುಟ್ಟುವಂತೆ ನಮಗೆ ಮೊದಲನೇ ತಿಳಿವಳಿಕೆ ವಿಚಾರದಿಂದ ಹುಟ್ಟಿದ್ದರೂ, ಎಷ್ಟೋ ಕಾಲ ಎಡೆಬಿಡದೆ ಆ ತತ್ವವನ್ನು ಅನುಸಂಧಾನ ಮಾಡಿ ಕೊನೆಕೊನೆಗೆ ಅದು ಯಾವುದೊಂದು ವಾಕ್ಯವನ್ನೂ ಯುಕ್ತಿಯನ್ನೂ ವಿಚಾರಕ್ಕೆ

ತೆಗೆದುಕೊಳ್ಳದೇನೇ ಕಣ್ಣುಮುಂದಿನ ಮಡಿಕೆ ಕುಡಿಕೆಗಳ ಹಾಗೆ ತತ್ವವೂ ಒಮ್ಮೆಗೇ ಮನಸ್ಸಿಗೆ ಹೊಳೆಯುವುದು. ಈವಿಧವಾದ ತಿಳಿವಳಿಕೆಯನ್ನು ಹಿಂಬಾಲಿಸಿ ಇಂದ್ರಿಯಗಳು ನಡೆಯುವುದೇ ಶುದ್ಧವಾಸನೆ. ಅದು ದೇಹಧಾರಣಮಾಡಿಕೊಂಡಿರುವುದಕ್ಕೆ ಮಾತ್ರ ಉಪಯೋಗವಾಗುತ್ತದೆಯೇ ಹೊರತು ದಂಭ ದರ್ಪ ಮೊದಲಾದ ಅಸುರಸಂಪತ್ತನ್ನು ಹುಟ್ಟಿಸುವುದಕ್ಕಾಗಲಿ ಅಥವ ಇನ್ನೊಂದು ಜನ್ಮವನ್ನು ಕೊಡುವಂಥ ಧರ್ಮವನ್ನೂ ಅಧರ್ಮವನ್ನೂ ಹುಟ್ಟಿಸುವುದಕ್ಕಾಗಲಿ, ಸಾಧನವಾಗುವುದಿಲ್ಲ. ಹುರಿದ ಧಾನ್ಯಗಳು ಹಸಿವನ್ನು ಅಡಗಿಸುವುದೆಷ್ಟೋ ಅಷ್ಟೇ ಹೊರತು ನಾಲಿಗೆಗೆ ಸವಿಯನ್ನು ಕೊಡತಕ್ಕವುಗಳಾಗಿಯಾಗಲಿ, ಮುಂದೆ ಹುಟ್ಟತಕ್ಕವುಗಳಾಗಿಯಾಗಲಿ ಆಗಿರದೆ ಇರುವಂತೆ ಶುದ್ಧವಾಸನೆಯು ಬರೀ ದೇಹಧಾರಣಮಾತ್ರಕ್ಕೆ ಇರುವುದು. ಮಲಿನವಾಸನೆಯು ಮೂರುಬಗೆ. ಲೋಕವಾಸನೆ ಶಾಸ್ತ್ರವಾಸನೆ ದೇಹವಾಸನೆ. ಎಲ್ಲರೂ ಎಂದೆಂದೂ ದೂಷಿಸುವಂತೆ ಅಥವ ಭೂಷಿಸುವಂತೆ ನಡೆಯಬೇಕೆಂದು ಹೋಗುವುದು, ಲೋಕವಾಸನೆ. ಆ ಉದ್ದೇಶವು ನೆರವೇರುವುದು ಕಠಿನವಾದುದರಿಂದ ಅದು ಕೆಟ್ಟದ್ದು? ಈ ಲೋಕದಲ್ಲಿ ಗುಣವಂತನೂ ಶೌರ್ಯವಂತನೂ ಆದವನು ಯಾರೆಂದು ವಾಲ್ಮೀಕಿಯು ಬಹುಬಗೆಯಿಂದ ಬೆಸಗೊಳಲು. ನಾರದರು ಇಕ್ಷ್ವಾಕು ವಂಶದಲ್ಲಿ ಶ್ರೀರಾಮನೊಬ್ಬನಿರುವನೆಂದು ಮುಂತಾಗಿ ಅವನನ್ನು ಸರ್ವೋತ್ಕೃಷ್ಟವಾದ ಉದಾಹರಣೆಯಾಗಿ ಹೇಳಿರುವರು. ಅಂಥಾ ರಾಮನಿಗೂ ಪತಿವ್ರತಾ ಶಿರೋಮಣಿಯೂ ಜಗನ್ಮಾತೆಯೂ ಆದ ಸೀತೆಗೂ ಕೂಡ ಕೇಳಬಾರದಂಥ ನಿಂದೆ ಸಂಘಟಿಸಿತು. ಇತರರ ಪಾಡೇನು. ಹಾಗೆಯೇ ದೇಶಭೇದದಿಂದ ಒಬ್ಬರನ್ನೊಬ್ಬರು ನಿಂದಿಸುವ ವಾಡಿಕೆಯುಂಟು, ಉತ್ತರದೇಶದ ಬ್ರಾಹ್ಮಣರು ಮಾಂಸವನ್ನು ತಿನ್ನುವರೆಂದು ದಕ್ಷಿಣ ದೇಶದ ಬ್ರಾಹ್ಮಣರು ಜರಿಯುವರು. ದಕ್ಷಿಣದೇಶದವರು ಸೋದರಮಾವನ ಮಗಳನ್ನು ಮದುವೆಯಾಗುವರೆಂದು ಉತ್ತರದೇಶದವರು ಹೀಯ್ಯಾಳಿಸುವರು. ಬಹ್ವೃಚರು ಕಣ್ವಶಾಖೆಯವರಿಗಿಂತ ತಾವು ಮೇಲೆನ್ನುವರು. ವಾಜಸನೇಯಿಗಳು ಆಶ್ವಲಾಯನರಿಗಿಂತ ಕಣ್ವರು ಹೆಚ್ಚಿನವರೆನ್ನುವರು. ಹೀಗೆ ಹೀಗೆ ತಮ್ಮ ತಮ್ಮ ಕುಲಗೋತ್ರ ಬಂಧುವರ್ಗ ಇಷ್ಟದೇವತೆ ಮೊದಲಾದವುಗಳೆಲ್ಲ ಹೆಚ್ಚಿನವೆಂದೂ ಇತರರವೆಲ್ಲಾ ಇವುಗಳಿಗಿಂತ ಕೀಳಿನವುಗಳೆಂದೂ ಪಕ್ಷಪಾತವನ್ನು ತೋರಿಸುವುದು ದನಕಾಯುವವರನ್ನು ಮೊದಲುಮಾಡಿಕೊಂಡು ಮಹಾಮಹೋಪಾಧ್ಯಾಯರವರಿಗೂ ತಪ್ಪಿಲ್ಲ. ಜನವನ್ನು ಮೆಚ್ಚಿಸುವುದಕ್ಕೆ ಸ್ವರ್ಗಸ ನಿಂದಲೂ ಆಗದು. ಎಲ್ಲರನ್ನೂ ಮೆಚ್ಚಿಸುವ ಉಪಾಯವೆಂಬುದು ಸೃಷ್ಟಿಯಾಗಿಯೇ ಇಲ್ಲ ಅವರವರ ಬಾಯಿಗೆ ಬಂದಂತೆ ಆಡಿಕೊಳ್ಳುವ ಜನರ ಮಾತಿನಿಂದೇನು? ಎಲ್ಲಾ ಬಗೆಯಿಂದಲೂ ತನ್ನ ಹಿತವನ್ನು ತಾನು ನೋಡಿಕೊಳ್ಳಬೇಕು. ಆದಕಾರಣ ಲೋಕವಾಸನೆಯು ಕೆಟ್ಟದ್ದೆಂದು ಯೋಚಿಸಿ ಯೋಗಿಗಳಾಗುವವರು ದೂಷಣೆಗಳನ್ನೂ ಭೂಷಣೆಗಳನ್ನೂ ಸಮವಾಗಿ ಭಾವಿಸಬೇಕೆಂದು ಮೋಕ್ಷಶಾಸ್ತ್ರದಲ್ಲಿ ಹೇಳಿದೆ. ಶಾಸ್ತ್ರವಾಸನೆಯೆಂಬುದೂ ಪಾಠವ್ಯಸನ, ಶಾಸ್ತ್ರವ್ಯಸನ, ಅನುಷ್ಠಾನವ್ಯಸನ ಎಂದು ಮೂರುಬಗೆ.

ಾತಮಾಡುವ ವ್ಯಸನವು ಭಾರದ್ವಾಜರಲ್ಲಿ ಕಂಡುಬಂದಿದೆ. ಭಾರದ್ವಾಜರು ಮೂರು ನ್ಮಗಳಲ್ಲೆಲ್ಲಾ ಎಡೆಬಿಡದೆ ಎಷ್ಟೋ ವೇದಗಳನ್ನು ಓದಿ, ನಾಲ್ಕನೇ ಜನ್ಮದಲ್ಲಿ ಂದ್ರನಮಾತಿಗೆ ಮರುಳಾಗಿ ಉಳಿದವೇದವನ್ನೂ ಓದಿ ಮುಗಿಸಿಬಿಡಬೇಕೆಂದು ಯತ್ನ-ಾಡಿದರು. ಆ ಓದಿ ಮುಗಿಸುವುದೆನ್ನುವುದೂ ಕೂಡ ಕೊನೆಮುಟ್ಟದಮಾತಾದುದರಿಂದ ವಾಸನೆಯೂ ಕೆಟ್ಟದ್ದೇ? ಕೊನೆಗೆ ಇಂದ್ರನಿಗೆ ಅವರಮೇಲೆ ಮರುಕ-ಹುಟ್ಟಿ ಆಬ-ಯು ಆಸಕ್ತಿಯು ಸರಿಯಲ್ಲವೆಂದು ಅವರಿಗೆ ತಿಳಿಯಹೇಳಿ ವೇದಾಧ್ಯಯನಕ್ಕಿಂತ ಟ್ಟನ ಪುರುಷಾರ್ಥವಾದ ಸಗುಣಬ್ರಹ್ಮವಿದ್ಯೆಯನ್ನು ಉಪದೇಶಮಾಡಿದನು. ಅದ-ಂತೆಯೇ ಸುಮ್ಮನೆ ಶಾಸ್ತ್ರದಮೇಲೆ ಶಾಸ್ತ್ರವನ್ನು ಓದುವ ಚಪಲವು ಮುಖ್ಯವಾದ ರುಷಾರ್ಥವನ್ನು ಕೊಡುವದಿಲ್ಲವಾದುದರಿಂದ ಅದು ಕೆಟ್ಟದ್ದು!

ದೂರ್ವಾಸನೆಂಬ ಋಷಿಯು ಬಗೆಬಗೆಯಾದ ಶಾಸ್ತ್ರಗ್ರಂಥಗಳ ಹೊರೆಯನ್ನೆಲ್ಲಾ ೊತ್ತುಕೊಂಡೇ ಮಹಾದೇವನ ದರ್ಶನಕ್ಕೆಂದು ಸಭೆಗೆ ಬರಲು ( ನಾರದರು ) ಮೂ-ಯನ್ನು ಹೊತ್ತ ಕತ್ತೆಯು ಬಂತೆಂದು ಹಾಸ್ಯಮಾಡಿದರೆಂದೂ ಆಮೇಲೆ ದೂರ್ವಾಸನು ಟ್ಟಿನಿಂದ ಆ ಪುಸ್ತಕಗಳನ್ನೆಲ್ಲಾ ಸಮುದ್ರಕ್ಕೆ ಒಗೆದು ಮಹಾದೇವನಿಂದ ಆತ್ಮವಿದ್ಯೆಯ ಉಪದೇಶವನ್ನು ಪಡೆದನೆಂದು ಶಿವಷೇಯ ಗೀತೆಯಲ್ಲಿ ಹೇಳಿದೆ. ಯಾವನು ಅಂತರ್ಮು-ನಾಗಿರುವುದಿಲ್ಲವೋ ಎಂದರೆ ಹೊರಗಡೆಗೆ ಹರಿದಾಡುವ ಇಂದ್ರಿಯಗಳನ್ನೂ ಮನ-ಸ್ಸನ್ನೂ ಹಿಮ್ಮುಖವಾಗಿ ಮಾಡಿಕೊಂಡಿರುವುದಿಲ್ಲವೋ? ಯಾವನಿಗೆ ಗುರುವಿನ ಕರುಣ ರುವುದಿಲ್ಲವೋ? ಅವನಿಗೆ ಬರೀವೇದಶಾಸ್ತ್ರಗಳಿಂದ ಆತ್ಮವಿದ್ಯೆ ಗೊತ್ತಾಗುವುದಿಲ್ಲ. ಳಗೆ ಇರುವ ಜ್ಯೋತಿಸ್ಸ್ವರೂಪವನ್ನು ಕಾಣುವ ಪ್ರಯತ್ನವೇ ಬೇರೆ? ನಾಲ್ಕು ವೇದ-ಳನ್ನೂ ಸಮಸ್ತ ಶಾಸ್ತ್ರಗಳನ್ನೂ ಮುಗುಚಿಹಾಕಿದರೂ ಸೌಟು ಅಡಿಗೆಯ ರಸವನ್ನು ರಿಯದೆ ಇರುವಂತೆ ಅವನಿಗೆ ಬ್ರಹ್ಮತತ್ವದ ಸವಿ ಹತ್ತುವುದಿಲ್ಲ.

ನಾರದರೂ ಕೂಡ ಅರುವತ್ತುನಾಲ್ಕು ವಿದ್ಯೆಯಲ್ಲಿಯೂ ನಿಪುಣರಾಗಿದ್ದರು. ಆತ್ಮ-ಜ್ಞಾನವಿಲ್ಲದೆ ಅನುತಾಪವನ್ನು ಹೊಂದಿ ಸನತ್ಕುಮಾರರಿಗೆ ಶರಣು ಹೋದರೆಂದು ಛಾಂದೋಗ್ಯಶ್ರುತಿ ಇದೆ. ನಿದಾಘನೆಂಬುವನಲ್ಲಿ ಅನುಷ್ಠಾನವ್ಯಸನವಿತ್ತೆಂದು ವಿಷ್ಣು-ಪುರಾಣದಿಂದ ತಿಳಿಯುತ್ತದೆ. ಋಭುವು ಬಗೆಬಗೆಯಿಂದ ತಿಳಿಯಹೇಳಿದರೂ ಕರ್ಮಶ್ರದ್ಧಾ ಜಾಡ್ಯವನ್ನು ಎಷ್ಟೋಕಾಲ ಬಿಡಲೇ ಇಲ್ಲ. ನಿದಾಘನಿಗೆ ಕರ್ಮಶ್ರದ್ಧೆ ಮಿತಿಮೀರಿತ್ತು. ಅನುಷ್ಠಾನಕ್ಕೆ ಕುಳಿತುಕೊಳ್ಳುವುದಕ್ಕೆ ಶುದ್ಧವಾದ ಸ್ಥಳವು ಬೇಕೆಂದು ಭೂಮಿಯನ್ನೆ-ಲ್ಲಾ ಹುಡುಕಿದರೂ ಎಲ್ಲೆಲ್ಲಿಯೂ ಸ್ಥಳ ಸಿಕ್ಕಲಿಲ್ಲ. ಈ ಬಗೆಯ ಕರ್ಮವಾಸನೆ ಮತ್ತೆ ಹುಟ್ಟುಸಾವುಗಳನ್ನು ಕೊಡುವುದರಿಂದ ಕೆಟ್ಟದ್ದು. ಬಿಡಕ್ಕೆ ಬಿಡವೇ ತಪ್ಪಾಡುತ್ತಿ-ರುವಂಥ ಈ ಕರ್ಮವೇ ಪರಮಪುರುಷಾರ್ಥವೆಂದು ಆನಂದ ಪಡುವ ಮೂಢರು ಮತ್ತೆ ಮತ್ತೆ ಮುಪ್ಪನ್ನೂ ಮರಣವನ್ನೂ ಹೊಂದುತ್ತಿರುವರು. ಅಜ್ಞಾನದಲ್ಲಿ ತೊಳಲುತ್ತ ನಾವೇ ಬುದ್ಧಿಶಾಲಿಗಳೆಂದೂ ಪಂಡಿತರೆಂದೂ ದುರಭಿಮಾನವನ್ನಿಟ್ಟುಕೊಂಡು ಕುರುಡನ

ಬೆನ್ನುಹತ್ತಿ ಕುರುಡನು ಹೋಗುವಂತೆ ಒಬ್ಬರನ್ನು ನೋಡಿಕೊಂಡು ಒಬ್ಬರು ನಡೆಯುತ್ತ ಇದಕ್ಕಿಂತ ಹೆಚ್ಚಿನದಿಲ್ಲವೆಂದು ಮೆರೆಯುತ್ತ ಹುಟ್ಟುಸಾವುಗಳನ್ನು ಪಡೆಯುವ ಗಡಿಬಿಡಿಯಲ್ಲಿ ಈ ಲೋಕವನ್ನೋ ಅಥವ ಇದಕ್ಕಿಂತ ಕೀಳಾದ ಲೋಕಗಳನ್ನೋ ಹೊಂದುತ್ತಿರುವರು. ಭೋಗಗಳನ್ನೂ ಐಶ್ವರ್ಯಗಳನ್ನೂ ಪಡೆಯುವುದಕ್ಕಾಗಿ ಬೇರೆ ಬೇರೆ ಅನೇಕ ಕರ್ಮಗಳನ್ನು ಹೇಳುವಂಥ, ಜನ್ಮಗಳನ್ನೂ ಕರ್ಮಫಲಗಳನ್ನೂ ಕೊಡುವವೆಂದೂ ಆಶೆಯನ್ನು ತೋರಿಸುವಂಥ ಮಾತುಗಳನ್ನು ಹೇಳುವ ಮೂಢರೂ, ವೇದದ ಅರ್ಥವಾದಗಳನ್ನೇ ಮುಖ್ಯವಾಗಿ ಭಾವಿಸುವವರೂ, ಈ ಫಲಗಳ ಹೊರತು ಇನ್ನೊಂದಿಲ್ಲವೆಂದು ವಾದಿಸುವವರೂ, ಆಶೆಯಿಂದ ತುಂಬಿಹೋಗಿರುವವರೂ, ಸ್ವರ್ಗವೇ ಸರ್ವಸ್ವವೆಂದು ಭಾವಿಸುವವರೂ, ಆಗಭೋಗಗಳಲ್ಲಿಯೂ, ಭಾಗ್ಯಗಳಲ್ಲಿಯೂ, ಮನಸ್ಸನ್ನು ಹಾಕಿಕೊಂಡು ಅವುಗಳ ಬೆನ್ನುಹಿಡಿದು ಹೋಗುವವರೂ ಆದ ಇವರ ಮನಸ್ಸಿನಲ್ಲಿ ಕರ್ಮಯೋಗವು ಜ್ಞಾನಕ್ಕೆ ಸಾಧನವೆಂಬ ವಿಚಾರಪೂರ್ವಕವಾದ ನಿಶ್ಚಯವು ಹುಟ್ಟುವುದಿಲ್ಲವೆಂದೂ ವೇದಗಳೆಲ್ಲಾ ತ್ರಿಗುಣಗಳಲ್ಲಿಯೇ ತೊಳಲುವವರಿಗಾಗಿಯೇ ಇರುವವೆಂದೂ ತಿಳಿದು ರಾಗದ್ವೇಷಗಳನ್ನು ಬಿಟ್ಟು ಯಾವಾಗಲೂ ಸತ್ವಗುಣದಲ್ಲಿಯೇ ಇರುತ್ತಾ ತನ್ನ ಯೋಗಕ್ಷೇಮದ ಯೋಜನೆಯನ್ನು ತಾನೇ ಹಚ್ಚಿಕೊಳ್ಳದೇ ಸರ್ವಸಮರ್ಥನಾದ ದೇವರಮೇಲೆಯೇ ಆ ಭಾರವನ್ನೆಲ್ಲಾ ಹಾಕಿ ಆ ಗುಣಗಳನ್ನು ಮೀರುವುದಗತ್ಯವೆಂದೂ ಭಾವಿ ಕೆರೆ ಮೊದಲಾದವುಗಳಲ್ಲಿ ನೀರು ತುಂಬಿದ್ದರೂ ಅದರಲ್ಲಿ ಸ್ವಲ್ಪವೇ ಸಾಕೆನ್ನಿಸುವಂತೆ ಆತ್ಮತತ್ವವನ್ನು ತಿಳಿಯುವುದರಲ್ಲಿ ಆಸಕ್ತನಾಗಿ ಕರ್ಮಗಳೆಲ್ಲಾ ಅದಕ್ಕೆ ಸಾಧನಮಾತ್ರಗಳೆಂದೂ ನಿಶ್ಚಯಜ್ಞಾನವುಳ್ಳವನು ವೇದಗಳಲ್ಲೆಲ್ಲಾ ಅಷ್ಟನ್ನೇ ಗ್ರಹಿಸತಕ್ಕದ್ದೆಂದೂ ಶ್ರೀಕೃಷ್ಣ ಪರಮಾತ್ಮನು ಹೇಳಿರುತ್ತಾನೆ. ಶಾಸ್ತ್ರವಾಸನೆಯು ದರ್ಪವನ್ನು ಹುಟ್ಟಿಸುವುದರಿಂದ ಕೆಟ್ಟದ್ದು. ಶ್ವೇತಕೇತುವೆಂಬುವನು ಚಿಕ್ಕಂದಿನಲ್ಲಿಯೇ ವೇದಗಳನ್ನೆಲ್ಲಾ ಓದಿ ತಂದೆಯ ಮುಂದೆ ಕೂಡ ದರ್ಪದಿಂದ ಅವಿನಯವನ್ನು ತೋರಿಸಿದನೆಂದು ಛಂದೋಗರು ಹೇಳುತ್ತಾರೆ. ಹಾಗೆಯೇ ಬಾಲಾಕಿ ಎಂಬುವನು ಕೆಲವು ಉಪಾಸನೆಗಳನ್ನು ತಿಳಿದುಕೊಂಡು ಅಭಿಮಾನದ ಆವೇಶವನ್ನು ಹೊಂದಿ ಉಶೀನರ ಮೊದಲಾದ ಎಷ್ಟೋದೇಶಗಳಲ್ಲಿ ಜಯಭೇರಿಯನ್ನು ಹೊಡೆಯಿಸಿ ಎಷ್ಟೋಬ್ರಾಹ್ಮಣರ ಮುಖದಮೇಲೆ ನೀರಿಳಿಸಿ ಕಾಶಿಯಲ್ಲಿ ಬ್ರಹ್ಮವಿಚ್ಛಿರೋಮಣಿಯಾದ ಅಜಾತಶತ್ರುವೆಂಬುವನನ್ನು ಬಾಯಿಮುಚ್ಚಿಸುವುದಕ್ಕೆ ಹೋದನೆಂದು ಕೌಷೀತಕಿಗಳೂ ವಾಜಸನೇಯಿಗಳೂ ಹೇಳುತ್ತಾರೆ. ದೇಹವಾಸನೆಯೂ ಕೂಡ ತಾನೆಂದು ತಿಳಿಯುವುದು, ಗುಣವನುಂಟುಮಾಡುವುದು ದೋಷವನ್ನು ಹೋಗಲಾಡಿಸುವುದು, ಎಂದು ಮೂರುಬಗೆ ಚೈತನ್ಯದಿಂದ ಕೂಡಿದ ದೇಹವೇ ತಾನೆಂದು ಪಾಮರರು ತಿಳಿಯುವರೆಂದು ಭಾಷ್ಯಕಾರರು ತಮ್ಮ ಗ್ರಂಥವಲ್ಲಿ ಉದಾಹರಿಸಿದ್ದಾರೆ ಪುರುಷನು ಅನ್ನರಸದಿಂದಾಗಿರುವವನೆಂಬರ್ಥವು ತೈತ್ತಿರೀಯೋಪನಿಷತ್ತಿನಲ್ಲಿಯೂ ಕೂಡ ಒಂದುಕಡೆ ಹೊರಡುತ್ತದೆ. ಬ್ರಹ್ಮನು ಸರಿಯಾಗಿ ತಿಳಿಯ ಹೇಳಿದರೂ ವಿರೋಚನನು

ನ್ನೆ ಮನಸ್ಸು ಹೊಲಸಾಗಿದ್ದುದರಿಂದ ದೇಹವೇ ಆತ್ಮನೆಂದು ನಿಶ್ಚಯವನ್ನು ಮಾ-
ಕೊಂಡು ಅಸುರರಿಗೆಲ್ಲ ಅದೇ ಬುದ್ಧಿಯನ್ನು ಕಲಿಸಿದನೆಂದು ಛಂದೋಗರು ಹೇಳು-
ರೆ. ಹೀಗೆ ಶರೀರದಲ್ಲಿ ಇಲ್ಲದ ಗುಣವನ್ನು ಕಲ್ಪಿಸುವುದು ಲೌಕಿಕವೆಂದೂ ಶಾಸ್ತ್ರೀ-
ವೆಂದೂ ಎರಡುಬಗೆ. ಇಂಪಾದಸ್ವರವನ್ನು ಸಂಪಾದಿಸುವುದು ಲೌಕಿಕ, ಇಂಪಾದ
ನಿಯಿಂದ ಓದಬೇಕೆಂದು ಅಥವ ಹಾಡಬೇಕೆಂದು ಎಣ್ಣೆಯನ್ನು ಕುಡಿಯುವುದು ಮತ್ತು
ಣಸು ತಿನ್ನುವುದು ಲೌಕಿಕವಾದ ಉಪಾಯಗಳು. ಪುಷ್ಟಿದರೆ ಮೆತ್ತಗಿರಬೇಕೆಂದು
ಬಲಿತುಕೊಳ್ಳುವಂಥ ಔಷಧಗಳನ್ನೂ ಆಹಾರಗಳನ್ನೂ ಉಪಯೋಗಿಸುವುದೂ
ಂದರ್ಯ ಉಂಟಾಗುವುದಕ್ಕಾಗಿ ಅಭ್ಯಂಗಸ್ನಾನಮಾಡುವುದೂ ವಸ್ತ್ರಗಳನ್ನು
ರಿಸುವುದೂ ಒಡವೆಗಳನಿಟ್ಟುಕೊಳ್ಳುವುದೂ ಸುವಾಸನೆಯುಂಟಾಗುವುದಕ್ಕಾಗಿ ಗಂಧ-
ನ್ನು ಬಳಿದುಕೊಳ್ಳುವುದೂ ಹೂವನ್ನು ಮುಡಿದುಕೊಳ್ಳುವುದೂ ಇವೆಲ್ಲಾ ಲೌಕಿಕವಾದ
ಪಾಯಗಳೇ. ಇನ್ನೂ ಪವಿತ್ರನಾಗಬೇಕೆಂದು ಗಂಗಾನದಿಯಲ್ಲಿ ಸ್ನಾನಮಾಡುವುದು
ಾಲಿಗ್ರಾಮ ತೀರ್ಥಮೊದಲಾದವುಗಳನ್ನು ಪ್ರೋಕ್ಷಿಸಿಕೊಳ್ಳುವುದು ಮೊದಲಾದವು-
ಳೆಲ್ಲ ಶಾಸ್ತ್ರೀಯವಾದ ಉಪಾಯಗಳು. ದೇಹದದೋಷವನ್ನು ಹೋಗಲಾಡಿಸು-
ದಕ್ಕೆ ವೈದ್ಯರು ಹೇಳಿದ ಔಷಧಗಳನ್ನು ಉಪಯೋಗಿಸುವುದೂ ಮುಖ ಮೊದಲಾದ-
ಗಳನ್ನು ತೊಳೆದುಕೊಳ್ಳುವುದೂ ಲೌಕಿಕವಾದ ಉಪಾಯ. ಆಚಮನಾದಿಗಳು ವೈ-
ಕವಾದ ಉಪಾಯ ಹೀಗೆ ಇದೂ ಎರಡುಬಗೆ. ಈ ದೇಹವಾಸನೆಯು ಎಷ್ಟು ಕೆಟ್ಟ-
ಂಬುದನ್ನು ನೋಡಿರಿ ದೇಹವು ಆತ್ಮವೆಂಬರ್ಥವನ್ನು ಯಾವಶಾಸ್ತ್ರವೂ ಸಮ್ಮ-
ಸುವುದಿಲ್ಲ. ಮತ್ತು ಹಾಗೆ ತಿಳಿದುಕೊಳ್ಳುವುದೇ ಎಲ್ಲಾ ದುಃಖಗಳಿಗೂ ಕಾರಣವಾ-
ುವುದು. ಈ ಅಭಿಪ್ರಾಯವನ್ನು ಪೂರ್ವಾಚಾರ್ಯರೆಲ್ಲರೂ ಚನ್ನಾಗಿ ತೋರಿಸಿರುವರು. ಅದ-
ಲ್ಲಿ ಗುಣವನ್ನುಂಟುಮಾಡುವುದಕ್ಕೆ ಎಷ್ಟುಪ್ರಯತ್ನಮಾಡಿದರೂ ಸಾರ್ಥಕವಾಗು-
ದಿಲ್ಲ. ಗಾಯಕರೂ ಮತ್ತು ಉಪನ್ಯಾಸಕರೂ ತಮ್ಮ ಧ್ವನಿಯು ಕೋಮಲವಾಗ-
ೇಕೆಂದು ಎಷ್ಟೋ ಪ್ರಯತ್ನಮಾಡುತ್ತಾರೆ. ಅವರ ಇಷ್ಟಾರ್ಥವೆಷ್ಟೋಕಡೆ ನೆರವೇ-
ುವುದೇ ಇಲ್ಲ. ಮೈಮೃದುವಾಗುವುದೂ ಅಂಗಪುಷ್ಟಿಯೂ ಕೂಡ ಆಗಿನ ಪೂರ್ತಕ್ಕೆ
ೂರುವುದೇ ಹೊರತು ನೆಲೆಯಾಗಿ ಇರುವದಿಲ್ಲ. ಇನ್ನು ಸೌಂದರ್ಯ ಮತ್ತು ಸುವಾಸನೆ
ವುಗಳೆಲ್ಲಾ ಬಟ್ಟೆಗಳಿಗೂ ಗಂಧಕ್ಕೂ ಸೇರಿದ್ದೇ ಹೊರತು ದೇಹಕ್ಕೇನೂ ಸಂಬಂಧ-
ಟ್ಟಿಲ್ಲ. ಬರೀ ಎಲುಬು, ಕರುಳು, ಮಲ ಮೂತ್ರ, ನರ, ರಕ್ತ, ಮಾಂಸ, ನೆಣ, ಕೀವು,
ಸೀತೊಗಲು, ಇವುಗಳಿಂದ ಕೂಡಿದ ದೇಹದಮೇಲೆ ಪ್ರೀತಿಯನ್ನು ಮಾಡುವ ಮನು-
ೃನು ನರಕವನ್ನು ಪ್ರೀತಿಸುವನೆಂದೂ ಅತ್ಯಂತ ಅಶುಚಿಯಾಗಿ ಹೊಲಸುನಾರುತ್ತ
ಸಹ್ಯವನ್ನುಂಟುಮಾಡುತ್ತಿರುವ ದೇಹಕ್ಕಿಂತ ವೈರಾಗ್ಯಕ್ಕೆ ಕಾರಣವಿನ್ನೇನುಬೇಕೆಂದೂ
ಷ್ಣುಪುರಾಣದಲ್ಲಿ ಹೇಳಿರುವುದು. ಇದು ಲೌಕಿಕವಾದ ಗುಣಾಧಾನಕ್ಕೆ ಹೇಳಿದಮಾ-
ಯಿತು. ಶಾಸ್ತ್ರೀಯವಾದ ಗುಣಾಧಾನವನ್ನು ತೆಗೆದುಕೊಂಡರೆ ಒಂದು ಶಾಸ್ತ್ರದ

ಮಾತನ್ನು ಇನ್ನೊಂದು ಶಾಸ್ತ್ರವು ಹೊಡೆದುಹಾಕುತ್ತದೆ. ಯಾವಪ್ರಾಣಿಗಳನ್ನೂ ಹಿಂಸೆ ಮಾಡಕೂಡದೆಂಬ ಶಾಸ್ತ್ರದಮುಂದೆ ಅಗ್ನಿಷ್ಟೋಮದಲ್ಲಿ ಪಶುವನ್ನುಕೊಲ್ಲಬೇಕೆಂಬ ಶಾಸ್ತ್ರವೊಂದು ಬಂದು ನಿಲ್ಲುವಹಾಗೆ ಒಂದು ವಚನವನ್ನು ಇನ್ನೊಂದು ವಚನವು ಕೆಳಕ್ಕೆ ಹಾಕುತ್ತದೆ. ವಾತಪಿತ್ತಶ್ಲೇಷ್ಮಗಳಿಂದ ಕೂಡಿದ ಪಸೀಹಪಾದ ಈ ದೇಹದಲ್ಲಿ ನಾನೆಂಬ ಬುದ್ಧಿಯೂ ಹೆಂಡತಿಮಕ್ಕಳು ಮೊದಲಾದವರಲ್ಲಿ ನನ್ನವರೆಂಬ ಬುದ್ಧಿಯೂ, ಮಣ್ಣಿನ ಆಕಾರದಲ್ಲಿ ದೇವರೆಂಬ ಬುದ್ಧಿಯೂ, ತತ್ವಜ್ಞರಾದ ಜನರೆಲ್ಲರನ್ನು ಬಿಟ್ಟು ನೀರಿನಲ್ಲಿ ತೀರ್ಥಬುದ್ಧಿಯೂ, ಯಾರಿಗಿರುವುದೋ ಅವನು ಮನುಷ್ಯನಲ್ಲ. ಎರಡುಕಾಲಿನ ಪಶು. ಅದರಲ್ಲಿಯೂ ಅಂತಿಂಥ ಪಶುವಲ್ಲ, ಹೊರಿಸಿದಷ್ಟು ಕಟ್ಟಿಗೆ ಕಂಪೆಗಳನ್ನು ತಿನ್ನು-ಕುತ್ತ ಹೊರುವಂಥ ಕತ್ತೆಯೇ ಅವನು. ದೇಹದ ಹುಟ್ಟೇ ಅತ್ಯಂತ ಮಲಿನವಾದದ್ದು. ದೇಹದೊಳಗಿರುವ ಆತ್ಮನು ನಿರ್ಮಲಸ್ವರೂಪನು. ಹೀಗಿರುವಾಗ ಯಾವದನ್ನು ಶುಚಿ ಮಾಡಬೇಕು. ಹೀಗೆ ಶಾಸ್ತ್ರವು ದೇಹದ ದೋಷಗಳನ್ನು ಹೋಗಲಾಡಿಸುವುದು ಅಸಾಧ್ಯವೆಂದು ಹೇಳಿದಹಾಗೆ ಗುಣಗಳನ್ನುಂಟುಮಾಡುವುದಸಾಧ್ಯವೆಂದು ಹೇಳದಿದ್ದರೂ, ದೇಹವು ದೋಷಮಯವೇ ಆಗಿರುವಾಗ ಅದರಲ್ಲಿ ಗುಣವನ್ನುಂಟುಮಾಡುವುದೆಂಬುದು ಆಗದಮಾತೆಂಬುದು ಮೇಲೆಯೇ ತೋರುತ್ತದೆ. ಮೈತ್ರಾಯಣೀಯ ಶಾಖೆಯಲ್ಲಿಯೂ, ದೇಹವು ಬಹು ಹೊಲಸಾದುದೆಂಬ ಮಾತು ಬಂದಿದೆ. ಈ ದೇಹವು ಗಂಡಹೆಂಡಿರ ಕೂಟದಿಂದ ಹುಟ್ಟಿದ್ದು. ಇದಕ್ಕೆ ಜ್ಞಾನವಿಲ್ಲ. ನರಕದಂಥ ಮೂತ್ರದ್ವಾರದಿಂದ ಹೊರಬಿದ್ದದ್ದು. ಎಲುಬಿನ ಕಟ್ಟಡವೂ ಮಾಂಸದ ಹೆಂಟೆಯೂ, ಚರ್ಮದಹೊದಿಕೆಯೂ, ಮಲ, ಮೂತ್ರ, ಕಫ, ಪಿತ್ತ ಮಜ್ಜ, ಮೇದಸ್ಸು, ವಸೆ, ಮೊದಲಾದವುಗಳಿಂದ ಕೂಡಿ, ಅನೇಕ ರೋಗಗಳಿಗೆ ತವರುಮನೆಯಾದದ್ದು. ಔಷಧದಿಂದಲೂ, ಉಪಚಾರದಿಂದಲೂ, ಒಂದುವೇಳೆ ರೋಗವು ಗುಣವಾದರೂ ಆ ಗುಣವು ಆಗಿನ ಪೂರ್ತದ್ದೇ ಸರಿ. ಮುಂದೆ ಅದೇರೋಗವೋ ಅಥವ ಇನ್ನೊಂದು ರೋಗವೋ ಯಾವಾಗ ಬೇಕಾದರೂ ಬರಬಹುದು. ಈ ದೇಹವೆಂಬ ಮನೆಗೆ ಒಂಭತ್ತು ಬಾಗಿಲು. ಯಾವಾಗಲೂ ಇವೆಲ್ಲಾ ಜಿನುಗುತ್ತಲೇ ಇರುವವು. ಲೆಖ್ಖವಿಲ್ಲದಷ್ಟು ರೋಮಕೂಪಗಳಿಂದ ಎಡೆಬಿಡದೆ ಬೆವರು ಹೊರಡುತ್ತಲೇ ಇರುವುದು. ಇಂಥ ದೇಹವನ್ನು ತೊಳೆಯುವುದಕ್ಕೆ ಯಾರಿಂದಾದೀತು? ಒಡಕುಮಡಕೆಯಂತೆ ಯಾವಾಗಲೂ ಸೋರುತ್ತಿರುವಂಥ ಒಂಭತ್ತು ತೂತುಗಳಿರುವ ಈ ದೇಹವನ್ನು ಹೊರಗೆ ತೊಳೆಯುವ ಮಾತ್ರದಿಂದ ಶುದ್ಧಿಯಾಗುವುದಿಲ್ಲವೆಂದೂ ಒಳಗೆ ತೊಳೆಯುವ ಉಪಾಯವಂತೂ ಇಲ್ಲವೇ ಇಲ್ಲವೆಂದೂ ಪೂರ್ವಾಚಾರ್ಯರು ಹೇಳಿರುತ್ತಾರೆ. ಆದಕಾರಣ ದೇಹವಾಸನೆಯೆಂಬುದು ಕೆಟ್ಟದ್ದು. ಕಾಲುಗುರುಕೊನೆಯಿಂದ ಮೊದಲು ಮಾಡಿಕೊಂಡು ತಲೆಯ ಕೂದಲ ತುದಿಯವರಿಗೂ ಇರುವದೆಲ್ಲಾ ತಂದೆತಾಯಿಗಳ ಸಂಯೋಗದಿಂದಲೇ ಆಗಿರುವದೆಂದೂ ಅಂಥ ದೇಹವೇ ತಾನೆಂದು ತಿಳಿದುಕೊಂಡರೆ ತಾನಾಗಿಯೇ ತನ್ನನ್ನು ಬಲೆಯೊಳಕ್ಕೆ ಕೆಡವಿಕೊಂಡಂತೆ ಆಗುವದೆಂದೂ ದೇಹವೇ ತಾನೆಂದು ತಿಳಿದುಕೊಳ್ಳುವುದೇ ಮೃತ್ಯುವಿನ

ಣಿಕೆಯೊಳಕ್ಕೆ ತಲೆಯನ್ನು ತೂರಿಸಿದಂತೆ ಯೆಂದೂ ಹೇಗಾದರೂ ಮಾಡಿ ಈ ಭಾವನೆಯ ಬೇರನ್ನೂ ಕೂಡ ಕಿತ್ತುಹಾಕಿಬಿಡಬೇಕೆಂದೂ, ಎಂಥಾ ಬೇಡರ ಹೆಂಗಸೂ ಕೂಡ ನಾಯಿಮಾಂಸವೆಂದರೆ ಹಿಂದೆಗೆಯುವಂತೆ ದೇಹವೇ ನಾನೆಂಬ ಭಾವನೆಯನ್ನು ಯಾರೂ ಮನಸ್ಸಿಗೆ ತಾಕಿಸಿಕ್ಕೊಳ್ಳಕೂಡದೆಂದೂ ವಸಿಷ್ಠರು ಹೇಳಿರುವರು.

ಈ ಲೋಕವಾಸನೆ, ಶಾಸ್ತ್ರವಾಸನೆ, ದೇಹವಾಸನೆ ಎಂಬ ಮೂರು ವಾಸನೆಗಳೂ ಅವಿವೇಕಿಗಳಿಗೆ ಚನ್ನಾಗಿ ಕಂಡರೂ ಯಾರು ಪರಮಾತ್ಮಸ್ವರೂಪವನ್ನು ತಿಳಿಯಬೇಕೆಂದು ಬಯಸುವರೋ ಅವರು ಅವು ಆ ತಿಳಿವಳಿಕೆಗೆ ತಡೆಯಾಗುವುದರಿಂದಲೂ ಪರಮಾತ್ಮಸ್ವರೂಪವನ್ನು ತಿಳಿದವರಿಗಾದರೂ ಈ ವಾಸನೆಗಳು ಆ ತಿಳಿವಳಿಕೆಯನ್ನು ಕದಲಿಸುವ ಸ್ವಭಾವದವುಗಳಾದುದರಿಂದಲೂ ವಿವೇಕಿಗಳಾದವರು ಈ ವಾಸನೆಗಳನ್ನು ಯಾವಾಗಲೂ ದೂರಕ್ಕೆ ತಳ್ಳುತ್ತಿರಬೇಕು. ಈ ವಾಸನೆಗಳಿದ್ದವರಿಗೆ ನಿಜವಾದ ತಿಳಿವಳಿಕೆ ಯುಂಟಾಗುವುದಿಲ್ಲ. ದಂಭ ದರ್ಪವೊದಲಾದ ಆಸುರ ಸಂಪದ್ರೂಪವಾದ ಮನಸ್ಸಿನವಾಸನೆಯಂತೂ ದುರ್ಗತಿಗೆ ಕಾರಣವೆಂಬುದು ಎಲ್ಲರಿಗೂ ತಿಳಿದ ಮಾತೇ ಆಗಿದೆ. ಆದಕಾರಣ ಯಾವ ಉಪಾಯದಿಂದಲಾದರೂ ಈ ನಾಲ್ಕುಬಗೆಯ ವಾಸನೆಗಳನ್ನು ಬುಡಮೇಲು ಮಾಡಿ ಒಗೆದುಬಿಡಬೇಕು. ಲೋಕವಾಸನೆ ಮೊದಲಾದ ಮೂರುವಾಸಗಳನ್ನು ಕಳೆದುಕೊಳ್ಳುವಂತೆಯೇ ಮನಸ್ಸಿನ ವಾಸನೆಯನ್ನು ಹೋಗಲಾಡಿಸಿಕೊಳ್ಳಬೇಕು. ಮನಸ್ಸು ತರ್ಕಶಾಸ್ತ್ರದವರ ಭಾಗಕ್ಕೆ ಎಂದೆಂದಿಗೂ ಇರುವಂಥಾದ್ದಾಗಿಯೂ ಅಣುರೂಪವಾಗಿಯೂ ಇದ್ದರೂ ಅದು ವೇದವನ್ನು ಹಿಡಿದವರ ಭಾಗಕ್ಕೆ ಹಾಗಿರುವದಿಲ್ಲ. ತಾರ್ಕಿಕರು ಹೇಳುವಂತೆ ಮನಸ್ಸು ಎಂದೆಂದಿಗೂ ಇರುವಂಥ ವಸ್ತುವಾದರೆ, ಅದನ್ನು ಹೋಗಲಾಡಿಸುವದು ಎಂದೆಂದಿಗೂ ಆಗದಮಾತೆನಿಸುವುದು. ಮನಸ್ಸು ಅಂಥಾದ್ದಲ್ಲವೇ ಅಲ್ಲ. ಅದೂ ಒಂದು ನಾಶವಾಗತಕ್ಕ ವಸ್ತು. ಅರಗು ಮತ್ತು ಬಂಗಾರ ಇವುಗಳಂತೆ ಅದು ಬಗೆ ಬಗೆಯ ಆಕಾರಗಳನ್ನು ಪಡೆಯುವಂಥ ವಸ್ತು.

ಬಯಕೆ, ಉದ್ದೇಶ, ಸಂಶಯ, ನಂಬುವುದು, ನಂಬದಿರುವದು, ನಾಚಿಕೆ, ಬುದ್ಧಿ, ಹೆದರಿಕೆ, ಮೊದಲಾದವುಗಳೆಲ್ಲಾ ಮನಸ್ಸೇ ಎಂದು ವಾಜಸನೇಯಿಗಳು ಮನಸ್ಸಿನ ಲಕ್ಷಣಗಳನ್ನು ಹೇಳಿರುವರಲ್ಲದೆ, ಬಯಕೆ ಮೊದಲಾದವುಗಳು ಹುಟ್ಟುವದು, ಕಣ್ಣೆದುರಿಗಿರುವ ಗಡಿಗೆಯಂತೆ ಚನ್ನಾಗಿ ಕಾಣಬರುವದೆಂದೂ, ಆ ವೃತ್ತಿಗಳಿಗೆಲ್ಲಾ ಮನಸ್ಸೇ ಆಧಾರವೆಂದೂ ತಿಳಿಸಿ ಮನಸ್ಸು ಇನ್ನೊಂದುಕಡೆಯಿದ್ದರೆ ಕಣ್ಣು ನೋಡಲರಿಯದೆಂದೂ, ಕಿವಿ ಕೇಳಲರಿಯದೆಂದೂ ಮನಸ್ಸಿನಿಂದಲೇ ಕಾಣುವಿಕೆ ಕೇಳುವಿಕೆಗಳೆಲ್ಲಾ ಸಾಗುವವೆಂದೂ ಅರ್ಥವನ್ನು ಕೊಡುವ ವೇದವಾಕ್ಯಗಳನ್ನು ಪ್ರಮಾಣಕ್ಕಾಗಿ ಉದಾಹರಿಸಿರುವರು. ಕಣ್ಣು ಮುಂದೊಂದು ಗಡಿಗೆಯಿದ್ದು ಅದು ಕರೀಗುಡ್ಡೆಯ ನಡುವೆ ಬಿಂಬಿಸಿದ್ದರೂ ಕಿವಿಯಹತ್ತಿರದಲ್ಲಿಯೇ ವೇದಘೋಷವನ್ನು ಮಾಡಿದರೂ ಮನಸ್ಸು ಆ ಕಣ್ಣು ಕಿವಿಗಳೊಡನೆ ಸೇರಿಕೊಂಡರೆ ಮಾತ್ರ ಅವು ತಿಳಿಯುವವೇ ಹೊರತು, ಮನಸ್ಸು ಬೇರೇಕಡೆಗೆ

ಹೋಗಿದ್ದರೆ ತಿಳಿಯುವದಿಲ್ಲ. ಯಾವ ಇಂದ್ರಿಯದ ಮೂಲಕವಾಗಿ ನಮಗೆ ವಿಷಯವು ತಿಳಿಯಬೇಕಾದರೂ ಮನಸ್ಸು ಆ ಇಂದ್ರಿಯದ ಜೊತೆಗೆ ಸೇರಿಕೊಳ್ಳಲೇಬೇಕು. ಇಂದ್ರಿಯದ ಜೊತೆಗೆ ಮನಸ್ಸು ಸೇರಿಕೊಂಡರೆ ವಿಷಯವು ತಿಳಿಯುತ್ತದೆ. ಮನಸ್ಸು ಸೇರಿಕೊಳ್ಳದಿದ್ದರೆ ವಿಷಯವು ತಿಳಿಯುವುದಿಲ್ಲ. ಇದಕ್ಕಿಂತಲೂ ಯಾವನಾದರೂ ಬಂದು ಒಬ್ಬನನ್ನು ಹಿಂದುಗಡೆಯಿಂದ ಮುಟ್ಟಿಬಿಟ್ಟರೆ ಅವನು ಅದನ್ನು ಮನಸ್ಸಿನಿಂದಲೇ ತಿಳಿದುಕೊಳ್ಳುವದನ್ನು ಉದಾಹರಣೆಯಾಗಿಟ್ಟುಕೊಂಡು ನೋಡಿ? ಕಲ್ಲಣ್ಣನೆಂಬುವನೊಬ್ಬನು ಒಂದುಕಡೆ ಕೂತಿರುತ್ತಾನೆ. ಮಲ್ಲಣ್ಣನೆಂಬುವನು ಹಿಂದಿನಿಂದ ಬಂದು ತನ್ನ ಕೈಯಿಂದ ಅವನ ಕಣ್ಣು ಮುಚ್ಚುತ್ತಾನೆ. ಆಗ ಕಲ್ಲಣ್ಣನು ತನಗೆ ತಾಕಿರುವದು ಬರೀ ಬೆರಳೋ ಅಂಗೈಯ್ಯೋ ಎಂಬುದನ್ನೆಲ್ಲಾ ಚನ್ನಾಗಿ ಗೊತ್ತುಮಾಡಿಕೊಳ್ಳುತ್ತಾನೆ. ಅವನು ಕಣ್ಣುಬಿಟ್ಟು ಆ ಕೈಯ್ಯನ್ನು ನೋಡಿರುವದಿಲ್ಲ. ಚರ್ಮವು ತನಗೆ ತಾಕಿದ್ದು ಮೆತ್ತನೆಯ ವಸ್ತುವೋ ಬಿರುಸಾದ ವಸ್ತುವೋ ಎಂಬುದನ್ನು ಮಾತ್ರವೇ ತಿಳಿಸುವದು. ಆದಕಾರಣ ಹೆಚ್ಚಿನಸಂಗತಿಯನ್ನು ತಿಳಿಸಿಕೊಡುವದೆಲ್ಲಾ ಮನಸ್ಸೇ. ಈ ಮನಸ್ಸು ಸತ್ವ, ರಜ, ಮತ್ತು ತಮ, ಎಂಬ ಮೂರುಗುಣಗಳಿಂದ ಆಗಿದೆ. ಆದುದರಿಂದ ಇದರಲ್ಲಿ ಪ್ರಕಾಶ, ಪ್ರವೃತ್ತಿ, ಮೋಹ, ಈ ಮೂರುಕಾರ್ಯಗಳು ತೋರುತ್ತಿರುವವು. ಪ್ರಕಾಶವೆಂದರೆ ಬೆಳಗೆ ಹೊಳೆಯುವುದಲ್ಲ, ಪ್ರಕಾಶವೆಂದರೆ ಇಲ್ಲಿ ತಿಳಿವಳಿಕೆ ಯೆಂದರ್ಥ. ಸತ್ವಗುಣದಿಂದ ತಿಳಿವಳಿಕೆ ಯುಂಟಾಗುವುದೊಂದೇ ಅಲ್ಲದೆ, ಸುಖವೂ ತೋರುವುದು. ಸಮುದ್ರದಲ್ಲಿ ಅಲೆಗಳು ಏಳುತ್ತ ಬೀಳುತ್ತ ಸಾಗುತ್ತಿರುವಂತೆ ಈ ಮೂರುಗುಣಗಳೂ ಒಂದೊಂದು ಕಾಲದಲ್ಲಿ ಒಂದೊಂದು ಏಳುತ್ತ ಒಂದೊಂದು ಬೀಳುತ್ತ ಮುಂದರಿಯುತ್ತಿರುವವು. ಒಂದೊಂದು ವೇಳೆ ರಜೋಗುಣವನ್ನೂ ತಮೋಗುಣವನ್ನೂ ಕೆಳಕ್ಕೆ ತುಳಿದು ಸತ್ವಗುಣವು ಉಬ್ಬಿಕೊಳ್ಳುವುದು. ಇನ್ನೊಂದು ವೇಳೆ ಸತ್ವಗುಣವನ್ನೂ ತಮೋಗುಣವನ್ನೂ ಹಿಮ್ಮೆಟ್ಟಿಸಿ ರಜೋಗುಣವು ಭೋರ್ಗರೆಯುವುದು. ಮತ್ತೊಂದು ವೇಳೆ ಸತ್ವಗುಣವನ್ನೂ ರಜೋಗುಣವನ್ನೂ ಅಡಗಿಸಿ ತಮೋಗುಣವು ತಾನೇತಾನಾಗಿ ವಿಜೃಂಭಿಸುವುದು. ಹೀಗೆ ಸಾಗರದಲ್ಲಿ ಒಂದು ಅಲೆಯನ್ನು ತಳಕ್ಕೆ ತುಳಿದು ಇನ್ನೊಂದು ಅಲೆಯು ಮೇಲಕ್ಕೆದ್ದು ತೋರುವಂತೆ ಮನಸ್ಸಿನಲ್ಲಿ ಒಂದೊಂದು ಗುಣವನ್ನು ಕೆಳಕ್ಕೆ ಹಾಕಿ ಇನ್ನೊಂದು ಗುಣವು ತಲೆಎತ್ತಿ ಕಾಣಿಸಿಕೊಳ್ಳುವುದು. ಹೀಗಾಗುವಾಗ ತಮೋಗುಣವು ತಲೇ ಎತ್ತಿದರೆ ಆಸುರಸಂಪತ್ತು ಹುಟ್ಟುವುದು. ರಜೋಗುಣವು ಮೇಲಕ್ಕೆ ಬಂದರೆ ಲೋಕವಾಸನೆ ಮೊದಲಾದ ಮೂರು ಬಗೆಯ ವಾಸನೆಗಳುಂಟಾಗುವವು. ಸತ್ವಗುಣವು ಎದ್ದರೆ ದೈವೀಸಂಪತ್ತು ಕಾಣಿಸಿಕೊಳ್ಳುವುದು. ದೇಹದಲ್ಲಿ ಎಲ್ಲಾ ಇಂದ್ರಿಯಗಳಿಂದಲೂ ತಿಳಿವಳಿಕೆ ಯುಂಟಾಗುತ್ತಿದ್ದರೆ ಸತ್ವಗುಣದ ಆಟವು ನಡೆಯುತ್ತಿರುವದೆಂದು ತಿಳಿಯಬೇಕು. ಹೀಗೆ ಮನಸ್ಸು ಮೂರು ಗುಣಗಳಿಂದ ಕೂಡಿದ್ದರೂ ಅದರಲ್ಲಿ ಸತ್ವಗುಣವೇ ಹೆಚ್ಚುಕೂಡಿಕೊಂಡಿರುವುದು. ಅದರ ಜೊತೆಗೆ ಕೂಡಿಕೊಂಡಿರುವ ರಜೋಗುಣ ಮತ್ತು ತಮೋಗು-

ಣಗಳು ಅದರ ಆಟವನ್ನು ನಡೆಯಗೊಡದೆ ತಮ್ಮ ಆಟವನ್ನು ಹೂಡುತ್ತಿರುವವು. ಅದುದರಿಂದ ತಿಳಿದವರು ಯೋಗಾಭ್ಯಾಸದಿಂದ ಆ ರಜೋಗುಣದ ಮತ್ತು ತಮೋಗುಣದ ಸೊಕ್ಕನ್ನು ಮುರಿದುಬಿಟ್ಟರೆ, ಆಗ ಸತ್ವಗುಣದಾಟವೇ ನಡೆಯುವುದು. ಆದಕಾರಣ ಇಂಥಾ ಜ್ಞಾನಿಗಳ ಚಿತ್ತವನ್ನು ಚಿತ್ತವೆಂದೇ ಕರೆಯಬಾರದು. ಚಿತ್ತವೆಂದರೆ ಮೂರು-ಗುಣಗಳಿಂದಾದುದೆಂದು ಅರ್ಥವಾಗುವದರಿಂದ ಆ ತಿಳಿದವರ ಚಿತ್ತವನ್ನು ಸತ್ವವೆಂದು ಕರೆಯಬೇಕು. ಈ ಚಿತ್ತದಲ್ಲಿ ಅತ್ತಿತ್ತ ತೂಯಾಡಿಸುವ ರಜೋಗುಣದ ಉಲ್ಬಣವಿಲ್ಲ-ದಿರುವುದರಿಂದ ಅದು ಏಕಾಗ್ರವಾಗುವುದು. ಇದರಿಂದ ಆತ್ಮಸ್ವರೂಪವನ್ನು ಕಾಣುವ ಯೋಗ್ಯತೆಯುಂಟಾಗುವುದು. ಆತ್ಮಸ್ವರೂಪವು ಸೂಕ್ಷ್ಮವಾದ ಏಕಾಗ್ರಬುದ್ಧಿಗೆ ಮಾತ್ರ ಕಾಣುವದೆಂದು ಶ್ರುತಿಯೂ ಹೇಳಿರುವುದು. ಬಿರುಗಾಳಿಯಿಂದ ದೀಪವು ತೂ-ಗ್ಯಾಡುತ್ತಿರುವಾಗ ಅಲ್ಲಲ್ಲಿ ಚಲ್ಲಿರುವ ಮುತ್ತು ರತ್ನಗಳನ್ನೆಲ್ಲಾ ಆರಿಸಿ ತೆಗೆದುಕೊಳ್ಳು-ವುದಕ್ಕಾಗುವುದಿಲ್ಲ. ಮತ್ತು ಮೊಂಡಾದ ಗುದ್ದಲಿಯಿಂದ ತೆಳುವಾದ ವಸ್ತ್ರಗಳನ್ನು ಕೊಲಿಯುವುದಕ್ಕೂ ಆಗುವದಿಲ್ಲ. ರಜೋಗುಣವು ತಮೋಗುಣವು ಸೇರಿ ಸತ್ವಗುಣದ ತಲೆಯನ್ನು ಮೆಟ್ಟಿ ನಿಂತಾಗಮಾತ್ರ ಬಗೆಬಗೆಯಾದ ಕಲ್ಪನೆಗಳು ಹುಟ್ಟಿ ಆಗ ಚಿತ್ತವೆ-ನಿಸಿಕೊಳ್ಳುವುದು. ಆ ಚಿತ್ತದಲ್ಲಿ ತಮೋಗುಣದ ಕೈಮೇಲಾಗಿರುವಾಗ ಅದು ಆಸುರೀ-ಸಂಪತ್ತಿಗೆ ಆಶ್ರಯವಾಗಿ ಬಹು ಸ್ಥೂಲವಾಗುತ್ತದೆ. ಆಗ ಚಿತ್ತವು ತಾನಲ್ಲದಂಥ ದೇಹ-ವನ್ನೂ ಹೆಂಡತಿಯನ್ನೂ ಮಕ್ಕಳನ್ನೂ ತಾನೆಂದು ತಿಳಿದು ನಾನು ನನ್ನದೆಂದು ಮೈ-ದುಂಬಿಕೊಂಡು ಮನೋರೋಗಗಳನ್ನೂ ದೇಹವ್ಯಾಧಿಗಳನ್ನೂ ಪಡೆದರೂ ಹುಟ್ಟು-ಸಾವುಗಳಲ್ಲಿಯೇ ಸಮಾಧಾನವನ್ನು ಕಲ್ಪಿಸಿಕೊಳ್ಳುತ್ತ ಒಂದೊಂದರಲ್ಲಿ ಹೆಚ್ಚುಪ್ರೀತಿ-ಯನ್ನು ಮಾಡುತ್ತ ಕಾಸುಕಾಸು ಕೂಡಿಸಿ ಹಣವನ್ನು ಗಂಟುಹಾಕುತ್ತ ತನ್ನ ಬದಲಿ ಮಾತ್ರ ವಿನೋದಗೊಳಿಸುವಂಥ ಹಣವನ್ನೂ ಹೆಂಗಸನ್ನೂ ಪಡೆದು ಸೊಕ್ಕಿ ಕೆಟ್ಟಾಬಿನಂತೆ ದುರಾಶೆಯೆಂಬ ಹಾಲನ್ನು ಕುಡಿದು ಮದಿಸಿ ಭೋಗವೆಂಬ ಗಾಳಿಯನ್ನು ಉಂಡುಂಡು ಉಬ್ಬಿಕೊಳ್ಳುವುದೆಂದೂ ಹಿರಿಯರು ಆಡಿಕೋರಿಸಿರುವರು. ಮನಸ್ಸಿನ ವಾಸನಾಸ್ವರೂಪವು ಇಂಥಾದ್ದು.

ಇನ್ನು ಆ ವಾಸನೆಯನ್ನು ಹೋಗಲಾಡಿಸುವ ರೀತಿಯನ್ನು ವಿಚಾರಮಾಡೋಣ. ಬಂಧ, ಮೋಕ್ಷ ಎಂದು ಎಲ್ಲರೂ ಆಡುತ್ತಾರಲ್ಲ! ಬಂಧವೆಂಬುದು ಯಾವುದು? ಮನು-ಷ್ಯನು ಯಾವಕಟ್ಟಿಗೆ ಸಿಕ್ಕು ಬಿದ್ದಿದ್ದಾನೆ? ಮೋಕ್ಷವೆಂಬುದು ಯಾವುದು? ಮನು-ಷ್ಯನು ಯಾವ ಕಟ್ಟನ್ನು ಕಳಚಿಕೊಳ್ಳಬೇಕು? ವಾಸನೆಯು ಬಂಧವೇ ಬಂಧ. ಮನು-ಷ್ಯನು ವಾಸನೆಯೆಂಬ ಕಟ್ಟಿನೊಳಕ್ಕೆ ಸಿಕ್ಕುಬಿದ್ದಿದ್ದಾನೆ. ಅವನು ಆ ಕಟ್ಟನ್ನು ಕಳ-ಚಿಕೊಳ್ಳಬೇಕಾಗಿದೆ. ಅದೇ ಮೋಕ್ಷ. ವಾಸನೆಯೆಂಬುದೊಂದು ಹೋಗಿಬಿಟ್ಟರೆ ಆಮೇಲೆ ಮೋಕ್ಷವಾಗಬೇಕೆಂಬುದೊಂದು ಉಳಿಯುವುದೇ ಇಲ್ಲ. ಈ ವಾಸನೆಯನ್ನು ಕಳೆದು-ಕೊಳ್ಳಬೇಕಾದರೇ ಮೊದಲು ಮನಸ್ಸಿನ ವಾಸನೆಗಳನ್ನೂ ವಿಷಯವಾಸನೆಗಳನ್ನೂ

ಬಿಟ್ಟು, ಆಮೇಲೆ ಇತರರನ್ನು ಪ್ರೀತಿಸುವುದೇ ಮೊದಲಾದ ಒಳ್ಳೇ ಚಟಗಳನ್ನು ಹಚ್ಚಿಕೊಂಡು ಅವು ಚೆನ್ನಾಗಿ ಪಕ್ವಗೊಳಿಸಿಕೊಂಡಮೇಲೆ ಅವುಗಳಮೇಲಿನ ಲಕ್ಷ್ಯವನ್ನೂ ತೆಗೆದು ತನ್ನ ಆನಂದದಲ್ಲಿ ತಾನು ಶಾಂತನಾಗಿರುತ್ತ ಆ ಸ್ಥಿತಿಯು ತನ್ನ ಸಹಜಗುಣವಾಗುತ್ತ ಬಂದಹಾಗೆಲ್ಲ ಕೆಟ್ಟ ವಾಸನೆಗಳನ್ನು ಹಿಂದಕ್ಕೆ ತಳ್ಳಿದ್ದನ್ನೂ ಒಳ್ಳೇ ಚಟಗಳ ಮೇಲಿನ ಲಕ್ಷ್ಯವನ್ನೂ ತನ್ನ ಆನಂದಸ್ಥಿತಿಯನ್ನು ತಾನು ಹಿಡಿದಿಟ್ಟುಕೊಂಡಿರುವ ಪ್ರಯತ್ನವನ್ನೂ ಬಿಟ್ಟಿರುವುದರ ಜೊತೆಗೆ ಅವುಗಳನ್ನು ನಾನು ಬಿಟ್ಟಿರುವೆನೆಂಬ ಕಲ್ಪನೆ ಕೂಡ ಬರದಂತೆ ಸ್ಥಿರಸಮಾಧಾನದಿಂದ ಇರಬೇಕೆಂದು ವಸಿಷ್ಠರು ಶ್ರೀರಾಮನಿಗೆ ಉಪದೇಶಮಾಡಿರುತ್ತಾರೆ. ಮನಸ್ಸಿನ ವಾಸನೆಗಳೆಂದರೆ, ಹಿಂದೆ ಹೇಳಿದ ಲೋಕವಾಸನೆ, ಶಾಸ್ತ್ರವಾಸನೆ, ದೇಹವಾಸನೆ. ಈ ಮೂರು. ವಿಷಯವಾಸನೆಗಳೆಂದರೆ ದಂಭ, ದರ್ಪ, ಮೊದಲಾದ ಆಸುರಸಂಪತ್ತು. ಸಾಮಾನ್ಯವಾಗಿ ನೋಡಿದರೆ ಮನಸ್ಸಿನವಾಸನೆಗಳೆಂಬುವೂ ವಿಷಯ ವಾಸನೆಗಳೆಂಬುವೂ ಒಂದೇ ಆದರೂ ಮನಸ್ಸಿನ ವಾಸನೆಗಳೆಂಬುವು ಮೃದುವಾಗಿರುವವು ವಿಷಯವಾಸನೆಗಳೆಂಬುವು ತೀವ್ರವಾಗಿರುವವು. ಇದೇ ಅವೆರಡಕ್ಕೂ ಭೇದ. ಅಥವಾ ಇಂಪಾದ ರಾಗವನ್ನು ಕೇಳಬೇಕೆಂದೋ ಸುಂದರವಾದ ರೂಪವನ್ನು ನೋಡಬೇಕೆಂದೋ ಹೀಗೆಲ್ಲಾ ಬಗೆಬಗೆಯ ವಿಷಯಸುಖಗಳನ್ನು ಬಯಸುವ ಸ್ಥಿತಿಯೇ ಮನಸ್ಸಿನ ವಾಸನೆ. ಅವುಗಳನ್ನು ಅನುಭವಿಸುವಾಗ ಮನಸ್ಸಿನ ಮೇಲೆ ಆದ ಪರಿಣಾಮವೇ ವಿಷಯವಾಸನೆ. ಹೀಗೆ ಅರ್ಥವನ್ನು ಮಾಡಿದರೆ ಹಿಂದೆ ಹೇಳಿದ ನಾಲ್ಕು ಬಗೆಯ ವಾಸನೆಗಳೂ ಇದರೊಳಗೆ ಅಡಗಿಕೊಳ್ಳುತ್ತವೆ. ಒಳಗೆ ಮತ್ತು ಹೊರಗೆ ಈ ಎರಡು ಕಡೆಗಳನ್ನು ಬಿಟ್ಟು ವಾಸನೆಗಳು ಇನ್ನೆಲ್ಲಿದ್ದಾವು? ಇನ್ನು ಈ ವಾಸನೆಗಳನ್ನು ಕಳೆದುಕೊಳ್ಳುವುದು ಹೇಗೆ ಸಾಧ್ಯವಾದೀತು? ವಾಸನೆಯೆಂಬುದೊಂದು ಕಣ್ಣಿಗೆ ಕಾಣುವಂಥ ವಸ್ತುವಾಗಿದ್ದರೆ ಪರಕೆಯಿಂದ ಕಸಕಡ್ಡಿಗಳನ್ನೆಲ್ಲಾ ಒಂದುಕಡೆಗೆ ಗುಡ್ಡೆಮಾಡಿ ಕೈಯಿಂದ ಎತ್ತಿ ಹೊರಕ್ಕೆ ಚೆಲ್ಲುವಂತೆ ವಾಸನೆಯನ್ನೆಲ್ಲಾ ಗುಡಿಸಿಹಾಕಬಹುದಾಗಿತ್ತು. ಹಾಗಾಗುವುದಿಲ್ಲ ವಾಸನೆಗಳನ್ನೆಲ್ಲಾ ದೂರಮಾಡುವ ಕೆಲಸವು ಉಪವಾಸಕ್ಕೂ ಮತ್ತು ಜಾಗರಣೆಗೂ ಹೋಲುತ್ತದೆ. ಊಟವೂ ನಿದ್ರೆಯೂ ತನಗೆ ತಾನೇ ಎಲ್ಲರಿಗೂ ಬೇಕಾಗುತ್ತದೆ. ಅವೆರಡೂ ಕಣ್ಣಿಗೆ ಕಾಣುವಂಥವುಗಳಲ್ಲ. ಊಟವನ್ನೂ ನಿದ್ರೆಯನ್ನೂ ಬಿಡಕಾದರೆ ಉಪವಾಸವನ್ನೂ ಜಾಗರಣೆಯನ್ನೂ ಮಾಡುವುದು ಎಲ್ಲರಿಗೂ ತಿಳಿದೇ ಇದೆ.

ಈದಿನ ನಾನು ಊಟ ಮಾಡುವುದಿಲ್ಲವೆಂದು ಮನಸ್ಸು ಗಟ್ಟಿಮಾಡಿ ಶಾಂತತನದಿಂದ ಉಪವಾಸಮಾಡುವಂತೆ ಇನ್ನು ವಾಸನೆಗಳಗೋಜು ನನಗೆ ಬೇಡವೆಂದು ಗಟ್ಟಿಮನಸ್ಸು ಮಾಡಿದರಾಯಿತು. ಊಟವನ್ನು ಬಿಟ್ಟೆನೆನ್ನುವನು ಅನ್ನ ತೊವ್ವೆ ತುಪ್ಪ ಮೊದಲಾದವುಗಳನ್ನು ಹತ್ತಿರಕ್ಕೆ ಬರಗೊಡದಂತೆ ವಾಸನೆಗಳ ಗೋಜು ಬೇಡವೆನ್ನುವನು ಹೂ, ಗಂಧ, ಹೆಂಗಸು, ಮೊದಲಾದ ವಿಷಯಗಳನ್ನು ಹತ್ತಿರಕ್ಕೆ ಸೇರಿಸಿಕೊಳ್ಳಬಾರದು. ಹೀಗೆ ಊಟ ಮತ್ತು ನಿದ್ರೆಗಳನ್ನು ಬಿಡಬೇಕೆನ್ನುವನು ಆ ಊಟ ಮತ್ತು ನಿದ್ರೆಗಳ ನೆನಪು

ಸ್ನನ್ನು ಬಾಧಿಸದಂತೆ ತನ್ನ ಮನಸ್ಸನ್ನು ಪುರಾಣಶ್ರವಣದಲ್ಲಿಯೋ ದೇವರ ಪೂಜೆ-
ಬಲ್ಲಿಯೋ ನೃತ್ಯಗೀತವಾದಿತ್ರ ಮೊದಲಾದವುಗಳಲ್ಲಿಯೋ ವಿನೋದಗೊಳಿಸುವಂತೆ
ಾಸನೆಗಳನ್ನು ಬಿಡಬೇಕೆನ್ನುವನು ಪ್ರೇಮಮೊದಲಾದ ಒಳ್ಳೇ ಚಟಗಳನ್ನು ಹಚ್ಚಿ-
ೊಳ್ಳಬೇಕು. ಸುಖಿಗಳಲ್ಲಿ ಪ್ರೇಮವನ್ನೂ ದುಃಖಿಗಳಲ್ಲಿ ಕರುಣವನ್ನೂ ಒಳ್ಳೆಯವರಲ್ಲಿ
ಂತೋಷವನ್ನೂ, ಕೆಟ್ಟವರಲ್ಲಿ ಉಪೇಕ್ಷೆಯನ್ನೂ ತೋರಿಸುವುದರಿಂದ ಚಿತ್ತವು ಸಮಾ-
ಾನವಾಗುವುದೆಂದು ಪತಂಜಲಿಗಳು ಹೇಳಿದ್ದಾರೆ. ಚಿತ್ತವು ಆಸಕ್ತಿ ಮತ್ತು ಹಗೆತನಗ-
ಂದಲೂ ಪುಣ್ಯ ಮತ್ತು ಪಾಪಗಳಿಂದಲೂ ಹೊಲಸಾಗುವುದು. ಸುಖದಕಡೆಗೇ ಮನಸ್ಸು
ೋಗುವುದು ಆಸಕ್ತಿ. ದುಃಖದಕಡೆಗೇ ಮನಸ್ಸು ಹೋಗುವುದು ಹಗೆತನ. ಒಂದರ-
ೀಲೆ ಪ್ರೇಮವನ್ನಿಟ್ಟು ಅದನ್ನು ಅನುಭವಿಸಿದ ಸುಖವನ್ನೇ ಹಂಬಲಿಸುವ ಮನಸ್ಸು,
ುಖವೆಂಬುದೆಲ್ಲಾ ನನಗಿರಲೆಂದು ಬಯಸುವದು. ಆ ಸುಖವು ಒಂದೊಂದು ಸಂದರ್ಭದಲ್ಲಿ
ಕ್ಕುವಂತೆಯೂ, ಒಂದೊಂದು ಸಂದರ್ಭದಲ್ಲಿ ಸಿಕ್ಕದಂತೆಯೂ ಇದ್ದು ಕೊನೆಗೆ ಸಿಕ್ಕದೇ
ೋಗುವುದು. ಆದಕಾರಣ ಆಸಕ್ತಿಯು ಚಿತ್ತವನ್ನು ಹೊಲಸುಮಾಡುವುದು. ಸುಖಿಗ-
ಾಗಿರುವರಲ್ಲೆಲ್ಲಾ ಪ್ರೇಮವನ್ನು ಮಾಡುತ್ತ ಸುಖಿಗಳಾಗಿರುವವರೆಲ್ಲರೂ ನನ್ನವರೇ
ಂದು ಭಾವನೆ ಮಾಡಿದರೆ ಆ ಸುಖವು ತನ್ನದೇ ಆಯಿತೆಂಬ ಬುದ್ಧಿಯುಂಟಾಗಿ ಅದರ
ಸಕ್ತಿ ಬಿಟ್ಟುಬಿಟ್ಟುತ್ತದೆ. ತನಗೆ ರಾಜ್ಯವಿಲ್ಲದಿದ್ದರೂ ಮಕ್ಕಳ ರಾಜ್ಯವನ್ನು ತನ್ನ
ಾಜ್ಯವೆಂದು ಭಾವಿಸುವಹಾಗೆ ಇತರರು ಸುಖಪಡುವದೆಲ್ಲಾ ತನ್ನ ಸುಖವೆಂದು ಭಾವಿಸಿ
ುಖದಮೇಲಣ ಆಸಕ್ತಿಯನ್ನು ಬಿಂದಕ್ಕೋಡಿಸಿಬಿಟ್ಟರೆ ಮಳೆಗಾಲವೆಲ್ಲಾ ಹೋದಮೇಲೆ
ರತ್ಕಾಲದಲ್ಲಿ ನದಿಗಳ ನೀರು ತಿಳಿಯಾಗುವಂತೆ ಮನಸ್ಸು ನಿರ್ಮಲವಾಗುವುದು. ಹಾ-
ಗೆಯೇ ಒಂದೊಂದುಸಲ ದುಃಖದ ಕಡೆಗೇ ಮನಸ್ಸು ಹೋಗುತ್ತಿರುವುದು. ಇಂಥಾ
ುಃಖವು ನನಗೆ ಎಂದೆಂದೂ ಬೇಡವೆಂದು ಮನಸ್ಸು ಹಂಬಲಿಸುತ್ತಿರುವುದು. ಆ ದುಃ-
ಖವು ಶತ್ರುಗಳಿಂದಾಗಲಿ ಹುಲಿಮೊದಲಾದವುಗಳಿಂದಾಗಲಿ ಆಗುತ್ತಿದ್ದರೆ ಆ ಕಾರಣ-
ವನ್ನು ಹೋಗಲಾಡಿಸುವುದು ಸಾಧ್ಯವಲ್ಲ. ಎಲ್ಲಾ ಬಗೆಯ ದುಃಖದ ಕಾರಣಗಳನ್ನು
ಹೋಗಲಾಡಿಸುವುದಕ್ಕಾಗುವುದಿಲ್ಲ. ಆದಕಾರಣ ಆ ಹಗೆತನವು ಯಾವಾಗಲೂ ಮನ-
ಸ್ಸಿನಲ್ಲಿ ಕುದಿಯುತ್ತಲೇ ಇರುವುದು. ತನಗೆ ಹೇಗೋ ಹಾಗೆ ಇತರರಿಗೂ ಕೂಡ ದುಃ-
ಖವಾಗದೇ ಇರಲೆಂದು ದುಃಖಿಗಳಾದ ಪ್ರಾಣಿಗಳೆಲ್ಲರಲ್ಲಾ ಮರುಕವನ್ನು ಹೊಂದಿ ಹಗೆ-
ತನವನ್ನು ಬಿಟ್ಟರೆ ಆಗ ಮನಸ್ಸು ತಿಳಿಯಾಗುತ್ತದೆ. ಪ್ರಾಣವಿರಬೇಕೆಂದು ನಮಗೆ
ಹೇಗೆ ಬಯಕೆಯೋ ಇತರಪ್ರಾಣಿಗಳಿಗೂ ಹಾಗೆಯೇ ಇರುವುದು. ಆದಕಾರಣ ಮನು-
ಷ್ಯರು ಇತರ ಪ್ರಾಣಿಗಳನ್ನು ತಮ್ಮಂತೆ ತಿಳಿದು ಅವುಗಳಮೇಲೆ ಕನಿಕರವನ್ನು ತೋ-
ರಿಸಬೇಕು. ಎಲ್ಲರೂ ಸುಖಿಗಳಾಗಿರಲಿ, ಯಾರಿಗೂ ರೋಗರೋಗವೂ ಬರದೇ ಇರಲಿ,
ಎಲ್ಲರೂ ಮಂಗಳಗಳನ್ನು ಕಾಣಲಿ, ಯಾರೊಬ್ಬರಿಗೂ ದುಃಖವುಂಟಾಗದೇ ಇರಲಿ
ಎಂದು ಬಯಸುತ್ತಿರಬೇಕು. ಅದೇನುಕಾರಣವೋ ಹೇಳಲಿಕ್ಕೆ ಬರಲೊಲ್ಲದು. ಯಾರನ್ನು

ನೋಡಿದರೂ ಪುಣ್ಯದ ಫಲವಾದ ಸುಖವನ್ನು ಮಾತ್ರ ಬಯಸುತ್ತಾರೆ; ಆ ಪುಣ್ಯವನ್ನು ಮಾತ್ರ ಮಾಡುವುದಿಲ್ಲ. ಪಾಪದ ಫಲವಾದ ದುಃಖವು ಬೇಡವೆನ್ನುತ್ತಾರೆ; ಪ್ರಯತ್ನದಿಂದಾದರೂ ಪಾಪವನ್ನು ಮಾಡದೆ ಬಿಡುವುದಿಲ್ಲ. ಈ ಪುಣ್ಯಪಾಪಗಳು ಎಂದಿದ್ದರೂ ಪಶ್ಚಾತ್ತಾಪವನ್ನು ಹುಟ್ಟಿಸುತ್ತವೆ. ಅಯ್ಯೋ ನಾನು ಒಳ್ಳೇ ಕೆಲಸಗಳನ್ನು ಮಾಡಲಿಲ್ಲ. ನಾನು ಏಕೆ ಕೆಟ್ಟಕೆಲಸಗಳನ್ನು ಮಾಡಿದೆನೋ ತಿಳಿಯಲಿಲ್ಲವಲ್ಲ. ಎಂದು ಒಂದು ದಿನವಾದರೂ ಯಾವನೂ ನಿಟ್ಟುಸಿರಿಡದೇ ಹೋಗುವುದಿಲ್ಲ. ಪುಣ್ಯಶಾಲಿಗಳಾದವರಲ್ಲಿ ಹೆಚ್ಚು ಬಳಕೆಯನ್ನು ಮಾಡಿಕೊಂಡರೆ ಅವರ ಗಾಳಿಬೀಸಿ ತಾನೂ ತನಗರಿವಿಲ್ಲದಂತೆ ಒಳ್ಳೇಕೆಲಸಗಳಲ್ಲಿಯೇ ತೊಡಗುವನು. ಹಾಗೆಯೇ ಪಾಪಿಗಳನ್ನು ಕಂಡು ಉದಾಸೀನತೆಯನ್ನು ವಹಿಸಿದರೆ ತಾನೂ ಕೂಡ ಕೆಟ್ಟಕೆಲಸಗಳಲ್ಲಿ ಹಿಂದೆಗೆಯುವಂತೆ ಆಗುವುದು. ಈರೀತಿಯಾಗುವುದರಿಂದ ಮುಂದೆ ಪಶ್ಚಾತ್ತಾಪಕ್ಕೆ ಕಾರಣವಿಲ್ಲದೇಹೋಗಿ ಮನಸ್ಸು ನಿರ್ಮಲವಾಗುವುದು. ಸುಖಿಗಳಾದವರನ್ನೆಲ್ಲಾ ತನ್ನವರಂತೆ ಭಾವಿಸಿಕೊಳ್ಳುವುದರಿಂದ ಬರೀವಿಷಯಾಸಕ್ತಿ ಹೋಗುವುದಿಷ್ಟೇ ಅಲ್ಲ ಮತ್ತೊಬ್ಬರಗುಣಗಳನ್ನು ದೋಷದಂತೆ ಕಾಣುವುದು ಮತ್ತು ಇತರರ ಗುಣಗಳನ್ನು ನೋಡಿ ಸಹಿಸದೇ ಇರುವುದು ಇಂಥವುಗಳೆಲ್ಲಾ ಅಲ್ಲಿಯೇ ವೈಗರೆಯುವುವು. ಗೆಳೆಯತನವು ಹೆಚ್ಚಿ ಇನ್ನೊಬ್ಬನು ಪಡುತ್ತಿರುವ ಸುಖವು ತನ್ನದೇ ಆಗಿ ತೋರುವಾಗ, ಇತರರ ಗುಣಗಳನ್ನು ನೋಡಿ ಸಹಿಸದೇ ಇರುವದು ಮುಂತಾದ ಕೆಟ್ಟಗುಣಗಳು ಹೇಗೆ ತಲೆ ಎತ್ತಿಯಾವು? ಹೀಗೆಯೇ ಇತರರ ದೋಷಗಳು ಮಾಯವಾಗುವವು. ದುಃಖಪಡುತ್ತಿರುವವನನ್ನು ಕಂಡಾಗಲೆಲ್ಲ ಕನಿಕರವನ್ನು ತೋರಿಸುತ್ತ ಹೋದರೆ ಹಗೆಯನ್ನು ಕೊಲ್ಲಬೇಕೆಂಬ ಮುಂತಾದ ಹಗೆತನವು ಹಿಮ್ಮೆಟ್ಟುವಂತೆ ತಾನೇ ಸುಖಿಯೆಂಬ ದರ್ಪವೂ ಕೂಡ ಎಂದರೆ, ನಾನು ಎಲ್ಲರನ್ನೂ ಆಳುವವನು, ನಾನು-ಸುಖಿ, ನನಗೆ ಸರ್ವಸಿದ್ಧಿಗಳೂ ಇವೆ, ನಾನು ಬಲಿಷ್ಠನು, ನಾನು ದೊಡ್ಡವನು, ನಾನು ಒಳ್ಳೇಕುಲದವನು, ನನಗೆ ಸಮಾನರು ಯಾರು? ಎಂಬ ದುರಭಿಮಾನವೂ ಹಿಂಜರಿಯುವುದು. ಪುಣ್ಯಶಾಲಿಗಳೊಡನೆ ಬಳಕೆಯನ್ನು ಬೆಳಸಿಕೊಂಡರೆ ಒಳ್ಳೆಯ ಕೆಲಸಗಳ ಕಡೆಗೇ ಮನಸ್ಸು ಹರಿಯಬಹುದು. ಆದರೆ ಯೋಗಿಯಾದವನಿಗೆ ಶಾಸ್ತ್ರವಾಸನೆಯಂತೆ ಅದೂ ಒಂದು ಮಲಿನವಾಸನೆಯಂತೆಯೇ ಆಗುವುದಿಲ್ಲವೇ? ಎಂದರೆ? ಇಲ್ಲ. ಏನಾದರೊಂದು ಫಲವನ್ನು ಬಯಸಿ ಮಾಡುವ ಕರ್ಮಗಳು ಮುಂದೆ ಜನ್ಮವನ್ನು ಕೊಡುವುದರಿಂದ ಮಲಿನವೆನಿಸುವುದೇ ಹೊರತು ಒಳ್ಳೇ ಕೆಲಸಗಳ ಮೇಲಿನ ಪ್ರೇಮದಿಂದ ಮಾಡುವ ಪುಣ್ಯಕಾರ್ಯವು ಹುಟ್ಟುಸಾವುಗಳಿಗೆ ಕಾರಣವಾಗುವುದಿಲ್ಲ. ಯೋಗಿಗಳ ಕರ್ಮಗಳಿಗೆ ಒಳ್ಳೆಯದೆಂಬ ಹೆಸರೂ ಕೆಟ್ಟದೆಂಬ ಹೆಸರೂ ಎರಡೂ ಇಲ್ಲ. ಇತರರಿಗಾದ ಕರ್ಮಗಳು, ಒಳ್ಳೆಯವು, ಕೆಟ್ಟವು, ಬೆರಕೆಯಾದವು ಎಂದು ಮೂರು ಬಗೆ. ಏನಾದರೊಂದು ಫಲವನ್ನು ಬಯಸಿ ಮಾಡುವ ಕರ್ಮವು ವೇದಕ್ಕೆ ಸಮ್ಮತವಾದುದರಿಂದ ಒಳ್ಳೆಯದೆನಿಸುವುದು, ವೇದದಲ್ಲಿ ಮಾಡಬಾರದೆಂದು ಹೇಳಿರುವ ಕರ್ಮವು ಕೆಟ್ಟದ್ದೆನಿಸುವುದು. ಇವೆರಡೂ

ರಿದ್ದು ಬೆರಕೆಯಾದ ಕರ್ಮ. ಈ ಮೂರುಬಗೆಯ ಕರ್ಮಗಳೂ ಮೂರುಬಗೆಯ ನ್ಮಗಳನ್ನು ಕೊಡುವವು. ವೇದದಲ್ಲಿ ಹೇಳಿರುವ ಕರ್ಮಗಳನ್ನು ಮಾಡುವುದರಿಂದ ೀವತೆಗಳ ಜನ್ಮವು ಬರುವುದೆಂದೂ, ವೇದದಲ್ಲಿ ಮಾಡಬಾರದೆಂದು ಹೇಳಿರುವ ಕರ್ಮ- ಳನ್ನು ಮಾಡುವುದರಿಂದ ನರಕದಲ್ಲಿ ಬೀಳಬೇಕಾಗುವದೆಂದೂ ಇವೆರಡನ್ನೂ ಮಾಡಿ- ವರಿಗೆ ತನಗೆತಾನೇ ಮನುಷ್ಯಜನ್ಮವು ಬರುವುದೆಂದೂ ವಿಶ್ವರೂಪಾಚಾರ್ಯರು ಹೇಳಿ- ುವರು.

ಯೋಗಾಭ್ಯಾಸವು ವೇದಕ್ಕೆ ವಿರುದ್ಧವಾದುದಲ್ಲವಾದುದರಿಂದ ಕೆಟ್ಟ ಕರ್ಮವೆ- ನದೇ ಇದ್ದರೂ ವೇದದಲ್ಲಿ ಇದು ಹೇಳಿರುವುದರಿಂದ ಒಳ್ಳೆಯಕೆಲಸಗಳಲ್ಲಿಯೇ ಇದ- ್ಕೆ ಸೇರಿಸಬಾರದೆಂದರೆ, ಹಾಗಲ್ಲ. ಇದು ಫಲದ ಬಯಕೆಯಿಂದ ಮಾಡುವ ಕರ್ಮ- ಲ್ಲವಾದುದರಿಂದ ಇದನ್ನು ಒಳ್ಳೆಯಕೆಲಸವೆಂದೂ ಕೂಡ ಕರೆಯುವಹಾಗಿಲ್ಲ. ಯೋ- ಯೂ ಪುಣ್ಯಶಾಲಿಗಳ ಬಳಕೆಯನ್ನು ಬೆಳಸಿಕೊಂಡು ಒಳ್ಳೇಕೆಲಸಗಳನ್ನು ಮಾಡಿದರೂ ೋಷವಿಲ್ಲ. ಹಾಗೆ ಒಳ್ಳೇ ಕೆಲಸಗಳ ಕಡೆಗೆ ಹರಿದುಹೋಗಿ ಮನಸ್ಸನ್ನು ನಿರ್ಮಲವಾಗಿ ಾಡಿಕೊಳ್ಳುವುದೇ ಅವರ ಕೆಲಸ. ಹಾಗಿರುವದೇ ಅವರ ಧರ್ಮ. ಅವರಿಗೆ ಈ ಚಾಳಿ- ೕೇ ಹೆಚ್ಚಿ ಕೆಟ್ಟಚಾಳಿಯನ್ನೆಲ್ಲಾ ಕಳೆಯುವುದು. ಒಳ್ಳೇ ಚಟಗಳೆಂಬುವು ಲೆಕ್ಕವಿ- ದಷ್ಟಿರುವಾಗ ಒಬ್ಬನು ಅವುಗಳನ್ನೆಲ್ಲಾ ಅಭ್ಯಾಸಮಾಡುವುದು ಹೇಗೆಂದರೆ? ಒಬ್ಬನೇ ಲ್ಲವನ್ನೂ ಮಾಡಬೇಕಾದುದಿಲ್ಲ. ಕೆಟ್ಟಚಟಗಳು ಲೆಕ್ಕವಿಲ್ಲದಷ್ಟು ಇರುವವು. ಅವು- ಳೆಲ್ಲಾ ಒಬ್ಬನಲ್ಲಿಯೇ ಇರುವುದುಂಟೇ? ಆಯುರ್ವೇದದಲ್ಲಿ ಎಷ್ಟೋ ಔಷಧಗಳು ೇಳಿವೆ. ಒಬ್ಬನೇ ಅವುಗಳನ್ನೆಲ್ಲಾ ಸೇವಿಸುವುದಕ್ಕಾದೀತೇ? ಔಷಧಗಳಿಂದ ಹೋಗು- ಂಥ ರೋಗಗಳೆಲ್ಲಾ ಒಬ್ಬನ ದೇಹದಲ್ಲಿ ಕಾಣಿಸಿಕೊಳ್ಳುವುದುಂಟೆ? ಇದಕಾರಣ ತನ್ನ ುನಸ್ಸನ್ನು ತಾನು ಪರೀಕ್ಷೆಮಾಡಿ ನೋಡಿಕೊಂಡು, ಎಷ್ಟು ಕೆಟ್ಟ ಚಟಗಳಿವೆಯೋ ಷ್ಟು ಒಳ್ಳೇಚಟಗಳನ್ನು ಹಚ್ಚಿಕೊಳ್ಳಬೇಕು. ಹೆಂಡತಿ, ಮಕ್ಕಳು, ಗೆಳೆಯರು, ೊದಲಾದವರ ತೊಡಕಿನಲ್ಲಿ ತೊಳಲಲಾರದವನು ಅವರನ್ನೆಲ್ಲಾ ತೊರೆದು ಸನ್ಯಾಸಿ ಯಾಗುವಂತೆ, ವಿದ್ಯಾಮದ, ಧನಮದ, ಕುಲಮದ, ಆಚಾರಮದ, ಮೊದಲಾದವುಗಳ ಬಲೆಗೆ ಬಿದ್ದಿರುವವನು, ಅವುಗಳಿಗೆ ವಿರೋಧಿಯಾದ ವಿವೇಕವನ್ನು ವೃದ್ಧಿಮಾಡಿಕೊ- ್ಳಬೇಕು. ಜನಕನು ಇಂಥಾ ವಿವೇಕವನ್ನು ತಂದುಕೊಂಡು ತೋರಿಸಿರುವನು. ಯಾರು ಇಂದು ಎಲ್ಲರ ತಲೆಯನ್ನೂ ಮೆಟ್ಟಿ ಉಚ್ಚಸ್ಥಾನದಲ್ಲಿ ಕುಳಿತಿರುವರೋ ಅವರು ನಾಳೆ- ಯೋ ನಾಡಿದ್ದೋ ಕೆಳಕ್ಕೆ ಉರುಳುವರು. ಮಹಾರಾಜಾಧಿರಾಜರ ಹಣಕಾಸುಗಳೆಲ್ಲಾ ಹೇಗೋ ಮಾಯವಾಗುವವು. ಬ್ರಹ್ಮನು ಸೃಷ್ಟಿಮಾಡಿದ ಲೋಕಗಳ ಗತಿಯೂ ಗಂ- ಗಮ್ಮನ ಪಾಲಾಗುವವು. ಲೆಕ್ಕವಿಲ್ಲದಷ್ಟು ಬ್ರಹ್ಮರು ಅಗಿಹೋದರು. ಎಣಿಸಲಾ- ರದಷ್ಟು ಸೃಷ್ಟಿಗಳೂ ಲಯಗಳೂ ಒಂದರಹಿಂದೊಂದು ಸಾಗಿಹೋದವು. ಮಹಾ ಮಹಾರಾಜರುಗಳೆಲ್ಲಾ ಧೂಳಿಗಳಂತೆ ಹಾರಿಹೋದರು. ನನ್ನ ಬಾಳಿನ್ನೆಷ್ಟರದು? ಯಾಕು

ಕಣ್ಣು ಬಿಟ್ಟರೆ ಜಗತ್ತಿನ ಸೃಷ್ಟಿಯೂ, ಕಣ್ಣು ಮುಚ್ಚಿದರೆ ಜಗತ್ತಿನ ಲಯವೂ ಆಗುವದೋ ಅಂಥಾ ಮಹಾಮಹಾ ಪುರುಷರೆಲ್ಲಾ ಹೆಸರುಕೂಡ ಉಳಿಯದಂತಾದರು, ನನ್ನ ಪಾಡೇನು, ಎಂದು ಜನಕನು ವಿಚಾರಮಾಡಿಕೊಂಡನು. ಈ ವಿವೇಕದ ಸ್ಥಿತಿಯನ್ನು ನೋಡಿದರೆ, ಇದು ತತ್ವಜ್ಞಾನವಾಗುವುದಕ್ಕಿಂತ ಮುಂಚೆಯೇ ಬರತಕ್ಕದ್ದಾಗಿ ತೋರುವುದು. ಏಕೆಂದರೆ? ಎಂದೆಂದಿಗೂ ನೆಲೆಯಾಗಿರುವಂಥ ವಸ್ತುವಾವುದು? ಬರೀ ತೋರಿಕೆಯ ಮಾತ್ರಕ್ಕೆ ಈದಿನ ಇದ್ದು ನಾಳೆ ಇಲ್ಲದಂತಾಗುವ ವಸ್ತುಗಳಾವುವು? ಎಂಬ ವಿಚಾರವು ಚನ್ನಾಗಿ ಬೇರುಬಿಟ್ಟುಕೊಂಡ ಹೊರತು, ತತ್ವಸಾಕ್ಷಾತ್ಕಾರವಾಗುವುದಿಲ್ಲ. ಈಗ ನಾವು ಹೇಳಹೋಗುವ ವಾಸನಾಕ್ಷಯವು ಬ್ರಹ್ಮಜ್ಞಾನವನ್ನು ಪಡೆದವರು ಜೀವನ್ಮುಕ್ತಿ ಸುಖವನ್ನು ಅನುಭವಿಸುವುದಕ್ಕೆ ಸಾಧನವಾಗಿರುವುದೆಂಬ ವಿಚಾರ. ಹೀಗಿರುವಾಗ ಜ್ಞಾನಿಗಳಾದವರಿಗೆ ಸಾಧನವನ್ನು ಹೇಳುವ ಸಂದರ್ಭದಲ್ಲಿ ಸಾಧಕರಿಗೆ ಹೇಳುವಮಾತು ಹೇಗೆ ಬಂತೆಂದರೆ? ಈ ಸಂಶಯವು ಬಂದದ್ದು ಯೋಗ್ಯವೇಸರಿ. ಸಾಮಾನ್ಯವಾಗಿ ಯಾರಿಗಾದರೂ ಇಂಥವಿವೇಕವು ಬಂದಮೇಲೆಯೇ ಜ್ಞಾನವಾಗುವುದು. ಅದೇ ರಾಜಮಾರ್ಗ. ಜನಕನ ವಿಚಾರಮಾತ್ರ ಹಾಗಿರಲಿಲ್ಲ ಅವನಿಗೆ ಹಿಂದಿನಜನ್ಮಗಳ ಪುಣ್ಯಗಳೆಲ್ಲಾ ಒಟ್ಟುಗೂಡಿಕೊಂಡು ಒಮ್ಮೆಗೇ ತಮ್ಮ ಫಲವನ್ನು ಕೊಡುವುದಕ್ಕೆ ಸಿದ್ಧವಾದವು. ಈ ಸಮಯಕ್ಕೆ ಸರಿಯಾಗಿ ಆಕಾಶದಿಂದ ಜೋಗಸೆಯೊಳಕ್ಕೆ ಹಣ್ಣು ಬಿದ್ದಂತೆ ಜನಕನಿಗೆ ಸಿದ್ಧಗೀತೆಯು ಕಿವಿಗೆ ಬಿತ್ತು ಆಕ್ಷಣದಲ್ಲಿಯೇ ಅವನಿಗೆ ಜ್ಞಾನವಾಯಿತು. ಅವನು ತನ್ನ ಮನಸ್ಸಿನ ಸಮಾಧಾನಕ್ಕಾಗಿ ಆಮೇಲೆ ಈ ವಿವೇಕವನ್ನು ತಂದುಕೊಳ್ಳಬೇಕಾಯಿತು. ಹೀಗಾದರೂ ಜ್ಞಾನವಾದಮೇಲೆ ಅವನಲ್ಲಿ ಮಲಿನವಾಸನೆಗಳಿರಲಾರವಾದುದರಿಂದ ಶುದ್ಧವಾಸನೆಗಳ ಅಭ್ಯಾಸವೇತಕ್ಕೆಂದರೆ? ಅದೂಸರಿ. ಜನಕನಿಗೇನೂ ಮಲಿನವಾಸನೆ ಇರಲಿಲ್ಲ. ಆದರೂ ಯಾಜ್ಞವಲ್ಕ್ಯ ಭಗೀರಥ ಮೊದಲಾದವರಿಗೆ ಮಲಿನವಾಸನೆ ಇದ್ದೇ ಇತ್ತು. ಯಾಜ್ಞವಲ್ಕ್ಯನಿಗೂ ಅವನ ಇದಿರಾಳಿಗಳಾದ ಉಷಸ್ತಿ ಮತ್ತು ಕಹೋಳ ಮೊದಲಾದವರಿಗೂ, ವಿದ್ಯಾಮದವು ಮಿತಿಮೀರಿ ಹೋಗಿತ್ತು. ಅವರೆಲ್ಲರೂ ಒಬ್ಬರನ್ನೊಬ್ಬರು ಗೆಲ್ಲಬೇಕೆಂದು ಸಾಹಸಮಾಡಿದರು. ಹಾಗಾದಪಕ್ಷದಲ್ಲಿ ಅವರಿಗೆ ಬೇರೇ ವಿದ್ಯೆ ಇರಬಹುದೇ ಹೊರತು ಬ್ರಹ್ಮವಿದ್ಯೆ ಇರಲಿಲ್ಲವೆಂದು ಯಾರಾದರೂ ಯೋಚಿಸಬಹುದು. ಬ್ರಹ್ಮವಿದ್ಯಾಸಂಬಂಧವಾದ ಮಾತಿನಲ್ಲಿಯೇ ಅವರ ವಾದ. ಒಂದು ಪಕ್ಷ ಹಾಗೂ ಆದರೂ ಆ ಬ್ರಹ್ಮವಿದ್ಯೆಯಲ್ಲಿ ಅವರಿಗೆ ಅಷ್ಟಿಷ್ಟು ಜ್ಞಾನಮಾತ್ರವಾಗಿತ್ತೆಂತಲೂ ಅವರ ವಾದವು ಚನ್ನಾಗಿ ತಿಳಿದಮಾತಲ್ಲವೆಂತಲೂ ಸಂಶಯಪಡುವಹಾಗಿಲ್ಲ. ಅವರ ಮಾತುಗಳಿಂದಲೇ ನಾವು ನಿಶ್ಚಯಜ್ಞಾನವನ್ನು ಪಡೆಯುತ್ತಿದ್ದೇವೆ. ಅವರದೇ ಭದ್ರವಾಗಿಲ್ಲದಿದ್ದರೆ ಅದರಿಂದ ನಮಗಾಗುವ ಜ್ಞಾನವಂತೂ ಏನೂ ಕೆಲಸಕ್ಕೆ ಬಾರದೇ ಹೋಗುವುದು. ಹಾಗೇನೂ ಅಲ್ಲ, ಅವರು ಚನ್ನಾಗಿಯೇ ತಿಳಿದುಕೊಂಡಿದ್ದರು. ಆ ತಿಳಿವಳಿಕೆಯಾದರೂ ಬರೀಪರೋಕ್ಷದ್ದೂ ಅಲ್ಲ. ಅವರ ವಾದವೆಲ್ಲಾ ಸಾಕ್ಷಾತ್ಕಾರದ ವಿಚಾರವಾಗಿ ನಡೆದಿರುವದರಿಂದ

ರು ಬಲ್ಲೆಜ್ಞಾನಿಗಳೇ ಸರಿ. ಅವರು ಸಾಕ್ಷಾತ್ಕಾರವನ್ನು ಪಡೆದವರು. ಆದರೆ ನಾನು
ಹ್ಮಸ್ವರೂಪವನ್ನು ಬಲ್ಲೆನೆಂಬುದನ್ನೂ ಕೂಡ ಯಾವನು ಬಿಡುವನೋ ಅವನು
ಹ್ಮಜ್ಞಾನಿಯೇ ಹೊರತು ಉಳಿದವರಲ್ಲವೆಂದು ಉಪದೇಶಸಹಸ್ರಿಯಲ್ಲಿಯೂ ತಾನು
ಲ್ಲವನೆಂಬ ಅಭಿಮಾನವು ಅಸುರಸ್ವಭಾವವಾದುದರಿಂದ ತಿಳಿದವರು ಕೂಡ
ಅಭಿಮಾನವನ್ನು ಹಿಡಿದರೆ ಆ ಸಾಕ್ಷಾತ್ಕಾರವೇ ವ್ಯರ್ಥವೆಂದು ನೈಷ್ಕರ್ಮ್ಯ
ಧಿಯಲ್ಲಿಯೂ ಶ್ರೀಮದಾಚಾರ್ಯರು ನಿರೂಪಿಸಿದ್ದಾರೆ. ಇದು ಜೀವನ್ಮುಕ್ತಸ್ಥಿತಿಯ-
ರುವವರ ತತ್ವಜ್ಞಾನಕ್ಕೆ ಹೇಳಿದಮಾತು. ಜೀವನ್ಮುಕ್ತಸ್ಥಿತಿಯಲ್ಲಿರುವವರಿಗೆ ವಿದ್ಯಾ-
ದ ಉಂಟೆಂದು ನಾವು ಹೇಳುವದಿಲ್ಲ. ಬೆಂಕಿ ಇರುವಂಥ ಮರದ ಪೊಳ್ಳಿನಲ್ಲಿ, ಹಸು-
ಹೇಗೆ ಚಿಗುರಲಾರದೋ ಹಾಗೆ ಜ್ಞಾನಿಯಲ್ಲಿ ಅಭಿಮಾನವು ತಲೆದೋರಲಾರದೆಂದೂ
ಥಾ ಮಾತಿಗಾಗಿ ಒಬ್ಬರನ್ನೊಬ್ಬರು ಕಚ್ಚಾಡುವುದು ತಮಗೆ ತಿಳಿಯದೆ ಇರುವದರ
ರ್ಣದೂ ಆಚಾರ್ಯರ ಅಭಿಪ್ರಾಯವಾದರೂ ಅದೊಂದು ಸಂದರ್ಭದಲ್ಲಿ ಹೇಳಿದ ಮಾ-
. ರಾಗಾದಿಗಳು ಬೇಕಾದಹಾಗೆ ಇದ್ದುಕೊಂಡಿದ್ದರೂ ಅವುಗಳ ಇರುವಿಕೆಯಿಂದ
ಧಕವೇನೂ ಇಲ್ಲವೆಂದೂ ಹಲ್ಲುಕಿತ್ತ ಹಾವಿನಂತಿರುವ ಅವನ ವಿದ್ಯೆಯು ಅವನನ್ನೇನು
ಾಡೀತೆಂದೂ ಆಚಾರ್ಯರೇ ಇನ್ನೊಂದು ಕಡೆ ಹೇಳಿರುತ್ತಾರೆ. ಈ ಮಾತುಗಳಲ್ಲಿ
ದಕ್ಕೊಂದು ವಿರೋಧವೇನೂ ಇಲ್ಲ ಒಂದು ಜೀವನ್ಮುಕ್ತ ಸ್ಥಿತಿಯಲ್ಲಿರುವವರಿಗೆ
ಬಂಧಪಟ್ಟದ್ದು, ಇನ್ನೊಂದು ಸಾಮಾನ್ಯಜ್ಞಾನಿಗಳಿಗೆ ಸಂಬಂಧಪಟ್ಟದ್ದು. ಜ್ಞಾ-
ಗಳಲ್ಲಿ ರಾಗಾದಿಗಳು ತಲೆದೋರಿದರೂ, ಅವು ಧರ್ಮಕ್ಕಾಗಲಿ ಅಧರ್ಮಕ್ಕಾಗಲಿ ಕಾ-
ಗಳಾಗಿ ಮತ್ತೆ ಹುಟ್ಟುಸಾವು ಅವನ್ನೇನೂ ಗಂಟುಹಾಕುವದಿಲ್ಲ. ಜ್ಞಾನಿಗಳ ರಾ-
ದಿಗಳು ಹುರಿದ ಬೀಜದಂತೆ ಆಗಿರುವವು ಅವು ಮತ್ತೆ ಚಿಗುರಲರಿಯವು. ಅಜ್ಞಾ-
ಳಾದವರ ರಾಗಾದಿಗಳೇ ಹುಟ್ಟುಸಾವುಗಳನ್ನು ಬೆಳಸುವವು. ಜ್ಞಾನಿಗಳಲ್ಲಿ ರಾಗಾ-
ಗಳು ಒರೀತೋರಿಕೆಯು ಮಾತ್ರವಾಗಿರುವವು. ಅವು ಅವರಲ್ಲಿರುವ ವಿವೇಕಜ್ಞಾನವೆಂಬ
ಂಕಿಯಿಂದ ಅಷ್ಟಷ್ಟಕ್ಕೆ ಸುಟ್ಟುಹೋಗುತ್ತಿರುವವು. ಇನ್ನು ಅವು ಮೊಳೆಯುವ
ಲ್ಲಿಯ ಮಾತು? ಹಾಗಾದರೆ ಇವು ಸ್ಥಿತಪ್ರಜ್ಞನಲ್ಲಿಯೇ ಇರಲಿ, ಎಂದರೆ ಹಾಗಲ್ಲ.
ವನಿಗೆ ನಿಜವಾದ ರಾಗಾದಿಗಳಂತೆ ಅವುಗಳ ತೋರಿಕೆಯಿಂದಲೂ ಬಾಧೆಯುಂಟು,
ಗ್ಗವು ಹಾವೆಂದು ತಿಳಿದರೆ, ನಿಜವಾದ ಹಾವಿನಂತೆ ಹೆದರಿಕೆಯಾಗುವದೇ ಇಲ್ಲಿ
ವ್ಯಾಂತವು. ಇದು ತೋರಿಕೆಯೆಂದು ಮನಸ್ಸಿನಲ್ಲಿ ತಿಳಿಯುತ್ತಿದ್ದರಾಯಿತಲ್ಲ ಎಂದರೆ ಸರಿ.
ದನ್ನೇ ನಾವು ಜೀವನ್ಮುಕ್ತಿಯೆಂದು ಹೇಳುವದು. ಯಾಜ್ಞವಲ್ಕ್ಯನಾದರೂ ಸಭೆ-
ಲ್ಲಿ ಉಳಿದವರನ್ನೆಲ್ಲಾ ಗೆಲ್ಲುವದಕ್ಕೆ ಹೊರಟೂ ಹಾಗಿರಲಿಲ್ಲ. ಅದುರಿಂದಲೇ ಅವನು
ನ್ನ ಮನಸ್ಸಿನ ಸಮಾಧಾನಕ್ಕಾಗಿ ವಿದ್ವತ್ಸನ್ಯಾಸವನ್ನು ಮಾಡಬೇಕಾಯಿತು. ಅವನಿಗೆ
ಲ್ಲಬೇಕೆಂಬ ಆಸೆಯೊಂದೇ ಅಲ್ಲ ಹಣದ ಆಸೆಯೂ ಬಹಳವಾಗಿತ್ತು, ಎಷ್ಟೋಜನ
ಹ್ಮಜ್ಞಾನಿಗಳು ಕುಳಿತಿರುವಾಗ ತನಗೆ ಹಸುಗಳು ಬೇಕಾಗಿರುವವೆಂದು ತನ್ನ ಶಾ-

ಯಿಂದಲೇ ಹೇಳಿ ಅವನು ಅವರೆಲ್ಲರ ಮುಂದೆ ಅಲಂಕಾರಯುಕ್ತಗಳಾದ ಹಸುಗಳ ಗುಂಪನ್ನೆಲ್ಲಾ ತನ್ನ ಮನೆಗೆ ಹೊಡೆಸಿಕೊಂಡು ಹೋದನು. ಉಳಿದ ಬ್ರಹ್ಮಜ್ಞಾನಿಗಳಿಗೆಲ್ಲ ತನ್ನ ಪ್ರತಿಷ್ಠೆಯನ್ನು ತೋರಿಸಬೇಕೆಂದು ಅವನು ಹೀಗೆಂದಿರಬಹುದೆಂಪರೆ, ಅದು ಇನ್ನೊಂದು ದೋಷವಾಯಿತು. ಉಳಿದ ಬ್ರಹ್ಮಜ್ಞಾನಿಗಳೆಲ್ಲ ತಮ್ಮಪಾಲಿಗೆ ಬರುತ್ತಿದ್ದ ಧನವನ್ನು ಅವನು ತಿರಿವಿಕೊಂಡು ಹೋದನೆಂದು ತಿಳಿದು ಸಿಟ್ಟಿಗೆದ್ದರು. ಯಾಜ್ಞ್ಯವಲ್ಕ್ಯನಾದರೂ ಸಿಟ್ಟಿನ ಕೈಗೆಸಿಕ್ಕಿ, ಶಾಕಲ್ಯನೆಂಬುವನನ್ನು ಶಾಪದಿಂದಲೇ ಕೊಂದುಬಿಟ್ಟನು. ಹೀಗೆ ಬ್ರಹ್ಮಹತ್ಯವನ್ನು ಮಾಡಿದ್ದರೂ ಅವನಿಗೆ ಅದು ಮೋಕ್ಷಕ್ಕೇನೂ ತಡೆಯಾಗುವದಿಲ್ಲ. ತಾಯಿಯನ್ನು ಕೊಲ್ಲಲಿ ತಂದೆಯನ್ನು ಕೊಲ್ಲಲಿ ಕಳ್ಳತನವನ್ನುಮಾಡಲಿ, ಮಕ್ಕಳನ್ನು ಕೊಲ್ಲಲಿ, ಎಂಥಾಕೃತ್ಯವನ್ನು ಮಾಡಿದರೂ, ಯಾವ ಕರ್ಮವೂ ಅವನ ಮೋಕ್ಷಕ್ಕೆ ತಡೆಯನ್ನು ಮಾಡಲಾರದೆಂದು ಶ್ರುತಿಯಲ್ಲಿ ಹೇಳಿದೆ. ಪರಮಾತ್ಮಸ್ವರೂಪವನ್ನು ಕಂಡವನು ಸಾವಿರಾರು ಅಶ್ವಮೇಧ ಯಾಗಗಳನ್ನು ಮಾಡಲಿ, ಕೋಟ್ಯಾನುಕೋಟಿ ಬ್ರಾಹ್ಮಣವಧೆಯನ್ನು ಮಾಡಲಿ, ಅವನಿಗೆ ಒಂದರ ಪುಣ್ಯವೂ ಇಲ್ಲ ಇನ್ನೊಂದರ ಪಾಪವೂ ಇಲ್ಲವೆಂದು ಶೇಷನೂ ಕೂಡ ತಾನುರಚಿಸಿದ ಆರ್ಯಾಪಂಚಾಶೀತಿಯಲ್ಲಿ ಹೇಳಿರುತ್ತಾನೆ. ಹೆಚ್ಚಾಗಿ ಹೇಳುವದೇನು? ಬ್ರಹ್ಮಜ್ಞಾನಿಗಳಾದಂಥ ಯಾಜ್ಞ್ಯವಲ್ಕ್ಯನೇ ಮೊದಲಾದವರಿಗೆ, ಮಲಿನವಾಸನೆ ಇದ್ದೇ ಇತ್ತು. ಭಗೀರಥನು ಕೂಡ ತತ್ವವನ್ನು ತಿಳಿದಿದ್ದರೂ ರಾಜ್ಯಭಾರವನ್ನು ಬಿಡಲಾರದೆ ಮಲಿನವಾಸನೆಯಿಂದ ಚಿತ್ತವಿಶ್ರಾಂತಿಯನ್ನು ಪಡೆಯದೆ ಆಮೇಲೆ ಎಲ್ಲವನ್ನೂ ಬಿಟ್ಟು, ವಿಶ್ರಾಂತಿಯನ್ನು ಪಡೆದನೆಂದು ವಸಿಷ್ಠರು ಹೇಳಿರುತ್ತಾರೆ. ಆದಕಾರಣ ತನ್ನಲ್ಲಿರುವ ಕೆಟ್ಟ ಚಾಳಿಗಳನ್ನು, ಇತರರ ದೋಷಗಳ ಹಾಗೆಯೇ ಚನ್ನಾಗಿ ಎತ್ತಿಹಾಕಿ ಅದಕ್ಕೆ ಪ್ರತೀಕಾರವನ್ನು ಅಭ್ಯಾಸಮಾಡಬೇಕು. ಇತರರ ತಪ್ಪನ್ನು ಹುಡುಕುವದರಲ್ಲಿ ಚತುರನಾಗಿರುವಂತೆ ತನ್ನ ಹುಳುಕುಗಳನ್ನು ಹುಡುಕುವದರಲ್ಲಿಯೂ ನಿಪುಣನಾಗಿರುವವನು, ಎಂಥವನಾದರೂ ಮುಕ್ತಿಯನ್ನು ಪಡೆದೇ ಪಡೆಯುವನೆಂದು ಸ್ಮೃತಿಯು ಹೇಳುವದು. ಆಗಲಿ, ಹಾಗಾದರೆ ಮೊದಲು ಅಂಥಾ ವಿದ್ಯಾಮದಕ್ಕೆ ತಕ್ಕ ಪ್ರತೀಕಾರ ವೇನೆಂದು ನೋಡೋಣ. ತಾನು ಉಳಿದವರ ತಲೆಯನ್ನು ಮೆಟ್ಟಿಹಾರುವೆನೆಂದು ತನ್ನಲ್ಲಿರುವ ಮದವೋ? ಅಥವಾ ತನ್ನ ತಲೆಯನ್ನು ಮೆಟ್ಟಿಹಾರುವಂಥ ಇತರರ ಮದವೋ? ತನ್ನಲ್ಲಿರುವ ಮದವಾದರೆ ಒಂದಿಲ್ಲೊಂದುದಿನ ತಪ್ಪದೆ ತಾನು ತಲೇತಗ್ಗಿಸಬೇಕಾಗುವದೆಂದು ಯಾವಾಗಲೂ ನೆನಪಿನಲ್ಲಿಟ್ಟಿರಬೇಕು. ಶ್ವೇತಕೇತು ವೆಂಬುವನು ವಿದ್ಯೆಯಿಂದ ಸೊಕ್ಕಿ ಪ್ರವಾಹಣನೆಂಬ ರಾಜನ ಸಭೆಗೆ ನುಗ್ಗಿದನು ಆ ರಾಜನು ಅವನಿಗೆ ಪಂಚಾಗ್ನಿವಿದ್ಯೆಯ ಸಂಬಂಧವಾದ ಪ್ರಶ್ನೆಗಳನ್ನು ಹಾಕಿದನು. ಅದು ಅವನಿಗೆ ತಿಳಿದಿರಲಿಲ್ಲ. ಆಗ ಇವನು, ಮರುಮಾತಾಡದೆ ಬಾಯಿಮುಚ್ಚಿಕೊಳ್ಳಬೇಕಾಯಿತು. ಆಗ ರಾಜನು ಅವನನ್ನು ಬಗೆಬಗೆಯಿಂದ ಧಿಕ್ಕರಿಸಿದನು. ಆಮೇಲೆ ಅವನು ತಂದೆಯ ಬಳಿಗೆಬಂದು ತನಗಾದ ಅವ-

ರವನ್ನು ತಿಳಿಸಿದನು. ಆಗ ತಂದೆಯು ದುರಭಿಮಾನಕ್ಕೆ ಬೀಳದೆ ಆ ರಾಜನ ಬಳಿಗೇ
ೀಗಿ ಆ ವಿದ್ಯೆಯನ್ನು ಕಲಿತನು. ಹಾಗೆಯೇ ದೃಪ್ತಬಾಲಕಿ ಯೆಂಬವನನ್ನು,
ಾತಶತ್ರುವೆಂಬ ರಾಜನು ಧಿಕ್ಕರಿಸಲಾಗಿ ಅವನು ಅದನ್ನು ಮನಸ್ಸಿಗೆ ಹಚ್ಚಿ-
ಳ್ಳದೆ ಆ ರಾಜನನ್ನೇ ಅನುಸರಿಸಿದನು. ಉಷಸ್ತ, ಮತ್ತು ಕಹೋಳ ಮೊದಲಾದವರು
್ಯಮದದಿಂದ ತಲೆತಿರುಗಿದವರಾಗಿ ವಾದಕ್ಕೆ ಬಿದ್ದು ಕೊನೆಗೆ ತಲೆತಗ್ಗಿಸಿದರು.
ನ್ನು ತನ್ನನ್ನು ತುಚ್ಛಮಾಡುವಂಥ ಇತರರ ಮದದ ವಿಷಯವಾದರೂ ಅದಕ್ಕೆ
ತೀಕಾರಮಾಡಬೇಕಾದುದಿಲ್ಲ. ಉಳಿದವರು ಬೇಕಾದಹಾಗೆ ನಮ್ಮನ್ನು ನಿಂದಿಸಲಿ,
ತ್ತು ಅವಮಾನ ಮಾಡಲಿ ಆದರಿಂದ ತನಗೇನೂ ಹಾನಿ ಇಲ್ಲವೆಂದು ಭಾವಿಸಬೇಕು.
ರು ಆತ್ಮವನ್ನು ನಿಂದಿಸಿದರೆ ತಮ್ಮನ್ನು ತಾವೇ ಬೈಯ್ದುಕೊಂಡಂತಾಯಿತು.
ೀರವನ್ನು ನಿಂದಿಸಿದರೆ ಅದು ಯೋಗ್ಯವೇ ಆಯಿತು. ಶರೀರವು ಎಂದಿಗಾದರೂ
ದ್ಯವಾದದ್ದೇ ಸರಿ? ಯೋಗಿಯಾದವನಿಗೆ ನಿಂದೆಯೂ ಅವಮಾನವೂ ಭೂಷಣಗಳಾ-
ವವು. ಅವರು ದೇಹವನ್ನು ಬೈಯ್ದಾಗ, ಸ್ಥೂಲದೇಹವಾಗಲಿ ಸೂಕ್ಷ್ಮದೇಹ-
ಗಲಿ ತಾನಲ್ಲವೆಂಬುದನ್ನು ಮನಸ್ಸಿಗೆ ತಂದುಕೊಂಡರಾಯಿತು. ಅಂಥಾಜ್ಞಾನಿಯನ್ನು
ಬೈಯ್ಗಳಗಳೇನು ಮಾಡಿಯಾವು? ಅಳುವುದು, ನಗುವುದು, ಹೆದರಿಕೆ, ಸಿಟ್ಟು, ಆಸೆ,
ಂತಿ, ಆಸಕ್ತಿ ಹುಟ್ಟು, ಸಾವು, ಇವುಗಳೆಲ್ಲಾ ಅಹಂಕಾರಕ್ಕೆ ಸಂಬಂಧ ಪಟ್ಟದ್ದೇ
ರತು ಆತ್ಮನಿಗಲ್ಲ. ನಮ್ಮನ್ನು ನಿಂದೆಮಾಡಿ ಜನರು ಸಂತೋಷವನ್ನು ಪಡೆಯು-
ವಾದರೆ ಎಳ್ಳಷ್ಟಾದರೂ ನಮ್ಮ ಪ್ರಯತ್ನವಿಲ್ಲದೆ ಅವರು ನಮ್ಮಿಂದ ಸಂತೋಷವನ್ನು
ಂದಿದ್ದು ನಮ್ಮಮೇಲೆ ದೊಡ್ಡದೊಂದು ಅನುಗ್ರಹವನ್ನು ಮಾಡಿದಂತಾಯಿತೆಂದು
ಯಬೇಕು. ತಮಗೆ ಒಳ್ಳೇದಾಗಬೇಕೆನ್ನುವರು ಇತರರಿಗೆ ತೃಪ್ತಿಯಾಗಲೆಂದು ತಾವು
ಪಟ್ಟು ಕೂಡಿಹಾಕಿದಂಥ ಹಣಕಾಸುಗಳನ್ನೆಲ್ಲಾ ಸೂರೆಮಾಡುವರು. ನಮ್ಮಿಂದ
ಥಾದ್ದೇನೂ ಆಗದೆ ನಮ್ಮನ್ನು ನಿಂದಿಸುವ ಮಾತ್ರದಿಂದಲೇ ಇತರರಿಗೆ ತೃಪ್ತಿ-
ಾಗುತ್ತಿದ್ದರೆ, ಆ ಇತರರು ನಮ್ಮನ್ನು ಹಿಂದೆಯಾದರೂ ನಿಂದಿಸಲಿ ಮುಂದೆಯಾ-
ೂ ನಿಂದಿಸಲಿ ಯೋಗಿಯಾದವನು ಉತ್ತಮರ ಧರ್ಮವನ್ನು ನಿಂದಿಸದೆ ತಾನುಮಾತ್ರ
ರೊಬ್ಬರೂ ತನ್ನ ಹತ್ತಿರಕ್ಕೆ ಬರದೆ ತನ್ನನ್ನು ತುಚ್ಛವಾಗಿ ಕಂಡು ದೂರಕ್ಕೆ
ಲಗುವಂತೆಯೇ ನಡವಳಿಕೆಯನ್ನಿಡಬೇಕು. ಯಾಜ್ಞವಲ್ಕ್ಯ, ಉಷಸ್ತ, ಮತ್ತು
ೋಳ ಇವರಂತೆ ವಿದ್ಯಾಮದವನ್ನು ಕಳೆದುಕೊಳ್ಳುವಹಾಗೆ ಹಣದಾಸೆ ಮತ್ತು
ೇಪ ಮೊದಲಾದವುಗಳನ್ನು ಹಿಮ್ಮೆಟ್ಟಿಸಿಕೊಳ್ಳಬೇಕು. ಹಣಕಾಸನ್ನು ಪಡೆಯು-
ದರಲ್ಲಿಯೂ ದುಃಖವಾಗುವುದೆಂದೂ, ಅದನ್ನು ಕಾಪಾಡಿಕೊಳ್ಳುವುದರಲ್ಲಿಯೂ
ಃಖವಾಗುವುದೆಂದೂ ಅದು ಕಳೆದು ಹೋದರೂ ದುಃಖವಾಗುವುದೆಂದೂ, ವೆಚ್ಚ-
ದರೂ ದುಃಖವಾಗುವದೆಂದೂ ಹೀಗೆ ಹಣಕಾಸೆಂಬುದು ದುಃಖಮಯವೆಂದೂ ವಿ-
ಕವನ್ನು ತಂದುಕೊಳ್ಳಬೇಕು. ಇನ್ನು ಸಿಟ್ಟಿನಲ್ಲಿಯೂ ಎರಡುಬಗೆ. ಇತರರ ಮೇಲೆ



ತಮ್ಮಲ್ಲಿರುವ ಸಿಟ್ಟೊಂದು, ತಮ್ಮ ಮೇಲೆ ಇತರರಿಗಿರುವ ಸಿಟ್ಟೊಂದು. ಇತರರಮೇಲೆ ತಮ್ಮಲ್ಲಿ ಉಂಟಾಗಿರುವ ಸಿಟ್ಟನ್ನು ನೋಡಿರಿ. ಇನ್ನೊಬ್ಬರು ನಮಗೆ ಅಪಕಾರವನ್ನು ಮಾಡಿದರೆಂದಲ್ಲವೆ, ಅವರಮೇಲೆ ನಮಗೆ ಸಿಟ್ಟುಬರುವುದು. ಆ ಸಿಟ್ಟೆಂಬುದೇ ಎಂಥಾ ಅಪಕಾರವನ್ನು ಮಾಡುವದೆಂದೂ ನೆನಸಿಕೊಳ್ಳಿರಿ. ಅದು ಧರ್ಮವನ್ನೂ, ಅರ್ಥವನ್ನೂ ಕಾಮವನ್ನೂ ಮೋಕ್ಷವನ್ನೂ ಎಲ್ಲವನ್ನೂ ಹಾಳುಮಾಡಿ ಬಿಡುವುದು. ಇಂಥಾ ಸಿಟ್ಟಿನಮೇ-ಲೆಯೇ ನಾವೇಕೆ ಸಿಟ್ಟುಮಾಡಬಾರದು. ಈ ಲೋಕದ ಸುಖಕ್ಕಾಗಲಿ ಪರಲೋಕದ ಸುಖಕ್ಕಾಗಲಿ, ಕಾರಣವಾಗದೆ, ನಮ್ಮಲ್ಲಿ ಹುಟ್ಟಿ ನಮ್ಮ ಮೈಯ್ಯನ್ನೇ ಸುಡುವಂಥ ಸಿಟ್ಟಿಗೆ ನಾವೇಕೆ ಆಶ್ರಯವನ್ನು ಕೊಡಬೇಕು? ಇನ್ನು ನಮ್ಮ ವಿಷಯದಲ್ಲಿ ಇತರರು ಸಿಟ್ಟಿಗೆದ್ದಿದ್ದರೆ ನಮ್ಮ ತಪ್ಪಿಲ್ಲದೆ ಸುಮ್ಮಸುಮ್ಮನೆ ಅವರು ನಮ್ಮಮೇಲೆ ಸಿಟ್ಟಿಗೆ-ದ್ದಿರುವರೆಂದು ಅವರನ್ನು ದೂರಬಾರದು ಊಹೆಗೆ ಕೂಡ ನಿಲುಕದಷ್ಟು ಎಷ್ಟೋ ಹಿಂದಿನ ಕಾಲದಿಂದ ನಮ್ಮನ್ನು ಕಟ್ಟಿಹಾಕಿರುವ ಸಂಸಾರವೆಂಬ ಬಲೆಯನ್ನು ಕಳಚಿ-ಕೊಳ್ಳದೇ ಇರುವದೇ ನಮ್ಮದೊಂದು ದೊಡ್ಡ ಅಪರಾಧವೆಂದು ತಿಳಿಯಬೇಕು. ಹೀಗೆ ಹಣದ ಆಸೆಯನ್ನೂ ಸಿಟ್ಟನ್ನು ಕಳೆದುಕೊಂಡಂತೆ, ಪತ್ನೀ ಪುತ್ರರಮೇಲಿನ ಆಸಕ್ತಿ-ಯನ್ನೂ ವಿವೇಕದಿಂದ ಸಡಿಲುಮಾಡಬೇಕು. ಹೆಂಡತಿಯ ಶರೀರದ ಒಳಗಣಸ್ಥಿತಿಯನ್ನೂ ಹೊರಗಣಸ್ಥಿತಿಯನ್ನೂ ವಿಚಾರ ಮಾಡಬೇಕು. ಅದನ್ನೆಲ್ಲಾ ಮನಸ್ಸಿಗೆ ತಂದುಕೊಂಡರೆ ಹೆಂಗಸರ ದೇಹದಲ್ಲೇನು ಹುರುಳಿದೆ? ಅದೊಂದು ಮಾಂಸದ ಬೊಂಬೆ, ಅವರ ದೇಹವೆಂ-ಬುದೊಂದು ಪಂಜರ. ಅದರೊಳಗಿರುವದೆಲ್ಲಾ ನೀರು, ಕೀವು, ರಕ್ತ, ಮಾಂಸ, ಮೂಳೆ! ಇದು ಹೊರತು, ಅಲ್ಲಿ ಸುಂದರವಾದುದೇನಿದೆ? ಅವರ ಕಣ್ಣುಗಳನ್ನು ನೋಡಿ ಮೋಹ ಗೊಳ್ಳುವರಲ್ಲ! ಚರ್ಮ ಮಾಂಸ ರಕ್ತ ಇವುಗಳನ್ನೆಲ್ಲಾ ಬೇರೆ ಮಾಡಿಟ್ಟರೆ ಅಲ್ಲಿ ಮ-ನೋಹರವಾದುದೇನುಳಿಯುತ್ತದೆ? ಸ್ತ್ರೀಯರ ಸ್ತನಗಳ ಮೇಲೆ ಜೋಲಾಡುವ ಮುತ್ತಿನ ಹಾರವನ್ನು ಮೇರುಪರ್ವತದ ಶಿಖರದಿಂದ ಇಳಿದು ಸುತ್ತಿಕೊಂಡಿರುವ ಗಂ-ಗಾಪ್ರವಾಹದಂತೆ ಹೇಳುವರಲ್ಲಾ! ಆ ಸ್ತನಗಳನ್ನೆ ಶ್ಮಶಾನದಲ್ಲಿ ಕಂಡ ಕಂಡ ಕಡೆಗೆ ನಾಯಿನರಿಗಳು ಎಳೆದುಕೊಂಡು ತಿನ್ನುವದಿಲ್ಲವೆ? ಸ್ತ್ರೀಯರೆಂಬುವರು ಪಾಪವೆಂಬ ಅಗ್ನಿಜ್ವಾಲೆಯಹಾಗೆ. ಅವರು ಪುರುಷರನ್ನು ಹುಲ್ಲುಕಡ್ಡಿಯಂತೆ ಸುಟ್ಟುಹಾಕುವರು. ಅವರು ದೂರದಲ್ಲಿದ್ದರೂ ಅವರ ಕಾವು ತಟ್ಟುವದು. ಅವರ ಸಂಗವೆಲ್ಲಾ ನೀರಸ-ವಾದುದು. ಸ್ತ್ರೀಯರೆಂಬುವರು ನರಕವೆಂಬ ಅಗ್ನಿಗೆ ಹಾಕಿದ ಕಟ್ಟಿಗೆಯ ತುಂಡುಗ-ಳಂತೆ. ಮನ್ಮಥನೆಂಬ ಬೇಡನು ಪುರುಷರೆಂಬ ಪಕ್ಷಿಗಳನ್ನು ಹಿಡಿಯುವದಕ್ಕೆ ಸ್ತ್ರೀ-ಯರೆಂಬ ಬಲೆಯನ್ನೊಡ್ಡಿರುವನು. ಮನಸ್ಸೆಂಬ ಕೆಸರಲ್ಲಿ ಹೊರಳಾಡುತ್ತಿರುವ ಪುರು-ಷರೆಂಬ ಮೀನುಗಳಿಗೆ ಸ್ತ್ರೀಯರು ಗಾಳದ ತುದಿಯಲ್ಲಿರುವ ಮಾಂಸದಮುದ್ದೆ. ಸ್ತ್ರೀ-ಯರೆಂಬುವರು, ಸಮಸ್ತ ದೋಷಗಳಿಗೆ ತೌರುಮನೆ. ಹೀಗೆಂದು ಪುರುಷರು ಮನಸ್ಸಿನಲ್ಲಿ ಭಾವಿಸುತ್ತಿರಬೇಕೆಂದು ವಸಿಷ್ಠರು ಉಪದೇಶಿಸಿರುವರು. ಯಾರ ಕಣ್ಣಿಗೆ ಸ್ತ್ರೀರೂಪವು

ತೋರುವುದೋ ಅವರಿಗೆ ಸ್ತ್ರೀಯ ಬಯಕೆ ಯಾಗಬಹುದು. ಸ್ತ್ರೀರೂಪವನ್ನೆ ನೋಡದೆ ಮಾಂಸರಕ್ತಾದಿಗಳನ್ನೇ ಬಿಡಿಸಿ ಬಿಡಿಸಿ ನೋಡುವವನಿಗೆ, ಸ್ತ್ರೀಯ ಬಯಕೆ ಯಾಗುವುದಕ್ಕೆ ಕಾರಣವೇ ಇಲ್ಲ. ಸ್ತ್ರೀಯೊಬ್ಬಳನ್ನು ಬಿಟ್ಟು ಬಿಟ್ಟರೆ ಜಗತ್ತನ್ನೇ ಬಿಟ್ಟಹಾಗಾಯಿತು. ಜಗತ್ತನ್ನೆ ಬಿಟ್ಟವನು ಸುಖಿಯಾಗಿಯೇ ಆಗುವನು. ಪುತ್ರಸಂಬಂಧವಾದ ದುಃಖವನ್ನು ವಿವೇಕದಿಂದಲೇ ಕಳೆದುಕೊಳ್ಳಬೇಕು. ಮಗನು ಹುಟ್ಟದೇ ಇದ್ದರೂ ತಂದೆತಾಯಿಗಳಿಗೆ ಎಷ್ಟೋ ಪೇಚಾಟ. ಗರ್ಭದಲ್ಲಿ ಪುತ್ರೋತ್ಪತ್ತಿಯಾದರೂ ಗರ್ಭಪಾತದ ಭಯ ಒಂದು ಕಡೆ ಕೊರೆಯುವುದು. ಅದಾಗದೆ ಉಳಿದುಕೊಂಡರೆ ಹೆರಿಗೆಯಾಗುವಾಗ ಕಷ್ಟವು ತೋರುವುದು. ಅದನ್ನೂ ದಾಟಿ ಮಗನು ಹುಟ್ಟಿದನೆಂದರೆ, ಎಳೆಯಕೂಸಿಗೆ ಬಾಲಗ್ರಹ. ಆಥವ ಅಂತಹ ರೋಗಗಳು ಗಂಟುಬೀಳುವ ಸಂಕಟ. ಅದರಿಂದ ಪಾರಾಗಿ ಕೂಸು ಬೆಳೆದರೆ ಆ ಕುಮಾರನ ಮೂರ್ಖತನದಿಂದ ಮನಸ್ಸಿಗೆ ವ್ಯಥೆ ಅದನ್ನೆಲ್ಲಾ ಸಹಿಸಿಕೊಂಡು ಮುಂಜಿಯನ್ನು ಮಾಡಿದರೂ ಅವನಿಗೆ ಓದು ಹತ್ತದೇ ಹೋಗಬಹುದು. ಒಂದುವೇಳೆ ಪಂಡಿತನಾದರೂ ಮದುವೆಗೇನಾದರೂ ಅಡಚಣೆ ಯಾಗಬಹುದು. ಆಮೇಲೆ ಅವನು ಪ್ರಾಯದಿಂದ ಮುಂದುಗಾಣದೆ ಕಂಡವರ ಹೆಂಡಿರಮೇಲೆ ಕಣ್ಣುಹಾಕಬಹುದು. ಮದುವೆಯಾದರೂ ಬಡತನವು ಪೀಡಿಸಬಹುದು. ಹಣಗಾರನೇ ಆದರೂ ಅವನು ಸತ್ತರಂತು ತಂದೆಯ ದುಃಖಕ್ಕೆ ಪಾರವೇ ಇಲ್ಲ. ಇದನ್ನೆಲ್ಲಾ ಸಮಾಲೋಚನೆ ಮಾಡಬೇಕು. ಇವುಗಳಹಾಗೆ ತನ್ನಲ್ಲಿ ಇನ್ನೇನೇನು ಕೆಟ್ಟವಾಸನೆಗಳಿರುವವೋ ತಾನೇ ನೋಡಿಕೊಂಡು ಅವುಗಳನ್ನೆಲ್ಲಾ ಶಾಸ್ತ್ರದ ಸಹಾಯದಿಂದಲೂ ಯುಕ್ತಿಯ ಸಹಾಯದಿಂದಲೂ ದೋಷವನ್ನೇ ನೋಡಿ ನೋಡಿ ಅವುಗಳ ಬೇರನ್ನು ಕಿತ್ತುಹಾಕಿ ಬಿಡಬೇಕು. ಹೀಗೆ ವಾಸನೆಗಳನ್ನೆಲ್ಲಾ ಕಳೆಯುತ್ತಲೇ ಜೀವನ್ಮುಕ್ತಿ ಲಕ್ಷಣವು ತನಷ್ಟಕ್ಕೆ ತಾನೇ ತೋರುವುದು! ವಾಸನೆಗಳನ್ನೆಲ್ಲಾ ಹಿಂದಕ್ಕೆ ತಳ್ಳಬೇಕೆಂದು ಪ್ರಯತ್ನ ಮಾಡಿದರೆ ಸಾಕು. ಒಂದೊಂದು ಬೆದರಿಕೆಯಿಂದಲೇ ಅವು ಬಾಲವನ್ನು ಮುದುರಿಕೊಂಡು ಬಂದದಾರಿಯನ್ನು ಹಿಡಿಯುವವು? ಎಡೆಬಿಡದ ಪ್ರಯತ್ನದಿಂದ ವಾಸನೆಗಳನ್ನೆಲ್ಲಾ ಹಿಂದಕ್ಕೆ ಅಟ್ಟಿ ಮತ್ತೆ ಅವುಗಳು ಬಂದು ನುಗ್ಗದಂತೆ ತಡೆಮಾಡಿಕೊಂಡು ಕೂತರೆ ಜೀವನ್ಮುಕ್ತಿ ಸುಖವು, ಸ್ಫೂರ್ತಿಯಾಗುವುದು. ವಾಸನೆಗಳನ್ನು ಹಿಮ್ಮೆಟ್ಟಿಸುವುದಕ್ಕೆ ಪ್ರಯತ್ನ ಮಾಡುವುದೆಂದರೆ? ವಿಷಯಗಳ ದೋಷವನ್ನೇ ಮನಸ್ಸಿಗೆ ತಂದುಕೊಳ್ಳುತ್ತಿರುವದೇ ಹೊರತು ಮತ್ತೇನೂ ಅಲ್ಲ. ಈ ಭಾವನೆಯನ್ನು ಮನಸ್ಸಿಗೆ ಎಷ್ಟು ಹೆಚ್ಚಾಗಿ ತಂದುಕೊಂಡರೂ ಬಲಶಾಲಿಗಳಾದ ಇಂದ್ರಿಯಗಳು, ಈ ಭಾವನೆಗಳನ್ನು ತಳಕ್ಕೆ ತುಳಿದು ಬಿಡುವವು. ಇಂದ್ರಿಯಗಳೆಲ್ಲಾ ಕುರಿಮುಂಜಿಕೊಂಡು ಮನಸ್ಸನ್ನು ಹಿಡಿದುಕೊಂಡು ಓಡುವವು. ಮನಸ್ಸು ಆ ಇಂದ್ರಿಯಗಳ ಬೆನ್ನುಹತ್ತಿ ಹೋಗುವಾಗ ಗಾಳಿಯು ಸಮುದ್ರದಲ್ಲಿ ಹಡಗನ್ನು ಸೆಳೆದೊಯ್ಯುವಂತೆ ಅದು ಬುದ್ಧಿಯನ್ನು ಹಾರಿಸಿಕೊಂಡು ಹೋಗುವುದು. ಆದಕಾರಣ ಮನಸ್ಸಿಗೆ ತಂದುಕೊಂಡ ಅಷ್ಟಿಷ್ಟು ವಿವೇಕವನ್ನು ಕಾಪಾಡಿ-

ಕೊಳ್ಳಬೇಕಾದರೆ ಇಂದ್ರಿಯುಗಳನ್ನು ಬಿಗಿಹಿಡಿಯಬೇಕು. ಇಂದ್ರಿಯುಗಳನ್ನು ಬಿಗಿಹಿಡಿದರೆ ಮಾತ್ರ ಬುದ್ಧಿಯು ನೆಟ್ಟಗೆ ನಿಂತಿರುವದು. ಶಿಷ್ಯನಾದ ಯೋಗಿಯು ಸುಮ್ಮಸುಮ್ಮನೆ ಕೈಕಾಲುಗಳನ್ನು ಕೂಡ ಅಲ್ಲಾಡಿಸದೆ, ಕಣ್ಣುರೆಪ್ಪೆಯನ್ನು ಕೂಡ ಮಿಟಿಕಿಸದೆ ಒಣ-ಮಾತಿಗೆ ಸೇರದೆ ಇರುವನೆಂದು ಒಂದು ಸ್ಮೃತಿಯು ಹೇಳುವದು. ಸನ್ಯಾಸಿಯು ಮೂಕತನ, ಷಂಡತನ, ತುಂಟತನ, ಕುರುಡತನ, ಕಿವುಡತನ, ಮುಗ್ಧತನ, ಈ ಆರನ್ನೂ ಮೈಮೇಲೆ ಹಾಕಿಕೊಂಡರೆ ಮುಕ್ತನಾಗುವನು. ಅವನು ಯಾವದನ್ನು ಅನುಭವಿಸಿದರೂ ಅವನಿಗೆ ಇದು ನನಿಗೆ ಬೇಕೆನಿಸಲೂ ಬಾರದು. ಇದು ನನಿಗೆ ಬೇಡವೆನಿಸಲೂ ಬಾರದು. ಹಿತವೂ ಸತ್ಯವೂ ಆದ ಮಾತನ್ನು ಮಿತವಾಗಿ ಆಡಿದರೂ ಅವನು ಮೂಕನು.

ಹದಿನಾರು ವರುಷದ ಯುವತಿಯನ್ನಾಗಲಿ ನೂರುವರುಷದ ಮುದುಕಿಯನ್ನಾಗಲಿ ಕಂಡರೂ ಆಗತಾನೆ ಹುಟ್ಟಿದ ಹೆಣ್ಣುಮಗುವನ್ನು ಕಂಡರೆ ಹೇಗೋ ಹಾಗೆ ಯಾವನಿಗೆ ವಿಕಾರವಾಗುವದಿಲ್ಲವೋ ಅವನೇ ಷಂಡನು. ಭಿಕ್ಷಾನ್ನವನ್ನು ತರುವದಕ್ಕಾಗಲಿ ಮಲ-ಮೂತ್ರವಿಸರ್ಜನೆ ಗಾಗಲಿ ಎಂದಿಗೂ ಒಂದು ಯೋಜನಕ್ಕಿಂತ ಹೆಚ್ಚಾಗಿ ಯಾವನು ಹೋಗುವದಿಲ್ಲವೋ ಅವನೆ ತುಂಟನು. ಕುಳಿತುಕೊಂಡಿರುವಾಗಲಾಗಲಿ ಓಡಾಡುವಾಗ ಲಾಗಲಿ ನಾಲ್ಕುಮಾರಿನಾಚೆ ಯಾವನ ನೋಟವು ಹೋಗುವುದಿಲ್ಲವೋ ಅವನೇ ಕುರು-ಡನು. ಹಿತವಾದಂಥ, ಮಿತವಾದಂಥ, ಮನಸ್ಸಿಗೆ ಇಂಪಾದಂಥ, ಮತ್ತು ದುಃಖವನ್ನು ಹೋಗಲಾಡಿಸುವಂಥ ಮಾತುಗಳು ಕಿವಿಗೆ ಬಿದ್ದರೂ ಯಾವನು ಕೇಳದವನಂತೆ ಇರು-ವನೋ ಅವನೇ ಕಿವುಡನು.

ಎದುರಿಗೆ ಬೇಕುಬೇಕಾದ ವಿಷಯುಗಳಿದ್ದು ಅವುಗಳನ್ನೆಲ್ಲಾ ಅನುಭವಿಸುವಷ್ಟು ಇಂದ್ರಿಯ ಪಟುತ್ವವಿದ್ದರೂ, ಯಾವನು ನಿದ್ರೆಮಾಡುತ್ತಿರುವವನಂತೆ ಯಾವುದನ್ನೂ ಗ್ರಹಿಸದೇ ಇರುವನೋ ಅವನೇ ಮುಗ್ಧನು. ಹೀಗೆ ಯೋಗಿಯಾದವನು ಒಬ್ಬರ ವಿಷ-ಯುವನ್ನು ದೂಷಿಸಲೂ ಬಾರದು ಒಬ್ಬರನ್ನು ಭೂಷಿಸಲೂ ಬಾರದು. ಹೆಚ್ಚಾಗಿ ಮಾ-ತಾಡಬಾರದು. ಎಲ್ಲರನ್ನೂ ಸಮಬುದ್ಧಿಯಿಂದ ಕಾಣಬೇಕು. ಯಾವ ಹೆಂಗಸನ್ನೂ ಮಾತಾಡಿಸ ಬಾರದು. ಹಿಂದೆ ಕಂಡ ಹೆಂಗಸನ್ನು ನೆನಸಿಕೊಳ್ಳ ಬಾರದು. ಅವರ ವಿಚಾರವನ್ನೆ ಬಿಟ್ಟು ಬಿಡಬೇಕು. ಚಿತ್ರದಲ್ಲಿ ಬರೆದ ಹೆಂಗಸಿನ ಮೇಲೆ ಕೂಡ ಕಣ್ಣು-ಹಾಕಬಾರದು. ಒಬ್ಬನು ರಾತ್ರಿಯ ಹೊತ್ತೆ ಉಣ್ಣುವೆನೆಂದೋ, ಒಪ್ಪತ್ತು ಉಣ್ಣುವೆ-ನೆಂದೋ ಊಟವನ್ನೇ ಮಾಡುವದಿಲ್ಲವೆಂದೋ, ಮಾತನ್ನೇ ಆಡುವದಿಲ್ಲವೆಂದೋ ಒಂ-ದೊಂದು ವ್ರತವನ್ನು ನಡೆಸಬೇಕೆಂದು ಉದ್ದೇಶಮಾಡಿ ತನ್ನ ನಿಯಮಗಳನ್ನು ಸಮಾ-ಧಾನದಿಂದ ಚನ್ನಾಗಿ ನಡೆಸುತ್ತ ಅವುಗಳನ್ನೆಷ್ಟುಮಾತ್ರವೂ ಕೆಡಗೊಡದೆ ಇರುವಂತೆ, ಯೋಗಿಯಾದವನು, ಶಾಂತರೀತಿಯಿಂದ ತುಂಟತನ ಕುರುಡತನ, ಮೊದಲಾದವುಗಳನ್ನು ವಿವೇಕದಿಂದ ನಡೆಸಿಕೊಳ್ಳಬೇಕು. ಹೀಗೆ ವಿವೇಕದಿಂದ ಇಂದ್ರಿಯುಗಳನ್ನು ಬಿಗಿಹಿಡಿ-ಯುವುದನ್ನು ಬಹುಕಾಲ ಎಡೆಬಿಡದೆ ಸಾಧಿಸಿದರೆ ಗೆಳೆಯತನ ಮೊದಲಾದ ಒಳ್ಳೇ

ವಾಸನೆಗಳು ಬೇರುಬಿಟ್ಟುಕೊಂಡು ಆಸುರಸಂಪದ್ರೂಪವಾದ ಮಲಿನವಾಸನೆಗಳನ್ನು ಹೋಗಿಸಿಬಿಡುವವು. ಆಮೇಲೆ ಉಸಿರಾಡುವಿಕೆಯೂ ರೆಪ್ಪೆಗಳು ಹೊಡೆಯುವಿಕೆಯೂ ನಮ್ಮ ಪ್ರಯತ್ನವಿಲ್ಲದೇ ಸಾಗುವಂತೆ, ಗೆಳೆಯತನ ಮೊದಲಾದವುಗಳು, ತಮ್ಮಷ್ಟಕ್ಕೆ ತಾವೇ ಬೆಳಕೆಯಲ್ಲಿಲ್ಲವಾಗಿ ಅದರ ಉಪಯೋಗವನ್ನಾಗಲಿ ಅನುಪಯೋಗವನ್ನಾಗಲೀ ಮನಸ್ಸಿಗೆ ತಂದುಕೊಳ್ಳದೆ, ನಿದ್ರೆ, ಆಲಸ್ಯ, ಮನೋರಾಜ್ಯ ಮೊದಲಾದ ಚೇಷ್ಟೆಗಳನ್ನೆಲ್ಲಾ ಪ್ರಯತ್ನದಿಂದ ಬಿಟ್ಟು, ಸ್ವರೂಪಾನುಸಂಧಾನದಲ್ಲಿರುವದನ್ನೇ ಅಭ್ಯಾಸಮಾಡಬೇಕು. ಈ ಜಗತ್ತು ಚಿದ್ರೂಪವಾಗಿಯೂ, ಜಡರೂಪವಾಗಿಯೂ, ಎರಡು ಬಗೆಯಲ್ಲಿಯೂ ಬೆಳಗುತ್ತಿರುವುದು ನಿಜ. ಮತ್ತು ಶಬ್ದಸ್ಪರ್ಶಮೊದಲಾದ ಹೊರಗಣ ಜಡವಸ್ತುಗಳನ್ನು ಅರಿಯಲೆಂದೇ ದೇವರು ಇಂದ್ರಿಯಗಳನ್ನು ಕೊಟ್ಟಿರುವದೇ ನಿಜ. ಆದರೆ ಜಡವಸ್ತುಗಳೆಂಬುವೆಲ್ಲಾ ಚಿದ್ವಸ್ತುವಿನ ಆಧಾರದಿಂದಲೇ ತೋರುತ್ತಿರುವವು. ಜಡವಸ್ತುಗಳು ಕಾಣುವಾಗಲೆಲ್ಲಾ ಜ್ಞಾನಪೂರ್ವಕವಾಗಿಯೇ ಕಾಣುವವು. ಜ್ಞಾನದ ಬೆಳಕಿನಿಂದಲೇ ಎಲ್ಲವೂ ಬೆಳಗುವವೆಂದು ಶ್ರುತಿ ಇರುವದು. ಆದಕಾರಣ ಜಡವಸ್ತುಗಳನ್ನು ಕಂಡಾಗಲೆಲ್ಲಾ ಈ ಜಡರೂಪವು ಬರೀ ತೋರಿಕೆಯ ಮಾತ್ರದ್ದೆಂದೂ ಇದಕ್ಕೆ ಆಧಾರವಾದ ಚಿದ್ರೂಪವೇ ನಿಜವಾದುದೆಂದೂ ಮನಸ್ಸಿನಲ್ಲಿ ಅಂದುಕೊಳ್ಳಬೇಕು. ಬಲಿಚಕ್ರವರ್ತಿಗೂ ಶುಕ್ರನಿಗೂ ನಡೆದ ಮಾತುಗಳಲ್ಲಿ ಈ ಅಭಿಪ್ರಾಯವು ಸ್ಪಷ್ಟವಾಗಿಬಂದಿದೆ. ಈಗ ಇಲ್ಲಿರುವುದೇನು? ಇದರ ಸ್ವರೂಪವೇನು? ಅದರ ಸ್ವರೂಪವೇನು? ನೀನುಯಾರು? ನಾನುಯಾರು? ಈ ಲೋಕಗಳು ಯಾರು? ಎಂದು ಬಲಿಯು ಕೇಳಿದಾಗ, ಶುಕ್ರಾಚಾರ್ಯರು ಇಲ್ಲಿರುವುದೂ ಚಿತ್ತು, ಇದೂ ಚಿತ್ತು, ಅದೂ ಚಿತ್ತು, ನೀನೂ ಚಿತ್ತು, ನಾನೂ ಚಿತ್ತು ಈ ಲೋಕಗಳೂ ಕೂಡ ಎಲ್ಲಾ ಚಿತ್ತೆ ಎಂದು ಉತ್ತರವನ್ನು ಹೇಳಿರುವರು. ಅಕ್ಕಸಾಲೆಯು ಬಂಗಾರದ ಬಳೆಯನ್ನು ಮಾರುವಾಗ ಅದರ ದುಂಡು ಹೇಗಿದೆ ಎಂಬುದರ ಕಡೆ ನೋಡದೆ, ಅದರ ತೂಕವೆಷ್ಟು? ಅದರ ಬಣ್ಣವೆಷ್ಟು? ಎಂಬ ಕಡೆಯಲ್ಲಿಯೇ ಮನಸ್ಸನ್ನಿಡುವಂತೆ ಚಿನ್ಮಾತ್ರದಲ್ಲಿಯೇ ಮನಸ್ಸನ್ನು ನೆಲೆಗೊಳಿಸಬೇಕು. ಕೊನೆಕೊನೆಗೆ ಜಡರೂಪದ ವಿಚಾರವೇ ಮನಸ್ಸಿನೊಳಕ್ಕೆ ಹೋಗದೆ ಉಸಿರಾಡುವಷ್ಟು ಹುಟ್ಟುಗುಣವಾಗಿ ಚಿನ್ಮಾತ್ರದಲ್ಲಿಯೇ ಮನಸ್ಸು ಇದ್ದುಬಿಡುವಷ್ಟಾಗುವವರೆಗೂ ಅದರ ಅಭ್ಯಾಸವನ್ನು ಬೆಳೆಸಿಕೊಳ್ಳುತ್ತಿರಬೇಕು. ಮೊದಲೇ ಈ ಅಭ್ಯಾಸವನ್ನು ಹಿಡಿದು ಮಲಿನವಾಸನೆಯನ್ನು ಕಳೆದುಕೊಳ್ಳದೆ ನಡುವೆ ಗೆಳೆಯತನ ಮೊದಲಾದ ಶುಭವಾಸನೆಗಳನ್ನೇಕೆ ಬೆಳೆಸಿಕೊಳ್ಳಬೇಕೆಂದರೆ? ಹಾಗೆ ಮಾಡಿದರೆ, ಆ ಚಿದ್ವಾಸನೆಯು ಧೃಡವಾಗಿ ನಿಲ್ಲುವದಿಲ್ಲ. ಕಳಪಾಯ ಗಟ್ಟಿಯಾಗಿಲ್ಲದಿದ್ದರೆ. ಅದರಮೇಲೆ ನಿಲ್ಲಿಸಿದ ಗೋಡೆ ಕಂಬ ಮೊದಲಾದವುಗಳು ಹೇಗೆ ನಿಂತಾವು? ಅಥವ ಭೇದಿಯ ಔಷಧಿಯನ್ನು ಕೊಟ್ಟು, ಹೊಟ್ಟೆಯೊಳಗಣ ಹೊಲಸನ್ನೆಲ್ಲಾ ಹೊರಕ್ಕೆ ಹಾಕದೆ ಔಷಧವನ್ನು ತಿಂದಮಾತ್ರಕ್ಕೇ ಆರೋಗ್ಯಉಂಟಾದೀತೇ? ಕೊನೆಗೆ ಚಿನ್ಮಾತ್ರ ವಾಸನೆಯನ್ನೂ ಮಾರಬೇಕೆಂದು ಒಂದು ಶ್ರುತಿಹೇಳುವುದಲ್ಲ! ಎಂದರೆ?

ಅದರ ಅರ್ಥ ಬೇರೆ, ಚಿನ್ಮಾತ್ರವಾಸನೆಯನ್ನು ಬಿಟ್ಟರೆ ಬೇರೊಂದೆಂಬುದಿಲ್ಲವೇ ಇಲ್ಲ. ಅದರ ಅರ್ಥವೇನಂದರೆ? ಚಿನ್ಮಾತ್ರವಾಸನೆ ಎರಡುಬಗೆ, ಮನಸ್ಸು ಮತ್ತು ಬುದ್ಧಿಯಿಂದ ಕೂಡಿದ ಚಿನ್ಮಾತ್ರವಾಸನೆಯೊಂದು, ಮನಸ್ಸು ಮತ್ತು ಬುದ್ಧಿಗಳ ಸಂಪರ್ಕವಿಲ್ಲದ ಚಿನ್ಮಾತ್ರವಾಸನೆ ಇನ್ನೊಂದು. ಮನಸ್ಸೆಂಬುದು ಚಿನ್ಮಾತ್ರವಾಸನೆಯನ್ನು ಹಿಡಿಯುವುದಕ್ಕೆ ಸಾಧನ. ಬುದ್ಧಿಯೆಂಬುದು ಆ ವಾಸನೆಯನ್ನು ಹಿಡಿದಿರುವೆನೆಂಬ ತಿಳುವಳಿಕೆಯ ಉಪಾಧಿ. ಮನಸ್ಸು ಮತ್ತು ಬುದ್ಧಿಗಳ ಸಂಪರ್ಕವಿಲ್ಲದ ಚಿನ್ಮಾತ್ರವಾಸನೆಯೆಂದರೆ? ನಾನು ತಪ್ಪದೆ ಒಂದೇಮನಸ್ಸಿನಿಂದ ಚಿತ್ಸ್ವರೂಪವನ್ನು ನೋಡುತ್ತಿರುವೆನೆಂದು ಭಾವಿಸುವುದು. ಇದು ಮೊದಲಿನ ಚಿನ್ಮಾತ್ರವಾಸನೆ ಇದನ್ನು ಧ್ಯಾನವೆನ್ನಬಹುದು. ಆದಕಾರಣ ಇದನ್ನು ಮೀರಬೇಕು, ಈ ಮೊದಲಿನ ಚಿನ್ಮಾತ್ರವಾಸನೆಯನ್ನು ಅಭ್ಯಾಸಮಾಡುತ್ತ ಮಾಡುತ್ತ ಕೊನೆಕೊನೆಗೆ ನಾನು ಚಿನ್ಮಾತ್ರವಾಸನೆಯಲ್ಲಿರುವೆನೆಂಬ ಅರಿವು ಕೂಡ ಇಲ್ಲದೇಹೋಗಿ ಸಮಾಧಿಸ್ಥಿತಿಯು ಪ್ರಾಪ್ತವಾಗುವುದು? ಧ್ಯಾನದ ಮತ್ತು ಸಮಾಧಿಯ ಲಕ್ಷಣವನ್ನು ಪತಂಜಲಿಗಳು ಹೇಳಿದ್ದಾರೆ. ಆ ಒಂದು ವಸ್ತುವಿನಲ್ಲಿಯೇ ತಿಳಿವಳಿಕೆಯು ಎಡೆಬಿಡದೆ ಹರಿಯುತ್ತಿದ್ದರೆ ಧ್ಯಾನವೆನಿಸುವುದು. ಯಾವ ರೂಪವೂ ತೋರದೆ, ಅದರ ಅರ್ಥಮಾತ್ರ ತೋರುತ್ತಿದ್ದರೆ ಸಮಾಧಿ ಎನಿಸುವುದು. ಆ ಸಮಾಧಿಯನ್ನು ಬಹುಕಾಲ ಒಂದೇ ಸಮನಾಗಿ ಅಭ್ಯಾಸಮಾಡಿಕೊಂಡು ತಾನು ಚಿನ್ಮಾತ್ರವಾಸನೆಯಲ್ಲಿರುವೆನೆಂಬ ಅರಿವನ್ನು ಮೀರಬೇಕೆಂಬ ಪ್ರಯತ್ನವನ್ನೂ ಬಿಡಬೇಕು. ಹೀಗೆಯೇ ಆ ಬಿಡಬೇಕೆಂಬ ಪ್ರಯತ್ನವನ್ನೂ ಬಿಡಬೇಕೆಂದು ಮುಂತಾಗಿ ಹೇಳಹೋದರೆ ಗತಿಯೇನಂದರೇ? ಹಾಗಲ್ಲ. ಆ ಪ್ರಯತ್ನವೇ ಚಿಲ್ಲದ ಬೀಜದ ಪುಡಿಯಂತೆ ಉಳಿದವುಗಳನ್ನು ಸೆಳೆದುಕೊಂಡು ತಾನು ಹೋಗಿಬಿಡುವುದು. ಚಿಲ್ಲದ ಬೀಜದ ಪುಡಿಯನ್ನು ಕೊಳಕಾದ ನೀರಿಗೆ ಹಾಕಿದರೆ, ಅದು ಇತರ ಕಸವನ್ನು ಇಲ್ಲದಂತೆ ಮಾಡಿ ತಾನೂ ಇಲ್ಲದಂತಾಗುವುದು. ಆ ಅರಿವನ್ನು ಮೀರುವ ಪ್ರಯತ್ನವು ಹಾಗಿರುವುದು. ಆ ಪ್ರಯತ್ನವು ಇಲ್ಲದಂತಾಯಿತೆಂದರೆ ಶುಭವಾಸನೆಗಳು ಮಲಿನವಾಸನೆಗಳ ದಾರಿಯನ್ನೇ ಹಿಡಿದು ಹೋಗಿ ತಾವೂ ಕಾಣದಂತಾಗುವುದರಿಂದ, ಮನಸ್ಸು ನಿರ್ವಾಸನಾಸ್ವರೂಪವಾಗುವುದು. ಇದನ್ನೆಲ್ಲಾ ತಿಳಿದೇ ವಸಿಷ್ಠರು ರಾಮನನ್ನು ಕರೆದು, ರಾಮಾ, ವಾಸನೆ ಇರುವುದರಿಂದ, ಬಂಧ, ವಾಸನೆ ಹೋಗುವುದರಿಂದ ಮುಕ್ತಿ. ಆದಕಾರಣ, ನೀನು ವಿವೇಕದಿಂದ ಮನಸ್ಸನ್ನು ನಿರ್ವಾಸನಾ ಸ್ವರೂಪವಾಗಿ ಮಾಡಿಕೊ, ಪರಮಾತ್ಮಸ್ವರೂಪವನ್ನು ಚನ್ನಾಗಿ ಮನಸ್ಸಿಗೆ ಹಚ್ಚಿಕೊಳ್ಳುವುದರಿಂದ ವಾಸನೆಗಳು ಕರಗಿ ಹೋಗುವುವು. ವಾಸನೆಗಳು ಹೋದವೆಂದರೆ ಮನಸ್ಸು ತನಗೆತಾನೆ ಕಣ್ಮರೆಯಾಗುವುದು. ಕಣ್ಣು, ಕಿವಿ, ಮೊದಲಾದವುಗಳೆಲ್ಲಾ ಕೆಲಸಮಾಡುತ್ತಿದ್ದರೂ ಯಾವನ ಮನಸ್ಸು ಯಾವುದೊಂದು ವೃತ್ತಿಯನ್ನೂ ಪಡೆಯುವುದಿಲ್ಲವೋ, ಯಾವನ ಇಂದ್ರಿಯಗಳು ವಿಷಯಗಳ ಮೇಲೆ ಹಾಯದೆ ಸುಮ್ಮನಿರುವವೋ, ಒಂದು ವಕ್ಷ ವಿಷಯಗಳ ಮೇಲೆ ಹೋದರೂ, ಯಾವನಿಗೆ ಅವುಗಳ ಬಯಕೆ ತೋರುವುದಿಲ್ಲವೋ,

ವನು ಜೀವನ್ಮುಕ್ತನು. ಗಾಢನಿದ್ರೆಯಲ್ಲಿ ಹೇಗೆ ಮನಸ್ಸು ಯಾವ ವೃತ್ತಿಯನ್ನೂ ಪಡೆಯದೇ ಇರುವುದೋ ಹಾಗೆಯೇ ಜೀವನ್ಮುಕ್ತನ ಮನಸ್ಸು ಎಚ್ಚರಿಕೆಯಲ್ಲಿಯೂ ವೃತ್ತಿಯನ್ನು ಪಡೆಯದೇ ಇರುವುದು. ಆದರೆ ಗಾಢನಿದ್ರೆಯಲ್ಲಿದ್ದಂತೆ ಏನನ್ನೂ ತಿಳಿಯದೇ ಇರುವುದಿಲ್ಲ. ಪರಮಾತ್ಮಸ್ವರೂಪವಿಷಯಕವಾದ ಜಾಗರೂಕತೆಯನ್ನು ಇಟ್ಟುಕೊಂಡೇ ಇರುವುದು. ಮನಸ್ಸಿನಿಂದ ಎಲ್ಲವನ್ನೂ ಹೊರಡಿಸಿಬಿಟ್ಟು, ಯಾವುದನ್ನೂ ಹಚ್ಚಿಕೊಳ್ಳದೆ ಮಹಾಬುದ್ಧಿಶಾಲಿಯಾಗಿರುವವನೇ ಜೀವನ್ಮುಕ್ತನು ಅವನೇ ಪರಮೇಶ್ವರನು. ಅವನು ಸಮಾಧಿಯನ್ನಾದರೂ ತಂದುಕೊಂಡಿರಲಿ, ಏನಾದರೊಂದು ಕರ್ಮವನ್ನಾದರೂ ಮಾಡುತ್ತಿರಲಿ, ಅಥವ ಏನೂಮಾಡದೇ ಇರಲಿ, ಮನಸ್ಸಿನ ಆಶೆಗಳನ್ನೆಲ್ಲಾ ಹೊರಕ್ಕೆ ಓಡಿಸಿದ್ದರೆ ಸರಿ. ಅವನೇ ಮುಕ್ತನು. ಎಲ್ಲಾ ಕರ್ಮಗಳನ್ನು ಬಿಟ್ಟು ಸುಳಿತುಕೊಳ್ಳುವುದರಿಂದಲೂ ಅವನಿಗೊಂದು ಪ್ರಯೋಜನವಿಲ್ಲ, ಏನಾದರೊಂದನ್ನು ಮಾಡುವುದರಿಂದಲೂ ಪ್ರಯೋಜನವಿಲ್ಲ. ಯಾವನ ಮನಸ್ಸಿನ ವಾಸನೆಗಳೆಲ್ಲಾ ಹಾರಿಹೋಗಿವೆಯೋ ಅವನು ಜಪತಪಗಳನ್ನು ಮಾಡಬೇಕಾದುದಿಲ್ಲ, ಅವನು ಶಾಸ್ತ್ರವಿಚಾರಮಾಡಿದ್ದೂ ಸಾಕು, ಅವುಗಳನ್ನು ತಿಳಿದುಕೊಂಡದ್ದೂ ಸಾಕು, ವಾಸನೆಗಳನ್ನೆಲ್ಲ ಹೊರಕ್ಕೆ ಹೊರಡಿಸಿ ತೆಪ್ಪಗಿರುವುದಕ್ಕಿಂತ ಹೆಚ್ಚಿನದು ಯಾವುದೂ ಇಲ್ಲ. ಮನುಷ್ಯನ ವಾಸನೆಗಳೆಲ್ಲಾ ಹೋದಮೇಲೆ ಬದುಕಿರುವಿಕೆಗೆ ಕಾರಣವಾದ ವ್ಯವಹಾರವೇ ಇಲ್ಲವಂತಾದೀತೆಂದು ಹೆದರಬೇಕಾದುದಿಲ್ಲ. ಏನು? ಕಣ್ಣು ಕಿವಿ ಮೊದಲಾದವುಗಳ ವ್ಯವಹಾರವು ನಿಂತುಹೋಗುವುದೋ? ಮನಸ್ಸಿನ ವ್ಯವಹಾರವು ನಿಂತುಹೋಗುವುದೋ? ಇಂದ್ರಿಯಗಳ ವ್ಯವಹಾರವು ನಿಲ್ಲುವದಿಲ್ಲವೆಂಬರ್ಥವನ್ನು ಉದ್ದಾಲಕನು ಹೇಳಿರುತ್ತಾನೆ. ವಾಸನೆ ಏನೂ ಇಲ್ಲದಿದ್ದರೂ ಕಣ್ಣು ಕಿವಿ ಮೊದಲಾದ ಇಂದ್ರಿಯಗಳು ತಮ್ಮಷ್ಟಕ್ಕೆ ತಾವೇ ತಮ್ಮ ತಮ್ಮ ಪ್ರಯೋಜನಕ್ಕಾಗಿ ಹೊರಬಿದ್ದೇಳುತ್ತವೆ. ಅವುಗಳು ಹೊರಕ್ಕೆ ನುಗ್ಗುವುದಕ್ಕೆ ವಾಸನೆಯೇನೂ ಕಾರಣವಲ್ಲ. ಮನಸ್ಸಿನ ವ್ಯವಹಾರವು ನಿಲ್ಲುವದಿಲ್ಲವೆಂಬರ್ಥವನ್ನು ವಸಿಷ್ಠರು ಹೇಳಿದ್ದಾರೆ. ಕಣ್ಣು ಕಿವಿ ಮೊದಲಾದವುಗಳು ಹೊರಬಿದ್ದು ವಿಷಯಗಳನ್ನು ಆವರಿಸಿಕೊಂಡಾಗ ಮನಸ್ಸು ಅವುಗಳ ಮೇಲೆ ಆಸಕ್ತಿ ಇಲ್ಲದೆ ತಾನೂ ಹೊರಬಿದ್ದು ವಿಷಯಗಳನ್ನು ಗ್ರಹಿಸುವುದು. ಮೊದಲು ವಾಸನೆಯು ವೇಗಕ್ಕೆ ಕಟ್ಟುಬಿದ್ದು ಆಸಕ್ತಿಯಿಂದ ಬಾಯಿನೀರು ಸುರಿಯುತ್ತ ಹೊರಬೀಳುತ್ತಿತ್ತು. ಈಗ ಆ ಆಸಕ್ತಿ ಇಲ್ಲ. ಈ ವಿಧವಾಗಿ ಮನಸ್ಸು ಹೊರಬಿದ್ದು ಪ್ರಾರಬ್ಧವನ್ನು ಅನುಭವಿಸುವುದು. ಕಳ್ಳನನ್ನು ಕಳ್ಳನೆಂದು ತಿಳಿದು ಬಳಕೆಮಾಡಿಕೊಂಡರೆ ಅವನು ನಮ್ಮ ಭಾಗಕ್ಕೆ ಕಳ್ಳನಾಗದೆ ನಿಜವಾದ ಗೆಳೆಯನೇ ಆಗುವಂತೆ ತಿಳಿದು ಅನುಭವಿಸುವ ಪ್ರಾರಬ್ಧಭೋಗವು ತೃಪ್ತಿಗೆ ಸಾಧನವಾಗುವುದು. ತನಗೆ ಗೊತ್ತೇ ಇಲ್ಲದೆ ದಾರಿಯಲ್ಲಿ ಸಿಕ್ಕಿದ ಊರನ್ನು ದಾರಿಗರು ನೋಡುವಂತೆ ಜ್ಞಾನಿಗಳು ಭೋಗಸಾಮಗ್ರಿಯನ್ನು ತಿಳಿಯುತ್ತಾರೆ. ವಾಸನೆಯಿಂದ ಕೂಡಿದ ಭೋಗಕ್ಕಿಂತ ವಾಸನೆ ಇಲ್ಲದ ಭೋಗದಲ್ಲಿ ಹೆಚ್ಚುಗಾರಿಕೆ ಏನೆಂದರೆ? ಭಂಗಾ-

ರದ ಕಮಲವು ರಾತ್ರೆಯ ಹೊತ್ತಿನಲ್ಲಿ ಬಾಡದೆ ಇರುವಂತೆ ಎಂಥಾ ಕಷ್ಟಬಂದರೂ ವಾಸನಾರಹಿತರು ಸೊರಗುವುದಿಲ್ಲ. ಅವಶ್ಯಕವಿಲ್ಲದ್ದನ್ನು ಬಯಸುವದಿಲ್ಲ. ಯೋಗ್ಯವಾದ ನಡವಳಿಕೆಯಲ್ಲಿ ಸಂತೋಷದಿಂದಿರುವರು. ಮಹನೀಯರಾದ ಅವರು ಸಮುದ್ರದಂತೆ ಯಾವಾಗಲೂ ತಮ್ಮ ಗಡಿಯಲ್ಲಿ ತಾವಿರುವರು. ಅವರಿಗೆ ಇನ್ನೊಂದರ ಹಂಬಲಿಲ್ಲ. ಸೂರ್ಯನಂತೆ ಅವರು ತಮ್ಮನಿಯಮವನ್ನು ಬಿಡುವುದಿಲ್ಲ. ಜನಕನು ಸಮಾಧಿಯಿಂದ ಎದ್ದಮೇಲೆಯೂ ಹೀಗೆ ಇದ್ದನೆನ್ನುವರು. ಸ್ವಸ್ಥವಾದ ಮನಸುಳ್ಳಂಥ ಜನಕನು ಎಷ್ಟೋ ಹೊತ್ತು ಸುಮ್ಮನೆ ಇದ್ದು, ಎದ್ದಮೇಲೆ ಇಲ್ಲಿ ನಾನು ಯಾವುದಕ್ಕೆ ಬಾಯಿನೀರು ಕರೆಯಬೇಕಾಗಿದೆ? ಪ್ರಯತ್ನಮಾಡಿ ನಾನು ಏನನ್ನು ಪಡೆಯಬೇಕಾಗಿದೆ? ಸ್ವಭಾವದಿಂದಲೇ ಶುದ್ಧವಾಗಿರುವ ಚಿತ್ಸ್ವರೂಪನಾದ ನನ್ನಲ್ಲಿ ಕಲ್ಪನೆ ಹುಟ್ಟುವದು ಹೇಗೇ? ಇಂಥಾದೊಂದಿಲ್ಲವೆಂದು ನಾನು ಬಯಸಲಾರೆ, ಇರುವದೊಂದನ್ನು ಬಿಡಬೇಕೆನ್ನಲಾರೆ, ನನ್ನಷ್ಟಕ್ಕೆ ನಾನು ಆತ್ಮಸ್ವರೂಪದಲ್ಲಿದ್ದುಬಿಡುತ್ತೇನೆ ಏನಿದೆಯೋ ಆದಾಗಲಿ, ಎಂದು ವಿಚಾರಮಾಡಿ ಸೂರ್ಯನು, ಹಗಲನ್ನು ಮಾಡುವದಕ್ಕೆ ಹುಟ್ಟುವಂತೆ ಅನಾಸಕ್ತನಾಗಿ, ತಾನುಮಾಡಬೇಕಾದ ಕರ್ಮಗಳನ್ನು ಮಾಡುವುದಕ್ಕೆ ಹೊರಟವನು, ಜೀವನ್ಮುಕ್ತನು. ಆತನು ಮುಂದಿನದನ್ನು ಹಂಬಲಿಸುವದಿಲ್ಲ, ಹಿಂದಿನದನ್ನು ನೆನಸುವದಿಲ್ಲ, ಆಗಿನ ಘಳಿಗೆಯನ್ನು ನಗುಮುಖದಿಂದ ಕಳೆಯುತ್ತಾನೆ. ಹೀಗೆವಾಸನೆಯನ್ನು ಕಳೆದುಕೊಳ್ಳುವುದರಿಂದ ಜೀವನ್ಮುಕ್ತಿಸುಖವು ಸ್ಫೂರ್ತಿಯಾಗುವುದೆಂಬ ಮಾತಿಗೆ ಸಂಶಯವಿಲ್ಲ.

ಇಲ್ಲಿಗೆ ಶ್ರೀಮದ್ವಿದ್ಯಾರಣ್ಯ ಮಹಾಮುನಿ ಕೃತವಾದ ಜೀವನ್ಮುಕ್ತಿ
ವಿವೇಕವೆಂಬ ಗ್ರಂಥದಲ್ಲಿ ವಾಸನಾಕ್ಷಯವೆಂಬ
ಮೂ ರ ನೆ ಯ ಪ್ರ ಕ ರ ಣ ವು
ಮು ಗಿ ದು ದು.

ಓಂಸ್ವಸ್ತಿ.



ಶ್ರೀಃ

—*—

# ೪. ಸ್ವರೂಪಸಿದ್ಧಿ ಪ್ರಯೋಜನ ಪ್ರಕರಣ.

—+—

ಜೀವನ್ಮುಕ್ತಿ ಎಂದರೇನು? ಜೀವನ್ಮುಕ್ತಿ ಇರುವದೆಂಬುದಕ್ಕೆ ಪ್ರಮಾಣವೇನು? ಜೀವನ್ಮುಕ್ತಿಯನ್ನು ಪಡೆದುಕೊಳ್ಳುವದು ಹೇಗೆ? ಈ ಮೂರು ಪ್ರಶ್ನೆಗಳಿಗೂ ಇದುವರೆಗೂ ಉತ್ತರವನ್ನು ಹೇಳಿದ್ದಾಯಿತು. ಜೀವನ್ಮುಕ್ತಿಯನ್ನು ಪಡೆದುಕೊಳ್ಳುವದರಿಂದ ಪ್ರಯೋಜನ ವೇನೆಂಬ ನಾಲ್ಕನೇ ಪ್ರಶ್ನೆಗೆ ಈಗ ಹೇಳಬೇಕಾಗಿರುವದು. ಜೀವನ್ಮುಕ್ತಿಯನ್ನು ಪಡೆದುಕೊಳ್ಳುವದರಿಂದ ಜ್ಞಾನರಕ್ಷೆ, ತಪಸ್ಸು, ದೂರಿಗೆ ಸಿಕ್ಕದೆ ಇರುವದು, ದುಃಖನಾಶ ಮತ್ತು ಸುಖಾವಿರ್ಭಾವ ಎಂಬ ಐದು ಪ್ರಯೋಜನಗಳುಂಟಾಗುವವು. ಮನಸ್ಸಿಗೆ ನಂಬಿಕೆಯಾಗಿ ಜ್ಞಾನವಾದ ಮೇಲೆ ಅದಕ್ಕೆ ಇನ್ನೇನು ಬಾಧೆ ಬಂದೀತು? ರೂಪಬಾಧೆಯೂ ಅದಕ್ಕೆ ತಪ್ಪದೆ ಇರುವದಕ್ಕಾಗಿ ಜ್ಞಾನವನ್ನು ಕಾಪಾಡಿಕೊಳ್ಳಬೇಕಾಗಿರುವದು. ಅಂದರೆ ಮನಸ್ಸನ್ನು ಸಮಾಧಾನದಲ್ಲಿ ಇಟ್ಟುಕೊಳ್ಳದಿದ್ದರೆ ಹಾಗೆ ಹೇಗೆ ಎಂಬ ಸಂದೇಹವೂ, ಇದ್ದುದನ್ನು ಇದ್ದಹಾಗೆ ಭಾವಿಸದೆ ತಪ್ಪು ತಪ್ಪಾಗಿ ಭಾವಿಸುವದೂ ಇಂಥವುಗಳೆಲ್ಲಾ ಆಗುವ ಸಂಭವಗಳುಂಟು. ಶ್ರೀರಾಮನು ತತ್ವಜ್ಞಾನವನ್ನು ಪಡೆದವನೇ ಆಗಿದ್ದರೂ ಅವನು ತೆಪ್ಪಗೆ ಕುಳಿತುಕೊಳ್ಳುವದಕ್ಕೆ ಮೊದಲು ಅವನಿಗೆ ಸಂಶಯವು ಬಾಧಿಸುತ್ತಿತ್ತೆಂದು ವಿಶ್ವಾಮಿತ್ರರು ಉದಾಹರಿಸಿದ್ದಾರೆ ನೋಡಿರಿ. “ಹೇ ರಾಮ, ನಿನ್ನಷ್ಟು ತಿಳಿದವರು ಯಾರಿದ್ದಾರೆ? ನಿನಗೆ ಇನ್ನು ತಿಳಿಯಬೇಕೇಕಾದುದೆಂಬುದು ಏನು? ನಿನ್ನ ಸೂಕ್ಷ್ಮವಾದ ಬುದ್ಧಿಯಿಂದ ನೀನು ಎಲ್ಲವನ್ನೂ ತಿಳಿದುಕೊಂಡವನಾಗಿದ್ದಿ. ನೀನು ತಿಳಿಯತಕ್ಕದ್ದನ್ನು ತಿಳಿದಿದ್ದರೂ ಭಗವಾನ್ ವ್ಯಾಸರಮಕ್ಕಳಾದ ಶುಕರಿಗೆ ಹೇಗೋ ಹಾಗೆ ನಿನಗೆ ವಿಶ್ರಾಂತಿಮಾತ್ರ ಬೇಕಾಗಿದೆ.” ಶುಕರು ಮೊದಲು ತಾವೇ ತತ್ವವನ್ನು ತಿಳಿದುಕೊಂಡಿದ್ದರು. ಆದರೂ ಅದರಲ್ಲೇ ಒಂದು ಸಂಶಯವು ಬಾಧಿಸುತ್ತಿತ್ತು. ಅವರು ಅದನ್ನು ಕಳೆದುಕೊಳ್ಳುವದಕ್ಕಾಗಿ ತಂದೆಯನ್ನು ಕೇಳಿದರು. ಇವರು ತಿಳಿದುಕೊಂಡಿದ್ದುದನ್ನು ತಂದೆಯೂ ಹೇಳಿದನು. ಆದರೂ ಸಂಶಯವು ಹೋಗಲಿಲ್ಲ. ಆಗ ಅವರು ಜನಕನ ಬಳಿಗೆ ಹೋಗಿ ಕೇಳಿಕೊಂಡರು. ಅವನೂ ಹಾಗೆಯೇ ಹೇಳಿದನು. ಆಗ ಅವರು ಜನಕನನ್ನು ನೋಡಿ “ಈ ವಿಷಯವನ್ನು ನಾನು ಮೊದಲೇ ನನ್ನ ವಿವೇಕದಿಂದಲೇ ತಿಳಿದುಕೊಂಡಿದ್ದೆನು. ನಾನು ನನ್ನ ತಂದೆಯನ್ನು ಕೇಳಿದ್ದಾಗ ತಂದೆಯೂ ನನಗೆ ಇದನ್ನೇ ಹೇಳಿದನು. ನೀನು ಇಂಥ ವಿಷಯಗಳನ್ನು ಬಹು ಚೆನ್ನಾಗಿ ಬಲ್ಲವನು. ನೀನೂ ಹೀಗೆಯೇ ಹೇಳುತ್ತಿ. ಶಾಸ್ತ್ರಗಳಲ್ಲೆಲ್ಲಾ ಹುಡುಕಿ ನೋಡಿದರೂ ಇದೇ ಅರ್ಥವೇ ತೋರುತ್ತದೆ. ನಮ್ಮ ವಿಕಲ್ಪದಿಂದಲೇ ಹುಟ್ಟಿದ ಈ ಹಾಳು ಸಂಸಾರವು ನಮ್ಮ ವಿಕ-

ಲ್ಪವನ್ನು ಕಳೆದುಕೊಳ್ಳುವುದರಿಂದಲೇ ನಾಶವಾಗುವುದು. ನಿಜ. ಆದುದರಿಂದ ಎಲೈ ಜನಕಮಹಾರಾಯನೆ ಇದೇ ಸಂಶಯವೋ? ಹೇಗೆಂಬುದನ್ನು ಖಂಡಿತವಾಗಿ ಹೇಳು. ಹರಿದಾಡುತ್ತಿರುವ ಮನಸ್ಸಿನಿಂದಾದ ಈ ಸಂಸಾರವು ನಿನ್ನಿಂದಲೇ ನಾಶವಾಗಬೇಕಾಗಿದೆ ಎಂದು ಕೇಳಿದನು. ಆಗ ಜನಕನು " ಶುಕ, ನೀನು ಈಗ ಹೇಳಿದ ಮಾತಿಗೆ ಎರಡಿಲ್ಲ. ನಿನ್ನನ್ನು ನೀನೆ ಮೊದಲು ತಿಳಿದುಕೊಂಡೆ. ಮತ್ತು ತಂದೆಯಿಂದಲೂ ಇದನ್ನೇ ಕೇಳಿದೆ. ಅಖಂಡಜ್ಞಾನಸ್ವರೂಪನಾದ ಆತ್ಮನೊಬ್ಬನಿರುವನೇ ಹೊರತು ಇನ್ನೊಂದೆಂಬುದೆಂದಿಗೂ ಇಲ್ಲ. ಅದು ಹಾಗಿರುವುದೆಂದೂ ಇದು ಹೀಗಿರುವುದೆಂದೂ ನಾವು ಮನಸ್ಸಿಗೆ ತಂದುಕೊಳ್ಳುವುದರಿಂದಲೇ ವಿಷಯಗಳೆಂಬ ಸರಿಗುಣಿಕೆಯೊಳಕ್ಕೆ ಶಿಕ್ಕಿಕೊಳ್ಳುತ್ತೇವೆ. ಯಾವುದನ್ನೂ ಮನಸ್ಸಿಗೆ ತಂದುಕೊಳ್ಳದೆ ಬಿಟ್ಟರೆ ನಾವು ಯಾವ ಕಟ್ಟಿನೊಳಕ್ಕೂ ಸಿಕ್ಕಿರುವುದೇ ಇಲ್ಲ. ನೀನು ಮಹಾತ್ಮ; ತಿಳಿಯತಕ್ಕದ್ದನ್ನು ಚೆನ್ನಾಗಿ ತಿಳಿದಿರುವೆ. ಯಾವ ವಿಷಯ ಸುಖವೂ ಬೇಡವೆಂಬ ವೈರಾಗ್ಯವು ನಿನಗೆ ಉಂಟಾಗಿದೆ. ಇಷ್ಟೇ ಅಲ್ಲ. ಇಂದ್ರಿಯಗಳಿಗೆ ಗೋಚರವಾಗುವಂಥ ಯಾವ ವಿಷಯದ ಮೇಲೂ ನಿನಗೆ ಅಕ್ಕರೆ ಇಲ್ಲ. ನೀನು ಪಡೆಯತಕ್ಕದ್ದನ್ನೆಲ್ಲಾ ಪಡೆದದ್ದಾಯಿತು. ಅಯ್ಯಾ, ಬ್ರಾಹ್ಮಣ, ನೀನು ವಿಷಯಗಳನ್ನು ಹಿಡಿದುಕೊಂಡು ಒದ್ದಾಡುವುದಿಲ್ಲ. ನೀನು ಮುಕ್ತನು. ಇನ್ನು ಭ್ರಾಂತಿಯನ್ನು ಬಿಡು. " ಎಂದು ಹೇಳಲು ಶುಕರು ಸುಮ್ಮನೆ ಪರಮಾತ್ಮಸ್ವರೂಪದಲ್ಲಿಯೇ ಮನಸ್ಸನ್ನು ನೆಲೆಗೊಳಿಸಿ ದುಃಖ, ಭಯ ಮತ್ತು ಆಯಾಸ ಇವುಗಳ ಸೋಂಕಿಲ್ಲದಂಥವರಾಗಿ ಬಯಕೆಗಳನ್ನೆಲ್ಲಾ ತೊರೆದು ಸಂಶಯವನ್ನು ಕಳೆದುಕೊಂಡು ಪರಮ ಪಾವನವಾದ ಸಮಾಧಿಯನ್ನು ಅಭ್ಯಾಸಮಾಡುವುದಕ್ಕಾಗಿ ಮೇರುಪರ್ವತದ ಶಿಖರಕ್ಕೆ ಹೋಗಿ ಅಲ್ಲಿ ಹತ್ತುಸಾವಿರ ವರ್ಷಗಳು ನಿರ್ವಿಕಲ್ಪಸಮಾಧಿಯಲ್ಲಿದ್ದು ಆಮೇಲೆ ಎಣ್ಣೆ ಮುಗಿದ ದೀಪದಂತೆ ಆತ್ಮಸ್ವರೂಪದಲ್ಲಿ ಅಡಗಿಹೋದರು. ಅದಕಾರಣ ತತ್ವಜ್ಞಾನವಾದರೂ ವಿಶ್ರಾಂತಿಯಿಲ್ಲದವನಿಗೆ ಶುಕರಂತೆ ಮತ್ತು ಶ್ರೀರಾಮನಂತೆ ಸಂಶಯವು ಹುಟ್ಟುತ್ತದೆ. ಅಜ್ಞಾನವು ಹೇಗೋ ಹಾಗೆ, ಇದೂ ಮೋಕ್ಷಕ್ಕೆ ತಡೆಯೇ ಆಗುವುದು. ಆದುದರಿಂದಲೇ ನಿಜವನ್ನು ತಿಳಿಯದವನೂ ತಪ್ಪುತಿಳಿದವನೂ ಸಂಶಯಪಡುವವನೂ ಕೆಡುವರೆಂದೂ ಅವರಲ್ಲಿಯೂ ಸಂಶಯಪಡುವವನಿಗೆ ಈ ಲೋಕವೂ ಪರಲೋಕವೂ ಯಾವುದೂ ಇಲ್ಲದೆ ಅವನ ಬಾಳಿಗೆ ಸುಖವೇ ಇಲ್ಲದಂತಾಗುವುದೆಂದೂ ಭಗವಂತನೇ ಹೇಳಿರುತ್ತಾನೆ. ಚೆನ್ನಾಗಿ ತಿಳಿಯದೆ ಇರುವುದೂ, ಮತ್ತು ತಪ್ಪು ತಿಳಿದುಕೊಳ್ಳುವುದೂ ಇವೆರಡೂ ಮೋಕ್ಷಕ್ಕೆ ಮಾತ್ರ ತಡೆಗಳಾಗುವುವು. ಸಂಶಯವೆಂಬುದು ಮೋಕ್ಷಕ್ಕೂ ಅಲ್ಲದೆ ಸುಖಕ್ಕೂ ತಡೆಯಾಗುವುದು. ಹಾಗೋ ಹೀಗೋ ಎಂದು ಮನಸ್ಸು ಎರಡು ಕಡೆಗೂ ಎಳೆಯುತ್ತಿರುವುದರಿಂದ ಅದರ ಪರಿಣಾಮವು ಅಷ್ಟು ಕೆಟ್ಟದ್ದು. ವಿಷಯಗಳಿಂದಲೇ ಸುಖವನ್ನು ಪಡೆಯೋಣವೆಂದು ಮನಸ್ಸುಮಾಡಿ ಹೊರಟರೆ ಮೋಕ್ಷವಿಚಾರವಾದ ಬುದ್ಧಿಯು ಅವನನ್ನು ಹಿಂದಕ್ಕೆ ಜಗ್ಗುವುದು. ಮೋಕ್ಷಸುಖಕ್ಕೆ ತಕ್ಕ ಸಾಧನಗಳನ್ನು

ಾಡಿಕೊಳ್ಳೋಣವೆಂದು ಮುಂದಕ್ಕೆ ಹೆಜ್ಜೆ ಇಟ್ಟರೆ ವಿಷಯಗಳು ಸೆರಗನ್ನು ಹಿಡಿದು ೆಯುವವು. ಆದಕಾರಣ ಸಂಶಯಪಡುವವನಿಗೆ ಎಳ್ಳಷ್ಟೂ ಸುಖವಿಲ್ಲ. ಮೋಕ್ಷ-ನ್ನು ಬಯಸುವವನು ಸಂಶಯವನ್ನು ಕಡಿದು ಕೊಚ್ಚಿಹಾಕಬೇಕು. ತಪ್ಪು ತಿಳಿವಳಿ-ಯ ವಿಷಯಕ್ಕೆ ನಿದಾಘನೆಂಬುವನ ಉದಾಹರಣೆ ಇದೆ. ಋಭುವೆಂಬುವನು ತಾನೇ ುನಸ್ಸು ಕರಗಿದವನಾಗಿ ನಿದಾಘನ ಮನೆಗೆ ಬಂದು ಬಹುಬಗೆಯಿಂದ ಅವನಿಗೆ ಬುದ್ಧಿ-ಯನ್ನು ಹೇಳಿ ಹೊರಟುಹೋದನು. ಅವನು ಹೇಳಿದ್ದೆಲ್ಲಾ ತಿಳಿದರೂ ನಿದಾಘನು ಅದರಲ್ಲಿ ಂಬಿಕೆಯನ್ನಿಡದೆ ಕರ್ಮಗಳೇ ಪರಮಪುರುಷಾರ್ಥಗಳೆಂದು ತಪ್ಪುತಿಳಿದುಕೊಂಡು ಂದಿನಂತೆ ಕರ್ಮಗಳಲ್ಲಿಯೇ ತೊಳಲುತಿದ್ದನು. ತನ್ನ ಶಿಷ್ಯನು ಪರಮಪುರುಷಾರ್ಥ-ನ್ನು ಪಡೆಯದೆ ಹೋಗಬಾರದೆಂದು ಋಭುವು ಮತ್ತೆ ಬಂದು ಅವನಿಗೆ ತಿಳಿಯ ಹೇಳಿ-ನು. ಆಗಲೂ ಅವನ ತಪ್ಪು ತಿಳಿವಳಿಕೆ ಹೋಗಲಿಲ್ಲ. ಮೂರನೇ ಸಲ ಬಂದು ಹೇಳಿದ ುೇಲೆ ತಪ್ಪು ತಿಳಿವಳಿಕೆಯನ್ನು ಬಿಟ್ಟು ವಿಶ್ರಾಂತಿಯನ್ನು ಪಡೆದನು. ಸಂಶಯ ಮತ್ತು ಪ್ಪು ತಿಳಿವಳಿಕೆ ಇವೆರಡೂ ತತ್ವಜ್ಞಾನದ ಫಲಕ್ಕೆ ಅಡ್ಡ ಬರುತ್ತವೆ. ಧಗಧಗಿಸುವ ಜ್ವಾಲೆಯಾದರೂ ಮಣಿಯ, ಮಂತ್ರದ ಅಥವ ಔಷಧದ ಪ್ರಭಾವದಿಂದ ಹೇಗೆ ಕಟ್ಟಿಗೆ-ಯನ್ನು ಸುಡಲಾರದೊ ಚೆನ್ನಾಗಿ ಬೆಳಗುತ್ತ ಉಜ್ಜ್ವಲವಾಗಿರುವಂಥ ಜ್ಞಾನಾಗ್ನಿಯೂ ೂಡ ತಪ್ಪು ತಿಳಿವಳಿಕೆಯ ಮತ್ತು ಸಂಶಯದ ಮುಂದೆ ಪಾಪವನ್ನು ಸುಟ್ಟುಹಾ-ಕಲಾರದೆಂದೂ ತಪ್ಪು ತಿಳಿವಳಿಕೆಯೂ ಸಂಶಯವೂ ಜ್ಞಾನದ ಆಟವನ್ನು ನಡೆಯಗೊ-ಡದೆ ಅಡ್ಡ ನಿಲ್ಲುವವೆಂದೂ ಪರಾಶರರು ಹೇಳಿದ್ದಾರೆ. ಆದಕಾರಣ ಮನಸ್ಸನ್ನು ತೆಪ್ಪಗೆ ಇಟ್ಟುಕೊಳ್ಳದವರಿಗೆ ತಪ್ಪು ತಿಳಿವಳಿಕೆಯೂ ಸಂಶಯವೂ ತಲೆದೋರಿ ತತ್ವಜ್ಞಾನದ ಆಟವನ್ನು ನಿಲ್ಲಿಸಬಹುದು. ಹೀಗಾಗದಂತೆ ಆ ಜ್ಞಾನವನ್ನು ಕಾಪಾಡಿಕೊಳ್ಳಬೇಕಾದ್ದಿರು-ತ್ತದೆ. ಮನಸ್ಸನ್ನು ಹರಿಯ ಬಿಡದೆ ಸಿಲ್ಲಿಸಿಕೊಂಡು ಬಿಟ್ಟವನಿಗೆ ಮನಸ್ಸೇ ಇದ್ದೂ ಇಲ್ಲ-ದಂತಾಗಿ ಸಮಸ್ತ ಜಗತ್ತೂ ಹಾರಿಹೋಗುವಾಗ ತಪ್ಪುತಿಳಿವಳಿಕೆಗಾಗಲಿ ಸಂಶಯಕ್ಕಾ-ಗಲಿ ಅವಕಾಶ ವೆಲ್ಲಿಯದು? ಹೊರಗಣ ಅರಿವೇ ಇಲ್ಲದಂಥ ಬ್ರಹ್ಮಜ್ಞಾನಿಗೆ ಅವನ ದೇಹ ವ್ಯವಹಾರಕ್ಕೆ ಕೂಡ ಅವನ ಪ್ರಯತ್ನವೇನೂ ಇರುವುದಿಲ್ಲ. ಪರಮೇಶ್ವರನ ಪ್ರೇರಣೆ-ಯಿಂದ ನಡೆಯುತ್ತಿರುವ ಪ್ರಾಣವಾಯುವಿನಿಂದಲೇ ಎಲ್ಲವೂ ಸಾಗುತ್ತಿವೆ. ಬ್ರಹ್ಮಜ್ಞಾ-ನಿಯು ಜನಗಳ ಹತ್ತಿರದಲ್ಲಿರುವ ಆ ತನ್ನ ಶರೀರದ ನೆನಪುಕೂಡ ಇಲ್ಲದವನಾಗಿರುವನು. ಹತ್ತಿರದ ಜನರು ಮಾತ್ರ ಆ ಜ್ಞಾನಿಯ ಶರೀರವನ್ನು ನೋಡುವರು. ಜ್ಞಾನಿಗೆ ಮನಸ್ಸೇ ಇಲ್ಲದಿರುವುದರಿಂದ ಇದು ನನ್ನ ದೇಹವೆಂಬ ಭಾವನೆ ಅವನಿಗಿರುವುದಿಲ್ಲ. ಗಾಲಿಗಳು ಉರುಳಿ ಹಾದಿ ಸವೆದಿರುವ ಕಡೆಯಲ್ಲಿಯೇ ಬಂಡಿಯನ್ನು ಎಳೆದುಕೊಂಡು ಹೋಗುವಂತೆ ಶಿಕ್ಷಿತವಾದ ಕುದುರೆಗಳನ್ನು ಅಥವಾ ಎತ್ತುಗಳನ್ನು ಗಾಡಿಕಾರನು ಒಂದುಸಲ ಹಾದಿಯನ್ನು ಹಿಡಿಸಿದರೆ ಮತ್ತೆ ಅವನ ಪ್ರಯತ್ನವಿಲ್ಲದೆ ಅವು ತಮ್ಮಷ್ಟಕ್ಕೆ ತಾವೇ ರಥವನ್ನು ಎಳೆ-ಕೊಂಡು ಮುಂದಿನ ಊರನ್ನು ಮುಟ್ಟುವಂತೆ ಪರಮೇಶ್ವರನು ಈ ದೇಹದಲ್ಲಿ ಆಡು-

ತ್ತಿರುವುದಕ್ಕಾಗಿ ಇಟ್ಟಿರುವ ಪ್ರಾಣವಾಯು ಆ ಜೀವನು ಪ್ರಯತ್ನಮಾಡಲಿ ಅಥವಾ ಬಿಡಲಿ ತನ್ನ ಕೆಲಸವನ್ನು ತಾನು ನಡೆಸುತ್ತಿರುವುದು. ಸಿದ್ಧನಾದವನು ತನ್ನ ಆತ್ಮಸ್ವರೂಪದಲ್ಲಿಯೇ ಪರವಶನಾಗಿರುವುದರಿಂದ ಹೆಂಡವನ್ನು ಕುಡಿದು ಮೈಮರೆತವನಿಗೆ ತನ್ನ ಮೈಮೇಲೆ ಬಟ್ಟೆ ಇದೆಯೋ ಬಿದ್ದುಹೋಗಿದೆಯೋ ಎಂಬ ಲಕ್ಷ್ಯವಿಲ್ಲದಿರುವಂತೆ ಎಂದಿದ್ದರೂ ಹೋಗುವ ಈ ದೇಹವು ಎದ್ದಿದೆಯೊ ಬಿದ್ದಿದೆಯೋ ಎಂಬುದನ್ನು ನೋಡಿಕೊಳ್ಳುವುದಿಲ್ಲವೆಂದು ಭಾಗವತದಲ್ಲಿ ಹೇಳಿದೆ ನಿದ್ರೆಯಿಂದೆದ್ದವರಂತೆ ಸಿದ್ಧರು ಹತ್ತಿರದ ಜನರು ನೆನಪುಗೊಟ್ಟಮೇಲೆ ತಮಗೆ ಹಿಂದಿನಿಂದ ನಡೆದುಕೊಂಡು ಬಂದಿರುವ ಆಚಾರವನ್ನು ನಡೆಸುವರು. ಸಿದ್ಧನು ಏನನ್ನೂ ನೋಡಿಕೊಳ್ಳುವುದಿಲ್ಲವೆಂಬ ಮಾತೂ, ಆಚಾರವನ್ನು ನಡೆಸುವನೆಂಬ ಮಾತೂ ಎರಡೂ ಒಂದಕ್ಕೊಂದು ವಿರೋಧವಲ್ಲವೆ? ಎಂದರೆ ಅವರು ಇಟ್ಟುಗೊಂಡಿರುವ ವಿಶ್ರಾಂತಿಗೆ ತಕ್ಕಂತೆ ಏನನ್ನೂ ನೋಡಿಕೊಳ್ಳದಿರುವುದೂ ಮತ್ತು ಆಚಾರವನ್ನು ನಡೆಸುವುದೂ ಎರಡೂ ಅವರಿಗೆ ಒಪ್ಪುವದು. ಸಿದ್ಧರಲ್ಲಿ ಬ್ರಹ್ಮವಿತ್, ಬ್ರಹ್ಮವಿದ್ವರ, ಬ್ರಹ್ಮವಿದ್ವರೀಯಾನ್ ಮತ್ತು ಬ್ರಹ್ಮವಿದ್ವರಿಷ್ಠ ಎಂದು ನಾಲ್ಕುಬಗೆ. ಇವರು ಯೋಗದ ಏಳು ಭೂಮಿಕೆಗಳಲ್ಲಿ ನಾಲ್ಕನೇ ಭೂಮಿಕೆಯನ್ನು ಮೊದಲುಮಾಡಿಕೊಂಡು ಏಳನೇದರವರೆಗಿನದನ್ನು ಸಾಧಿಸಿದವರೆಂದು ತಿಳಿದುಕೊಳ್ಳಬೇಕು. ಆ ಭೂಮಿಕೆಗಳನ್ನು ವಸಿಷ್ಠರು ಹೇಳಿದ್ದಾರೆ. ಶುಭೇಚ್ಛೆಯೇ ಮೊದಲನೇದು ವಿಚಾರಣಾ ಎಂಬುದು ಎರಡನೇದು. ತನುಮಾನಸವೆಂಬುದು ಮೂರನೇದು. ಸತ್ತ್ವಾಪತ್ತಿ ಯೆಂಬುದು ನಾಲ್ಕನೇದು. ಅಸಂಸಕ್ತಿ ಎಂಬುದು ಐದನೇದು. ಪದಾರ್ಥಭಾವಿನೀ ಎಂಬುದು ಆರನೇದು. ತುರ್ಯಗಾ ಎಂಬುದು ಏಳನೇದು.

"ಅಯ್ಯೋ ನಾನು ಹೀಗೆ ಸುಮ್ಮನೆ ಮೂಢನಾಗಿದ್ದು ಹೋದರೇನು ಪ್ರಯೋಜನ? ಈ ಮೂರುಗಳಿಗೆಯ ತೋರಿಕೆಯ ವಿಷಯಗಳನ್ನು ಬಿಟ್ಟು ಇನ್ನು ಶಾಸ್ತ್ರಪರಿಚಯದಿಂದಲೂ ಸಾಧುಸಹವಾಸದಿಂದಲೂ ನನ್ನ ಹಿತವನ್ನು ನಾನು ಮಾಡಿಕೊಳ್ಳಬೇಕೆಂದು ಮನಸ್ಸು ಮಾಡುವುದು ಶುಭೇಚ್ಛೆ. ಶಾಸ್ತ್ರಗಳನ್ನು ನೋಡಿ ಸಾಧುಗಳ ಸಹವಾಸವನ್ನು ಮಾಡಿ ವಿಷಯಗಳ ಬಯಕೆಯನ್ನು ಪ್ರಯತ್ನದಿಂದ ಹಿಂದಟ್ಟುತ್ತ ಆತ್ಮವಿಚಾರದಲ್ಲಿ ಮನಸ್ಸನ್ನು ಹಾಕುವುದು ವಿಚಾರಣಾ. ತನ್ನ ಹಿತವನ್ನು ತಾನು ನೋಡಿಕೊಳ್ಳಬೇಕೆಂಬ ಭರದಿಂದಲೂ ವಿಚಾರದ ಪ್ರಭಾವದಿಂದಲೂ ಇಂದ್ರಿಯಗಳ ಹರಿದಾಟವು ತಗ್ಗಿ ವಿಷಯಗಳು ಮನಸ್ಸಿಗೆ ಸೊಗಸದೆ ಮನಸ್ಸು ಬಡವಾಗುವುದೇ ತನುಮಾನಸ. ಈ ಮೂರು ಭೂಮಿಕೆಗಳ ಅಭ್ಯಾಸದ ಬಲದಿಂದ ಮನಸ್ಸು ವಿಷಯಗಳ ಕಡೆಯಿಂದ ಹಿಮ್ಮೆಟ್ಟಿ ಶುದ್ಧವಾದ ಆತ್ಮಸ್ವರೂಪದಲ್ಲಿ ನಿಂತರೆ ಅದೇ ಸತ್ತ್ವಾಪತ್ತಿ. ಈ ನಾಲ್ಕು ಭೂಮಿಕೆಗಳ ಬಲದಿಂದ ಮನಸ್ಸು ಇನ್ನೇನನ್ನು ಹಚ್ಚಿಕೊಳ್ಳದಂತೆ ಇದ್ದರೆ ಅದು ಅಸಂಸಕ್ತಿ. ಈ ಐದು ಭೂಮಿಕೆಗಳ ಅಭ್ಯಾಸದ ಬಲದಿಂದ ಮನಸ್ಸು ಆತ್ಮಸ್ವರೂಪದಲ್ಲಿ ಮುಳುಗಿ ಹೋಗಿ ಹೊರಗಾಗಲಿ ಒಳಗಾಗಲಿ ಅವನಿಗೆ ಯಾವುದೊಂದು

ಅರಿವೂ ಆಗದೆ ಇತರರು ಹೆಚ್ಚಾದ ಪ್ರಯತ್ನದಿಂದ ಎಬ್ಬಿಸಿದರೆ ಮಾತ್ರ ಎಚ್ಚರಗೊಳ್ಳುವ ಸ್ಥಿತಿಯನ್ನು ಪಡೆದರೆ ಅದು ಪದಾರ್ಥಭಾವಿನೀ. ಬಹುಕಾಲ ಈ ಆರು ಭೂಮಿಕೆಗಳನ್ನು ಸಾಧನೆ ಮಾಡಿ ಇನ್ನೊಂದರ ಕೋರಿಕೆಯೆಂಬುದಕ್ಕೆ ಅವಕಾಶವೇ ಇಲ್ಲದೇ ತನ್ನ ಸ್ವರೂಪದಲ್ಲಿಯೇ ತಾನು ಎಡೆಬಿಡದೆ ಇರುವದು ತುರ್ಯಗಾ. ಇವುಗಳಲ್ಲಿ ಮೊದಲನೇ ಮೂರು ಬ್ರಹ್ಮವಿದ್ಯೆಗೆ ಸಾಧನೆಗಳೇ ಹೊರತು ಬ್ರಹ್ಮವಿದ್ಯೆಯೆಂದೇ ಕರಸಿಕೊಳ್ಳಲಾರವು. ಆ ಮೂರುಭೂಮಿಕೆಗಳಲ್ಲಿಯೂ ಬಹುಬಗೆಯಾದ ವಿಷಯಗಳಿದ್ದೇ ಇರುವವೆಂಬ ತಿಳಿವಳಿಕೆ ಹೋಗಿರುವದಿಲ್ಲ. ಆದಕಾರಣ ಇದನ್ನು ಜಾಗರಣವೆಂದು ಹೇಳಬಹುದು. ಎಚ್ಚರವಾಗಿರುವಾಗಲೂ ಜಗತ್ತು ಹೇಗೆ ಬಗೆಬಗೆಯಾಗಿ ಕಾಣುವದೋ ಹಾಗೆ ಈ ಮೂರುಭೂಮಿಕೆಗಳಲ್ಲಿಯೂ ಜಗತ್ತು ಕಾಣುತ್ತಿರುವದರಿಂದ ಈ ಮೂರಕ್ಕೂ ಜಾಗರಣವೆಂಬ ಮಾತು ಒಪ್ಪುವದು. ಮೊದಲನೇ ಈ ಮೂರೂ ಸಾಧನದ ಭೂಮಿಕೆಗಳು. ನಾಲ್ಕನೇದು, ಮೊದಲನೇ ಮೂರರ ಅಭ್ಯಾಸದಿಂದ ಬರುವಂಥ ಫಲರೂಪವಾದುದು. ಈ ಭೂಮಿಕೆಗಳಲ್ಲಿ ವೇದಾಂತವಾಕ್ಯದಲ್ಲಿ ಹೇಳಿರುವಂತೆ ಅಖಂಡಸಚ್ಚಿದಾನಂದಸ್ವರೂಪನಾದ ಪರಮಾತ್ಮನ ಸಾಕ್ಷಾತ್ಕಾರವಾಗುವದು. ಈ ಭೂಮಿಕೆಯನ್ನು ಪಡೆದಾಗ ಪರಬ್ರಹ್ಮ ವಸ್ತುವೊಂದೇ ಸರ್ವಜಗತ್ತಿಗೂ ಮೂಲಾಧಾರವೆಂಬ ನಿಶ್ಚಯ ಉಂಟಾಗಿ ಆ ಪರಬ್ರಹ್ಮವಸ್ತುವಿನ ಆಧಾರದಮೇಲೆ ಬೇರೆಬೇರೆ ಹೆಸರಿನಿಂದಲೂ ಬೇರೆಬೇರೆ ರೂಪಿನಿಂದಲೂ ಕಾಣುವಂಥಾ ಜಗತ್ತೆಲ್ಲಾ ಒರೀತೋರಿಕೆಯ ಮಾತ್ರದ್ದೆಂದು ನಂಬಿಕೆಯುಂಟಾಗುವದು. ವಿಷಯಗಳ ಕಟ್ಟನ್ನು ಕಳಚಿಕೊಳ್ಳಬೇಕೆಂಬುವನಿಗೆ ಜಾಗರಣವೆಂಬ ಹಿಂದಿನ ಮೂರು ಭೂಮಿಕೆಗಳಿಗಿಂತ ಇದು ಬೇರೆಯಾಗಿ ಸ್ವಪ್ನವೆನಿಸಿಕೊಳ್ಳುವದು. ಈ ಭೂಮಿಕೆಯಲ್ಲಿ ಜಗತ್ತೆಲ್ಲಾ ಕನಸಿನೊಳಗಣ ಜಗತ್ತಿನಂತೆ ಕಾಣುವದರಿಂದ ಇದಕ್ಕೆ ಸ್ವಪ್ನವೆಂಬ ಮಾತು ಒಪ್ಪುವದು. ಈ ಸ್ಥಿತಿಯಲ್ಲಿ ಶರತ್ಕಾಲದ ಮೇಘವ ತುಣತುಣಕಾಗಿ ಒಡೆದು ಹಾಗೆಯೇ ಮೈಗರೆಯುವಂತೆ ವಿಷಯಗಳೆಲ್ಲಾ ಕಾಣದೆ ಹೋಗಿ ಆತ್ಮಸ್ವರೂಪ ವೊಂದೇ ಬೆಳಗುತ್ತಿರುವದು. ಈ ನಾಲ್ಕನೆ ಭೂಮಿಕೆಯನ್ನು ಪಡೆದಂಥ ಯೋಗಿಗೆ ಬ್ರಹ್ಮವಿತ್ ಎಂದು ಹೆಸರು. ಐದರಿಂದ ಏಳರವರಿಗು ಮೂರು ಭೂಮಿಕೆಗಳು ಜೀವನ್ಮುಕ್ತಿಯ ಒಳಭೇದಗಳು. ಈ ಸ್ಥಿತಿಗಳು ನಿರ್ವಿಕಲ್ಪಸಮಾಧಿಯನ್ನು ಒಲಿಸಿಕೊಂಡು ಯೋಗಿಯು ಎಷ್ಟು ಹೆಚ್ಚು ವಿಶ್ರಾಂತನಾಗಿರುವನೊ ಅದರ ಪ್ರಮಾಣಕ್ಕನುಗುಣವಾಗಿವೆ. ಐದನೇ ಭೂಮಿಕೆಯು ನಿರ್ವಿಕಲ್ಪ ಸಮಾಧಿಯನ್ನು ಪಡೆದಯೋಗಿಗೆ ತನ್ನಷ್ಟಕ್ಕೆ ತಾನೆ ಎಚ್ಚರವಾಗುವದು. ಈ ಯೋಗಿಗೆ ಬ್ರಹ್ಮವಿದ್ವರನೆಂದು ಹೆಸರು. ಆರನೇ ಭೂಮಿಕೆಯು ನಿರ್ವಿಕಲ್ಪ ಸಮಾಧಿಯನ್ನ ಪಡೆದ ಯೋಗಿಗೆ ಹತ್ತಿರ ಇದ್ದವರು ಎಬ್ಬಿಸಿದರೆ ಎಚ್ಚರವಾಗುವದು. ಇವನು ಬ್ರಹ್ಮದ್ವರೀಯಾನ್. ಐದನೇ ಭೂಮಿಕೆಯನ್ನು ನಿದ್ರೆ ಯನ್ನಬಹುದು. ಆರನೇ ಭೂಮಿಕೆಯನ್ನು ಗಾಢನಿದ್ರೆಯನ್ನಬಹುದು ಐದನೇ ಭೂಮಿಕೆಗೆ ನಿದ್ರೆ ಎಂಬ ಮಾತು ಹೇಗೆ ಒಪ್ಪುವದೆಂದರೆ ಅವನಿಗೆ ಆಗಬೇರೆ ಏನೂ ತೋ-

ಜರವಾಗುತ್ತಿರುವದಿಲ್ಲ. ಆತನು ಆತ್ಮಸ್ವರೂಪದಲ್ಲಿ ಇದ್ದುಬಿಡುವನು. ಅವನ ಮನಸ್ಸು ಧ್ಯಾನಮಾಡುವ ಕಾಲದಲ್ಲಿ ಮಾತ್ರವೇ ಅಂತರ್ಮುಖವಾಗಿರುವದಿಲ್ಲ. ಮನಸ್ಸು ಹೊರಬಿದ್ದು ವೃತ್ತಿಗಳನ್ನು ಪಡೆಯುವಾಗಲೂ ಅವನ ಮನಸ್ಸು ಒಳಗಡೆಗೇ ತಿರುಗಿಕೊಂಡಿದ್ದು ಯಾವಾಗಲೂ ಅವನು ಅರನಿದ್ದೆಯಲ್ಲಿರುವವನಂತೆ ಇರುವನು. ಈ ಭೂಮಿಕೆಯನ್ನು ಅಭ್ಯಾಸ ಮಾಡಿಮಾಡಿ ಬೆಳಸಿಕೊಂಡು ಆರನೇ ಭೂಮಿಕೆಯನ್ನು ಹತ್ತಿಬಿಟ್ಟರೆ ಆಗ ಅಲ್ಲಿ ಅವನಿಗೆ ನಾನಿಲ್ಲವೆಂಬುದೂ ಇಲ್ಲ. ನಾನಿರುವೆನೆಂಬುದೂ ಇಲ್ಲ. ನಾನೆಂಬುದು ಇಲ್ಲ. ನಾನಲ್ಲವೆಂಬುದೂ ಇಲ್ಲ. ಮನಸ್ಸೆಂಬುದೆಲ್ಲಾ ಅಲ್ಲಿ ತೀರ ಇಲ್ಲದಂತಾಗಿ ಇರುವುದು. ಬಯಲಲ್ಲಿ ಒಂದು ಗಡಿಗೆಯನ್ನು ಇಟ್ಟರೆ ಅದರ ಒಳಗೂ ಏನೂ ಇಲ್ಲ ಹೊರಗೂ ಏನೂ ಇಲ್ಲ. ಹೀಗಿರುವಂತೆ ಅವನಿಗೆ ಒಳಗೂ ಹೊರಗೂ ಏನೂ ಇರುವದಿಲ್ಲ. ಅಷ್ಟೇ ಅಲ್ಲ ಸಮುದ್ರದಲ್ಲಿ ಮುಳುಗಿಸಿರುವ ನೀರುತುಂಬಿದ ಗಡಿಗೆಯಂತೆ ಅವನು ಒಳಗೂ ತುಂಬಿಕೊಂಡಿರುವನು. ಹೊರಗೂ ತುಂಬಿಕೊಂಡಿರುವನು. ಕೆಲವರು ಅದ್ವೈತಸ್ಥಿತಿಯನ್ನು ಬಯಸುತ್ತಾರೆ. ಕೆಲವರು ದ್ವೈತಸ್ಥಿತಿಯನ್ನು ಬಯಸುತ್ತಾರೆ ಸಮಸ್ವರೂಪವಾದ ಬ್ರಹ್ಮಾಂಡದಲ್ಲಿ ದ್ವೈತವೂ ಇಲ್ಲ. ಅದ್ವೈತವೂ ಇಲ್ಲ. ಇದನ್ನು ಜನರು ತಿಳಿಯರು. ಈ ಆರನೇ ನಿರ್ವಿಕಲ್ಪಸಮಾಧಿಯನ್ನು ಪಡೆದವನ ಮನಸ್ಸು ಹೆಸರುಮಾತ್ರಕ್ಕೆ ಉಳಿದುಕೊಂಡಿರುವದು. ಒಳಗೇ ಇದ್ದುಕೊಂಡೇ ಅಲ್ಲಿಯ ವಿಷಯಗಳನ್ನು ಚಿತ್ರಿಬೆಳಸುವದಕ್ಕಾಗಲಿ ಅಥವಾ ಹೊರಬಿದ್ದ ಹೊರಗಣ ವಿಷಯಗಳನ್ನು ಗ್ರಹಿಸುವದಕ್ಕಾಗಲಿ ಅದಕ್ಕೆ ಸಾಮರ್ಥ್ಯವಿರುವದಿಲ್ಲವಾದುದರಿಂದ ಬಯಲಲ್ಲಿಟ್ಟ ಗಡಿಗೆಯಂತೆ ಹೊರಗೂ ಒಳಗೂ ಏನೂ ಇಲ್ಲದಂತೆ ಆಗಿರುವುದು. ಆ ಮನಸ್ಸು ತಾನೇ ತಾನಾಗಿ ಬೆಳಗುವಂಥಾ ಸಚ್ಚಿದಾನಂದ ಸ್ವರೂಪವಾದ ಬ್ರಹ್ಮವಸ್ತುವಿನಲ್ಲಿ ಮುಳುಗಿಹೋಗುವದರಿಂದ ಹೊರಗೂ ಒಳಗೂ ಎಲ್ಲೆಲ್ಲಿಯೂ ಬ್ರಹ್ಮವೇ ಆಗಿರುವದನ್ನು ವಿಚಾರಮಾಡಿದರೆ ಸಮುದ್ರದ ಮಧ್ಯದಲ್ಲಿ ಮುಳುಗಿಸಿರುವ ತುಂಬಿದಕೊಡದಂತೆ ಹೊರಗೂ ಒಳಗೂ ಎಲ್ಲೆಲ್ಲಿಯೂ ಒಂದೇ ತುಂಬಿಕೊಂಡಿರುವದು. ಇನ್ನು ತುರೀಯವೆಂಬ ಏಳನೇ ಭೂಮಿಕೆಯನ್ನೇರಿದ ಯೋಗಿಗೆ ತನಗೆ ತಾನೇ ಎಚ್ಚರವಾಗುವದೂ ಇಲ್ಲ. ಬೇರೆ ಯಾವದರಿಂದ ಎಚ್ಚರವಾಗುವದೂ ಇಲ್ಲ. ಆದುದರಿಂದ ಆ ಸ್ಥಿತಿಯಲ್ಲಿ ಅವನಿಗೆ ಈ ದೇಹವು ಎದ್ದಿದೆಯೋ ಬಿದ್ದಿದೆಯೋ ಎಂಬ ಅರಿವೇ ಇರುವದಿಲ್ಲವೆಂದು ಭಾಗವತ ವಾಕ್ಯವು ಹೇಳುವದು. ಅಸಂಪ್ರಜ್ಞಾತ ಸಮಾಧಿಯನ್ನು ಹೇಳುವಂಥಾ ಯೋಗಶಾಸ್ತ್ರಗಳ ಮಾತೆಲ್ಲಾ ಇಲ್ಲಿಗೆ ಮುಗಿಯಿತು ಇಂಥಾ ಯೋಗಿಗೆ ಬ್ರಹ್ಮವಿದ್ವರಿಷ್ಠನೆಂದು ಹೆಸರು ಮುಖ್ಯಸಾರಾಂಶವೇನೆಂದರೆ:— ಐದನೇ ಭೂಮಿಕೆಯನ್ನು ಮೊದಲುಮಾಡಿಕೊಂಡು ಒಂದೊಂದನ್ನಾಗಿ ಏಳನೇದರವರೆವಿಗೂ ಸಾಧಿಸುತ್ತಾ ಜೀವನ್ಮುಕ್ತಿಯನ್ನು ಪಡೆದುಕೊಳ್ಳುವವರಿಗೆ ಎರಡನೆಯದೇನೂ ತೋರದೇ ಇರುವುದರಿಂದ ಸಂಶಯವಾಗಲಿ ತಪ್ಪು ತಿಳಿವಳಿಕೆಯಾಗಲಿ ತಲೆಹಾಕುವದಕ್ಕೆ ಅವಕಾಶವಿಲ್ಲದೆ ಅವನ ತತ್ವಜ್ಞಾನವು ಸುರಕ್ಷಿತವಾಗಿರುವುದು. ಹೀಗೆ ತನ್ನ ಜ್ಞಾನವು

ದಲದಂತೆ ಕಾಪಾಡಿಕೊಳ್ಳುವುದೇ ಜೀವನ್ಮುಕ್ತಿಯ ಮೊದಲನೆಯ ಪ್ರಯೋಜನ. ತಪಃಶಕ್ತಿಯನ್ನು ಪಡೆಯುವುದು ಎರಡನೆಯ ಪ್ರಯೋಜನ. ಯೋಗಭೂಮಿಕೆಗಳಿಂದ ತಪಃಶಕ್ತಿಯ ಸಲುವಾಗಿ ದೇವತ್ವಮೊದಲಾದ ಪದವಿಗಳು ಬರುವ ಸಂಭವವುಂಟು. ಈ ಅಭಿಪ್ರಾಯವು ಅರ್ಜುನನಿಗೂ ಶ್ರೀಕೃಷ್ಣನಿಗೂ ನಡೆದಿರುವ ಮಾತಿನಲ್ಲಿಯೂ ಶ್ರೀರಾಮನಿಗೂ ವಸಿಷ್ಠರಿಗೂ ನಡೆದಿರುವ ಮಾತಿನಲ್ಲಿಯೂ ಹೊರಬಿದ್ದಿರುವುದು. " ಯೋಗವನ್ನು ಸಾಧಿಸಲೇಬೇಕೆಂಬ ಶ್ರದ್ಧೆಯಿದ್ದರೂ, ಹೇಗೋ ಮನಸ್ಸನ್ನು ತಡೆದು-ಕೊಳ್ಳಲಾರದೆ ಯೋಗಸಿದ್ಧಿಯನ್ನು ಪಡೆಯದವರು ಸತ್ತಮೇಲೆ ಯಾವ ಗತಿಯನ್ನು ಪಡೆಯುತ್ತಾರೆ? ಪರಮಾತ್ಮಜ್ಞಾನವನ್ನಂತು ಸಾಧಿಸಲಿಲ್ಲ. ಕರ್ಮವನ್ನು ತಾವೇ ಬಿಟ್ಟಿರುವರು. ಹೀಗಾಗಿ ಇವರು ಬಿರುಗಾಳಿಯಿಂದ ಚೂರುಚೂರಾಗಿ ಒಡೆದುಕೊಂಡು ದಿಕ್ಕು ದಿಕ್ಕಿಗೆ ಹೋಗುವ ಮೋಡಗಳಂತೆ ಎರಡೂ ಕೆಟ್ಟು ಕುರುಡ ದಾಸರಾಗುವರಷ್ಟೆ". ಎಂದು ಅರ್ಜುನನು ಕೇಳಿದಾಗ ಶ್ರೀಕೃಷ್ಣನು " ಅರ್ಜುನ, ಅವನಿಗೆ ಈ ಲೋಕದಲ್ಲಿಯೂ ಕೆಡಿಕಿಲ್ಲ, ಪರಲೋಕದಲ್ಲಿಯೂ ಕೆಡಿಕಿಲ್ಲ, ಒಳ್ಳೇ ಕೆಲಸವನ್ನು ಮಾಡಿದವನೆಂದಿಗೂ ಕೆಡುವುದಿಲ್ಲ. ಯೋಗಭೂಮಿಕೆಗಳು ಸಿದ್ಧಿಸದಿದ್ದರೂ ಅವುಗಳನ್ನು ಸಾಧಿಸಬೇಕೆಂದು, ಯತ್ನಮಾಡಿದವನಿಗೆ ಮಹಾಮಹಾ ಪುಣ್ಯಶಾಲಿಗಳಿಗೆ ಸಿಕ್ಕಿದಂಥ, ಲೋಕವು ಸಿಕ್ಕುವುದು. ಅಲ್ಲಿ ಅವನು ಬಹುಕಾಲ ಸುಖಪಡುವನು. ಆಮೇಲೆ ಅವನು ಒಳ್ಳೇ ಕುಲೀನರಾದಂಥ ಶ್ರೀಮಂತರ ಮನೆಯಲ್ಲಿ ಹುಟ್ಟುವನು. ಅಥವಾ ಒಳ್ಳೇ ಬುದ್ಧಿವಂತರಾದ ಯೋಗಿಗಳ ಕುಲದಲ್ಲಿಯೇ ಹುಟ್ಟಿದರೂ ಹುಟ್ಟುವನು. ಲೋಕದಲ್ಲಿ ಹೀಗೆ ಯೋಗಿಗಳ ಕುಲದಲ್ಲಿ ಜನ್ಮವು ಸಿಕ್ಕುವುದು ಬಹುಕಷ್ಟ. ಎಲ್ಲಿ ಹುಟ್ಟಿದರೂ ಅವನಿಗೆ ಹಿಂದಿನ ಅಭ್ಯಾಸದ ಚಟವೇ ಹುಟ್ಟಿ ಅಲ್ಲಿಂದ ಮುಂದು ಮುಂದಕ್ಕೆ ಅವನು ಪ್ರಯತ್ನಮಾಡುತ್ತಾ ಹೋಗುತ್ತಾನೆ " ಎಂದು ಹೇಳಿರುವನು. ಒಂದೇಭೂಮಿಕೆಯನ್ನೋ ಎರಡೇಭೂಮಿಕೆಯನ್ನೋ ಅಥವಾ ಮೂರುಭೂಮಿಕೆಯನ್ನೋ ಸಾಧಿಸಿ ಸತ್ತವನಿಗೆಂಥಗತಿಯಾಗುತ್ತದೆ? ಎಂದು ಶ್ರೀರಾಮನು ಪ್ರಶ್ನೆಮಾಡಿದ್ದಕ್ಕೆ ವಸಿಷ್ಠರು ಹೇಳಿದ್ದೇನೆಂದರೆ " ಯೋಗದ ಭೂಮಿಕೆ-ಗಳನ್ನು ಸಾಧಿಸುತ್ತಿರುವಾಗಲೇ ದೇಹವನ್ನು ಬಿಟ್ಟ ಜೀವನಿಗೆ ಅವನವನ ಭೂಮಿಕೆಗ-ನುಗುಣವಾಗಿ ಅವನ ಹಿಂದಿನ ಪಾಪಗಳೆಲ್ಲಾ ನಾಶವಾಗುತ್ತದೆ ಆದ್ದರಿಂದ ಅವನು ಸತ್ತಾಗ ಅವನ ಸಂಚಾರಕ್ಕೆ ದೇವತೆಗಳ ವಿಮಾನವು ಸಿಕ್ಕುತ್ತದೆ. ದಿಕ್ಪಾಲಕರ ಪಟ್ಟಣ-ಗಳಲ್ಲಿ ಅವನಿಗೆ ವಾಸವಾಗುತ್ತದೆ. ಮೇರುಪರ್ವತದ ತಪ್ಪಲಲ್ಲಿರುವ ಉಪವನಗಳಲ್ಲಿ ಅವನು ಸ್ತ್ರೀಯರೊಡನೆ ವಿಹಾರಮಾಡುತ್ತಾನೆ. ಈ ಬಗೆಯ ಭೋಗಗಳಿಂದ ಅವನು ಮಾಡಿದ ಪುಣ್ಯವೆಲ್ಲ ಮುಗಿಯುತ್ತಲೇ ಅವನು ಒಳ್ಳೇಕುಲೀನನಾಗಿ ಇತರರಿಗೆ ತೋರದಿದ್ದರೂ ಒಳಗೇ ಸದ್ಗುಣಗಳಿಂದ ಪೂರ್ಣರಾಗಿರುವಂಥ ಸಜ್ಜನರಾದ ಶ್ರೀಮಂತರ ಮನೆಯಲ್ಲಿ ಹುಟ್ಟುತ್ತಾನೆ. ಆಗ ಅವನಿಗೆ ಹಿಂದೆಮಾಡಿದ ಮೂರುಭೂಮಿಕೆಗಳ ಅಭ್ಯಾಸವು ತೋರಿ-ಕೊಳ್ಳುತ್ತದೆ. ಅಲ್ಲಿಂದವನು ಮುಂದಮುಂದಕ್ಕೆ ಮೇಲಣಭೂಮಿಕೆಗಳಿಗೆ ಪ್ರಯತ್ನಮಾ-

ಡುತ್ತಾನೆ. ಹೀಗೆ ಯೋಗಭೂಮಿಕೆಗಳು ದೇವತ್ವವೊದಲಾದ ಪದವಿಗಳನ್ನು ಕೊಡತ-ಕ್ಕವುಗಳಾಗಿರುತ್ತವೆ. ಇಷ್ಟುಮಾತ್ರದಿಂದಲೇ ಇದಕ್ಕೆ ತಪಸ್ಸೆಂಬ ಮಾತು ಹೇಗೆ ಒಪ್ಪು-ವುದೆಂದರೆ? ತೈತ್ತಿರೀಯ ಶ್ರುತಿಯೇ ಅದನ್ನು ತಪಸ್ಸೆಂದು ಕರೆದಿರುವದು. ತತ್ವಜ್ಞಾ-ನವಾಗುವುದಕ್ಕಿಂತ ಹಿಂದಿನ ಮೂರುಭೂಮಿಕೆಗಳೇ ತಪಸ್ಸೆಂದಾದ ಮೇಲೆ ತತ್ವಜ್ಞಾನ-ವಾದ ಮೇಲಿನ ನಿರ್ವಿಕಲ್ಪಸಮಾಧಿರೂಪವಾದ ಐದನೇ ಆರನೇ ಏಳನೇ ಭೂಮಿಕೆಗಳನ್ನು ತಪಸ್ಸೆಂದು ಕರೆಯುವುದಕ್ಕೆ ಅಡ್ಡಿಯೇನಿದೆ? ಆದ್ದರಿಂದಲೇ ಮನಸ್ಸನ್ನೂ ಇಂದ್ರಿಯ-ಗಳನ್ನೂ ಒಂದೇ ಕಡೆಯಲ್ಲಿಟ್ಟುಕೊಂಡಿರುವುದೇ ಹೆಚ್ಚಿನ ತಪಸ್ಸೆಂದೂ ಎಲ್ಲಾ ಧರ್ಮಗ-ಳಿಗಿಂತ ಅದು ಮೇಲಾದುದೆಂದೂ ಸ್ಮೃತಿವಚನವಿರುವುದು. ಆದರೆ ಇತರ ತಪಸ್ಸುಗಳಿಗೆ ಆಗುವಂಥ ಜನ್ಮಾಂತರಗಳು ಈ ತಪಸ್ಸಿಗೆ ಆಗದಿದ್ದರೂ ಜನರಿಗೆ ಉದಾಹರಣೆಯಾಗಿ-ರುವುದಕ್ಕಾಗಿ ಇದನ್ನು ತಪಸ್ಸೆಂದು ಕರೆಯಬೇಕಾಗಿದೆ. ಜನರಿಗೆ ಉದಾಹರಣೆಯಾಗಿರುವು-ದಕ್ಕಾದರೂ ಮಾಡಬೇಕೆಂದು ಭ ಂತನು ಹೇಳಿದ್ದಾನೆ ಈ ಯೋಗಿಯು ಯಾರಿಗೆ ಉದಾಹರಣೆಯುವಾಗಿರಬೇಕೆಂದರೆ-ಶಿಷ್ಯನಿಗೆ ಭಕ್ತನಿಗೆ ಮತ್ತು ಉದಾಸೀನನಿಗೆ. ಗುರುವು ಅಂತರ್ಮುಖನಾದ ಯೋಗಿಯಾದರೇ ಶಿಷ್ಯನಿಗ ಅವನಲ್ಲಿ ಹೆಚ್ಚಿನ ವಿಶ್ವಾಸವುಂಟಾಗಿ ಅವನ ಉಪದೇಶದಲ್ಲಿ ನಂಬಿಕೆ ಹುಟ್ಟಿ ಸಮಾಧಾನವುಂಟಾಗುವುದು. ದೇವರಲ್ಲಿ ಹೆಚ್ಚಿನ ಭಕ್ತಿಯೂ ಮತ್ತು ದೇವರಲ್ಲಿ ಹೇಗೋ ಹಾಗೆ ಗುರುವಿನಲ್ಲಿ ಭಕ್ತಿಯೂ ಯಾವನಿಗಿರು-ವುದೋ ಆ ಮಹಾತ್ಮನಿಗೆ ಮಾತ್ರ ವೇದಾಂತ ಶಾಸ್ತ್ರದಲ್ಲಿ ಹೇಳಿರುವ ಅರ್ಥಗಳೆಲ್ಲಾ ಹೊಳೆಯುವುವೆಂದು ಶ್ರುತಿ ಇರುವುದು. ಶ್ರದ್ಧೆಯಿಂದ ಆದೊಂದನ್ನೇ ಬಯಸಿ ಇಂದ್ರಿ-ಯಗಳನ್ನು ಬಿಗಿಹಿಡಿದವನಿಗೆ ಜ್ಞಾನವಾಗಿ ಹೆಚ್ಚಿನ ಶಾಂತಿ ಮೈದೋರುವುದೆಂದು ಸ್ಮೃತಿಯೂ ಇರುವುದು. ಆ ಯೋಗಿಗೆ ಅನ್ನವನ್ನು ಕೊಡುವುದು. ಇರುವುದಕ್ಕೆ ಸ್ಥ-ಳವನ್ನು ಕಲ್ಪಿಸುವುದು ಮೊದಲಾದ ರೀತಿಯಿಂದ ಉಪಚಾರಮಾಡುವಂಥವರು ಭ-ಕ್ತರು. ಆ ಯೋಗಿಯ ತಪಸ್ಸೆಲ್ಲಾ ಆ ಭಕ್ತರಿಗೇ ಸೇರುವುದು. ಆ ಯೋಗಿಗೆ ಹೊಲ ಮನೆಗಳೇನಾದರೂ ಇದ್ದರೆ ಅವು ಅವನ ಮಕ್ಕಳು ಮರಿಗಳಿಗಾಗುವುವೆಂದೂ ಅವನ ಪುಣ್ಯಕರ್ಮಗಳೆಲ್ಲಾ ಅವನಿಗೆ ಬೇಕಾದವರನು ಸೇರುವವೆಂದೂ ಅವನ ಪಾಪಕೃತ್ಯಗ-ಳೆಲ್ಲಾ ಅವನ ಹಗೆಗಳಿಗೆ ಗಂಟುಬೀಳುವುದೆಂದೂ ಶ್ರುತಿ ಇದೆ. ಇನ್ನು ಉದಾಸೀನರೆಂ-ಬುವರು ಆಸ್ತಿಕರೆಂದೂ ನಾಸ್ತಿಕರೆಂದೂ ಎರಡು ಬಗೆ. ಒಬ್ಬನು ಉದಾಸೀನನಾಗಿದ್ದರೂ ಆಸ್ತಿಕನಾಗಿದ್ದರೆ ಅವನು ಆ ಯೋಗಿಯ ಒಳ್ಳೇನಡವಳಿಕೆಗಳನ್ನು ನೋಡಿ ತಾನೂ ಅಂಥ ನಡವಳಿಕೆಗಳನ್ನೇ ಹಿಡಿಯುತ್ತಾನೆ ದೊಡ್ಡವರು ಹೇಗೆ ನಡೆಯುತ್ತಾರೋ ಅದರಂತೆ ಇತರರು ನಡೆಯುವರೆಂದೂ ಅವನು ಮಾಡಿದ್ದೇ ಇತರರಿಗೆ ಉದಾಹರಣೆ ಯೆಂದೂ ಸ್ಮೃತಿಯು ಹೇಳುವುದು. ಆ ಉದಾಸೀನನು ನಾಸ್ತಿಕನಾಗಿದ್ದರೆ ಆ ಯೋಗಿಯ ದೃಷ್ಟಿ ಅವನ ಮೇಲೆ ಬಿದ್ದಮಾತ್ರಕ್ಕೇ ಅವನ ಎಷ್ಟೋ ಪಾಪಗಳು ಹೋಗಿಬಿಡುತ್ತವೆ. ಯಾರು ಆತ್ಮಸ್ವರೂಪವನ್ನು ಅನುಭವಕ್ಕೆತಂದುಕೊಳ್ಳುವತನಕ ಸಾಧಿಸುತ್ತಾರೋ ಅಂಥವರ-

ದೊಂದು ಕುಡಿನೋಟದಿಂದಲೇ ಎಲ್ಲರ ಪಾಪಗಳೂ ದೂರವಾಗುವುವು. ಹೀಗೆ ಹೆಚ್ಚು ಹೆಚ್ಚಿನ ಯೋಗಭೂಮಿಕೆಗಳನ್ನು ಸಾಧಿಸುವದು ತನಗೆ ಮಾತ್ರವೇ ಅಲ್ಲದೆ ಇತರರಿಗೆ ಕೂಡ ಉಪಕಾರವಾಗಿರುವುದು. ಯಾವನ ಮನಸ್ಸು ಒಂದು ಸಲ ರೆಪ್ಪೆಹೊಡೆಯುವಷ್ಟು ಹೊತ್ತಾದರೂ ಪರಮಾತ್ಮವಿಚಾರದಲ್ಲಿ ನೆಲೆಯಾಗಿ ನಿಲ್ಲುವದೋ ಅವನು ಸೃಷ್ಟಿಯಲ್ಲಿ-ರುವ ಎಲ್ಲಾ ತೀರ್ಥಗಳಲ್ಲಿಯೂ ಸ್ನಾನಮಾಡಿದಂತಾಯಿತು. ಸಮಸ್ತ ಭೂಮಂಡಲ-ವನ್ನೂ ದಾನಮಾಡಿದಂತಾಯಿತು. ಸಹಸ್ರಾರು ಯಜ್ಞಗಳನ್ನು ಸಾಂಗವಾಗಿ ನಡೆಸಿ-ದಂತಾಯಿತು. ಸಮಸ್ತ ದೇವತೆಗಳನ್ನೂ ಪೂಜಿಸಿದಂತಾಯಿತು. ತನ್ನ ಪಿತೃಗಳನ್ನೆಲ್ಲಾ ಸಂಸಾರವೆಂಬ ನರಕದಿಂದ ಮೇಲಕ್ಕೆತ್ತಿದಂತಾಯಿತು. ಮತ್ತು ಮೂರು ಲೋಕದವರಿಂ-ದಲೂ ಪೂಜೆಯನ್ನುಪಡೆಯುವ ಯೋಗ್ಯತೆಯನ್ನು ಹೊಂದಿದಂತಾಯಿತು. ಯಾವನ ಮನಸ್ಸು ಅಖಂಡಜ್ಞಾನಾಕಾರವಾದ ಪರಬ್ರಹ್ಮಸ್ವರೂಪದಲ್ಲಿ ಒಂದಾಗಿ ಹೋಗಿಬಿಡು-ವುದೋ ಅವನ ಕುಲವೆಲ್ಲಾ ಪಾವನವಾಯಿತು. ಅವನ ತಾಯಿ ಕೃತಾರ್ಥಳಾದಳು. ಅವ-ನಿಂದ ಭೂದೇವಿಯು ಪುಣ್ಯವತಿಯಾದಳು.

ಈ ಯೋಗಿಗಳ ಶಾಸ್ತ್ರೀಯವಾದ ವ್ಯವಹಾರಮಾತ್ರವೇ ತಪಸ್ಸಲ್ಲ. ಅವರು ಮಾಡುವ ಲೌಕಿಕವಾದ ಕೆಲಸಗಳು ಕೂಡ ತಪಸ್ಸೇ. ತೈತ್ತಿರೀಯ ಶಾಖೆಯವರು ಆ ಯೋಗಿಯಮಹಿಮೆಗಳನ್ನು ಹೇಳಿ ಯೋಗಿಯ ಅವಯವಗಳನ್ನೆಲ್ಲಾ ಯಜ್ಞಕ್ಕೆ ಸಾಧನವಾದ ದ್ರವ್ಯಗಳೆಂದು ವರ್ಣಿಸಿದ್ದಾರೆ ನೋಡಿರಿ " ಈ ಯೋಗಿ ಮಾಡುತ್ತಿರುವ ಯಜ್ಞಕ್ಕೆ ಆತ್ಮನೇ ಯಜಮಾನ, ಶ್ರದ್ಧೆಯೇ ಹೆಂಡತಿ, ಶರೀರವೇ ಅರಳೀಕಟ್ಟಿಗೆ, ಎದೆಯೇ ಜಗುಲಿ, ಕೂದಲುಗಳೇ ದರ್ಭೆ, ಜುಟ್ಟೇ ವೇದವು, ಹೃದಯವೇ ಆಹುತಿಯಾ-ಗವ ಪಶುವನ್ನು ಕಟ್ಟುವ ಕಂಭ, ಬಯಕೆಯೇ ತುಪ್ಪ, ಕೋಪವೇ ಪಶು, ತಪಸ್ಸೇ ಬೆಂಕಿ, ಇಂದ್ರಿಯಗಳನ್ನು ಬಿಗಿಹಿಡಿಯುವಿಕೆಯೇ ಅಗ್ನಿಯನ್ನು ಗೊತ್ತಾದ ಸ್ಥಿತಿಯಲ್ಲಿ-ಡುವ ಸಾಧನ, ದಾನವೇ ದಕ್ಷಿಣೆ, ಮಾತೇ ದೇವತೆಗಳನ್ನು ಆಹ್ವಾನಮಾಡುವವನು, ಪ್ರಾಣವೇ ಸಾಮಗಾನ ಮಾಡುವವನು, ಕಣ್ಣೇ ಯಾಗಮಾಡುವವನು, ಮನಸ್ಸೇ ಯಾಗವನ್ನು ನೋಡಿಕೊಳ್ಳುವ ಬ್ರಹ್ಮ, ಕಿವಿಯೇ ಅಗ್ನಿಯನ್ನು ನೋಡಿಕೊಳ್ಳು-ವವನು. ಆ ಯೋಗಿಯ ತಪಸ್ಸೂ ಧ್ಯಾನವೂ ಒಳಗೂ ಹೊರಗೂ ಒಂದೇ ಆಗಿರುವುದು. ಯಾರನ್ನೂ ನೋಯಿಸದೇ ಇರುವದೂ ಯಾವಾಗಲೂ, ನಿಜವನ್ನಾಡುವುದೂ, ಇವೆಲ್ಲಾ ಅವನ ದಕ್ಷಿಣೆಗಳೆಂದು, ಋಷಿಯೋಗರು ಹೇಳಿರುವರು. ಮೇಲೆ ಹೇಳಿದ ತೈತ್ತಿರೀಯ ನಾರಾಯಣಪನ್ನದ ಕೊನೆಯ ಅನುವಾಕದ ನಡುವೆ ಯೋಗಿಯ ನಡೆನುಡಿಗಳೂ ಅವನು ಬದುಕಿರುವ ಕಾಲಗಳೂ, ಜ್ಯೋತಿಷ್ಟೋಮವೆಂಬ ಯಜ್ಞಕ್ಕೂ ಬೇರೆ ಎಲ್ಲಾ ಯ-ಜ್ಞಗಳಿಗೂ, ಭಾಗಗಳಿದ್ದಂತೆ, ಇರುವದೆಂದು ಹೇಳಿದೆ. ಹೇಗೆಂದರೆ. ಎಲ್ಲಿಯವರೆಗೆ ಇ-ವನು ಬದುಕಿರುವನೋ ಅಲ್ಲಿಯವರಿಗೆ ದೀಕ್ಷೆ. ಇವನು ತಿನ್ನುವುದು ಹವಿಸ್ಸು. ಇವನು ಕುಡಿಯುವುದೇ ಸೋಮಪಾನ. ಇವನು ಆಡುವುದೇ ಉಪಸದವು. ಇವನು ಓಡಾಡುವುದು,

ಬಳಕ್ಕೆ ಬರುವುದು, ಏಳುವುದು ಇವುಗಳೇ, ಪ್ರವರ್ಗ್ಯ. ಮುಖವೇ ಆಹವನೀಯವು, ಮಾತಾಡುವುದೇ ಆಹುತಿ, ಇವನ ಜ್ಞಾನವೇ ಹೋಮ, ಸಾಯಂಕಾಲವೂ ಬೆಳಗ್ಗೆಯೂ ಇವನು ಊಟಮಾಡುವುದೇ ಸಮಿತ್ತು. ಬೆಳಿಗ್ಗೆ ಮಧ್ಯಾಹ್ನ ಸಾಯಂಕಾಲ ಇವೇ ಹವನ, ಹಗಲು ರಾತ್ರಿಗಳೇ ದರ್ಶ ಮತ್ತು ಪೂರ್ಣಮಾಸಗಳು, ಪಕ್ಷ ತಿಂಗಳು ಇವೇ ಚಾತು-ರ್ಮಾಸ್ಯಗಳು, ಋತುಗಳೇ ಪಶುಬಂಧನ. ಸಂವತ್ಸರ ಪರಿವತ್ಸರ ಮೊದಲಾದ ಇವನ ಜೀವಿತಕಾಲವೇ ಸರ್ವಸ್ವವನ್ನೂ ದಕ್ಷಿಣೆಯಾಗಿ ಕೊಡುವ ಯಜ್ಞವು. ಇದರ ಮುಂದಿನ ಅನುವಾಕದಲ್ಲಿ ಸರ್ವಯಜ್ಞಸ್ವರೂಪನಾಗಿರುವ ಯೋಗಿಯನ್ನು ಉಪಾಸನೆ ಮಾಡಿ-ದಾತನಿಗೆ ಸೂರ್ಯಚಂದ್ರಮಸರೆಂಬ ಕಾರ್ಯಬ್ರಹ್ಮ, ಕಾರಣಬ್ರಹ್ಮರ, ಐಕ್ಯರೂಪವಾದ ಕ್ರಮ ಮುಕ್ತಿಯಾಗುವುದೆಂದು ಹೇಳಿರುತ್ತದೆ. ಇದೇ ಮುಪ್ಪಿನವರೆಗೂ ಮಾಡುವ ಅಗ್ನಿ-ಹೋತ್ರವೆಂಬ ಯಜ್ಞವು. ಈ ರೀತಿಯಲ್ಲಿ ತಿಳಿದಾತನು ಉತ್ತರಾಯಣದಲ್ಲಿ ಸತ್ತರೆ, ದೇವಲೋಕವನ್ನು ಪಡೆದು ಸೂರ್ಯನ ಸಾಯುಜ್ಯವನ್ನು ಪಡೆಯುತ್ತಾನೆ. ದಕ್ಷಿ-ಣಾಯನದಲ್ಲಿ ಸತ್ತರೆ ಪಿತೃಲೋಕವನ್ನು ಹೊಂದಿ ಚಂದ್ರನ ಸಾಲೋಕ್ಯವನ್ನೂ ಸಾ-ಯುಜ್ಯವನ್ನೂ ಪಡೆಯುವನು. ಈ ಸೂರ್ಯ ಚಂದ್ರರ ಮಹಿಮೆಗಳನ್ನು ತಿಳಿದಾತನು ಅವರನ್ನು ಪಡೆದು ಕೊನೆಗೆ ಚತುರ್ಮುಖ ಬ್ರಹ್ಮಸ್ಥಾನವನ್ನೂ ಅನಂತಗ ಜ್ಞಾನವನ್ನೂ ಹೊಂದಿ ಸತ್ಯಜ್ಞಾನಾನಂದರೂಪವಾದ ಬ್ರಹ್ಮಪದವಿಯನ್ನೇ ಪಡೆಯುತ್ತಾನೆ. " ಈ ಮಂತ್ರದಲ್ಲಿ ಮುಪ್ಪು ಮರಣಗಳವರೆಗೂ ಯೋಗಿಯು ಮಾಡುವ ಕಾರ್ಯವೇ, ವೇದೋಕ್ತಾಗ್ನಿಹೋತ್ರವೆಂದು ತಿಳಿದು ಉಪಾಸನೆ ಮಾಡುವಾತನಿಗೆ ಭಾವನೆಗೆ ತಕ್ಕಂತೆ ಕೈವಲ್ಯದವರೆಗೂ ಫಲವಾಗುತ್ತದೆ ಯೆಂದು ಹೇಳಿರುತ್ತದೆ—ಹೀಗೆ ಜೀವನ್ಮುಕ್ತಿಗೆ ತಪಸ್ಸೆಂಬುದು ಎರಡನೆಯ ಪ್ರಯೋಜನ—ಯೋಗಿಯು ಜೀವನ್ಮುಕ್ತಿಯನ್ನು ಅನು-ಭವಕ್ಕೆ ತಂದುಕೊಳ್ಳುತ್ತ ಇದ್ದುಬಿಟ್ಟರೆ ಅವನು ಇತರರ ಬಾಯಿಗೆ ಬರುವ ಸಂಭವ-ವಿರುವುದಿಲ್ಲ. ಅದು ಮೂರನೆಯ ಪ್ರಯೋಜನ. ಹೊರಗಣ ಆಗುಹೋಗುಗಳ ಕಡೆಗೆ ಕಡೆಗಣ್ಣು ಕೂಡ ಹಾಕದೆ ತನ್ನ ಆನಂದದಲ್ಲಿ ತಾನಿರುವ ಯೋಗೀಶ್ವರನಮೇಲೆ ಲೌಕಿಕ ನಾಗಲಿ ಶಾಸ್ತ್ರಜ್ಞನಾಗಲಿ ಯಾವನೂ ಬಾಯಿ ಮಾಡುವುದಕ್ಕಾಗುವುದಿಲ್ಲ. ದೂರು ಎರಡು ರೀತಿಯಾಗಿರುವುದು. ಒಂದುಜಗಳ, ಇನ್ನೊಂದು ನಿಂದೆ. ಯೋಗಿಗೆ ಸಿಟ್ಟು ಮೊ-ದಲಾದವುಗಳೇನಾದರೂ ಇಲ್ಲದೆ ಇರುವುದರಿಂದ ಅವನಮೇಲೆ ಲೌಕಿಕರು ಯಾರುತಾನೆ ಕಾಲುಕೆರೆದು ಜಗಳವನ್ನು ತೆಗೆದು ಅವನನ್ನು ದೂರುತ್ತಾರೆ? ತನ್ನಮೇಲೆ ಯಾರಾದರೂ ಸಿಟ್ಟು ತೋರಿಸಿದರೆ ಅವನು ಅದರ ಮುಯ್ಯಿ ತೀರಿಸುವುದಕ್ಕೆ ಹೋಗುವುದಿಲ್ಲ. ಯಾ-ವನಾದರೂ ಬಂದು ಜುಟ್ಟು ಹಿಡಿದು ಜಗ್ಗಿದರೆ " ಏನಯ್ಯಾ ನಿನಗೆ ಕ್ಷೇಮವೆ? ಎಂದು ಕೇಳುತ್ತಾನೆ! ಒಬ್ಬನು ಬಂದು ಬಾಯಿಗೆ ಬಂದಂತೆ ಬಯ್ದರೂ ತಡೆದುಕೊಳ್ಳುವನೇ ಹೊರತು ಅವನಿಗೆ ಅವಮಾನವನ್ನು ಮಾಡುವುದಿಲ್ಲ. ಜೀವನ್ಮುಕ್ತಿಗಿಂತಲೂ ಹಿಂದಿನದು ವಿದ್ವತ್ಸನ್ಯಾಸ ಅದಕ್ಕಿಂತಲೂ ಹಿಂದಿನದು ತತ್ವಜ್ಞಾನ ಅದಕ್ಕಿಂತಲೂ ಹಿಂದಿನದು ವಿವಿ-

ಪಾಸನ್ಯಾಸ. ಹೀಗಿರುವಾಗ ವಿವಿದಿಷಾಸನ್ಯಾಸಕಾಲಕ್ಕೇ ಬಿಟ್ಟುಹೋದ ಸಿಟ್ಟು ಮೊದಲಾದುವುಗಳ ಸುದ್ದಿಗೆ ಜೀವನ್ಮುಕ್ತಿಯ ಸಂದರ್ಭದಲ್ಲಿ ಅವಕಾಶವೆಲ್ಲಿರುವುದೆಂದರೆ ನಿಜ. ಆದ್ದರಿಂದಲೇ ಜೀವನ್ಮುಕ್ತನಲ್ಲಿ ಸಿಟ್ಟುಮೊದಲಾದುವುಗಳ ವಾಸನೆಯೇ ಇರುವುದಿಲ್ಲ. ಎಷ್ಟೇ ಹಿಂದಿನ ವಿವಿದಿಷಾಸನ್ಯಾಸದ ಕಾಲದಲ್ಲಿಯೇ ಕಾಲಿಗೆ ಬುದ್ಧಿಹೇಳಿದ ಸಿಟ್ಟು ಮೊದಲಾದುವುಗಳು ಅದಕ್ಕಿಂತ ಹೆಚ್ಚಿನದಾದ ತತ್ವಜ್ಞಾನದ ಸ್ಥಿತಿಯಲ್ಲಿ ಹೇಗೆ ಇದ್ದಾವು? ಅದರಮೇಲಿನದಾದ ವಿದ್ವತ್ಸನ್ಯಾಸದ ಮತ್ತು ಜೀವನ್ಮುಕ್ತಿಯ ಸ್ಥಿತಿಯಲ್ಲಂತು ಅವುಗಳ ಗಂಧವೇ ಇಲ್ಲ. ಆದುದರಿಂದ ಯೋಗಿಯೊಡನೆ ಲೌಕಿಕರು ಯಾರೂ ಜಗಳಕ್ಕೆ ಹೋಗುವುದಿಲ್ಲ. ನಿಂದಾರೂಪವಾದ ದೂರಿಗೂ ಅವನು ದೂರನು. ಹೇಗೆಂದರೆ ನಿಂದೆಗೆ ನಿಶ್ಚಯರೂಪವಾದ ಕಾರಣವೇ ಅವನಲ್ಲಿ ತೋರುವುದಿಲ್ಲ. ಯಾವನು ಉತ್ತಮಜಾತಿಯವನೆಂದಾಗಲಿ, ಕೀಳುಜಾತಿಯವನೆಂದಾಗಲಿ, ಬಹಳ ಓದಿದವನೆಂದಾಗಲಿ, ಏನೂ ಓದದವನೆಂದಾಗಲಿ, ಒಳ್ಳೇನಡತೆಯವನೆಂದಾಗಲಿ, ಕೆಟ್ಟ ನಡತೆಯವನೆಂದಾಗಲಿ ಒಬ್ಬರಿಗೂ ಗೊತ್ತಾಗದಂತೆ ಇರುವನೋ ಅವನೇ ಜೀವನ್ಮುಕ್ತನೆಂದು ಸ್ಮೃತಿಯುಂಟು. ಶಾಸ್ತ್ರಜ್ಞನಾದರೂ ಶಾಸ್ತ್ರದ ವಿಷಯವನ್ನು ಹಿಡಿದು ಅವನನ್ನು ನಿಂದಿಸುವನೋ ಅಥವಾ ಯೋಗಾಭ್ಯಾಸದ ವಿಷಯದಲ್ಲಿ ನಿಂದಿಸುವನೋ? ಯೋಗಿಯಾದವನು ಇನ್ನೊಬ್ಬನ ಶಾಸ್ತ್ರದ ವಿಷಯವನ್ನೇ ದೂಷಿಸುವುದಿಲ್ಲ. ಅವನು ಸುಮ್ಮನೆ ನಾಲಗೆ ನೋಯುವಂತೆ ಕಂಡಕಂಡ ಶಾಸ್ತ್ರಗಳಿಗೆಲ್ಲಾ ಬಾಯಿ ಹಾಕದೆ ಉಳಿದ ಮಾತುಗಳನ್ನೆಲ್ಲಾ ಬಿಟ್ಟು ಆತ್ಮಸ್ವರೂಪ ವೊಂದನ್ನೇ ತಿಳಿಯುತ್ತಿರುವನು. ಅವನು ತನಗೆ ಸಮ್ಮತವಾದ ಶಾಸ್ತ್ರದ ವಿಷಯವನ್ನಾದರೂ ತನ್ನ ಪ್ರತಿವಾದಿಯ ಮುಂದೆ ಸಿದ್ಧಾಂತಮಾಡುವುದಕ್ಕೆ ಹೋಗುವುದಿಲ್ಲ. ಕಾಳನ್ನು ತೆಗೆದುಕೊಂಡು ಸಿಪ್ಪೆಯನ್ನು ಬಿಸಾಡುವಂತೆ ಅವನು ಆತ್ಮಸ್ವರೂಪವನ್ನು ತಿಳಿದುಕೊಂಡು ಗ್ರಂಥಗಳನ್ನೆಲ್ಲಾ ಬಿಟ್ಟಿರುವನು. ಯಾವನು ತನಗೆ ಪ್ರತಿವಾದಿಯಾಗಿ ಬಂದಿರುತ್ತಾನೋ ಅವನನ್ನು ಕಂಡು ತನ್ನಂತೆಯೇ ಭಾವಿಸುವಾಗ ಅವನನ್ನು ಗೆಲ್ಲಬೇಕೆಂಬ ಇಚ್ಛೆ ಹುಟ್ಟುವುದು ಹೇಗೆ? ನಾಸ್ತಿಕರ ಹೊರತು ಉಳಿದವರೆಲ್ಲರೂ ಮೋಕ್ಷವುಂಟೆಂದು ಒಪ್ಪಿಕೊಳ್ಳುವರಾದ್ದರಿಂದ ಯೋಗಿಯನ್ನು ಆಕ್ಷೇಪಿಸುವುದಕ್ಕೆ ಅವರು ಉಸರೆತ್ತುವುದಿಲ್ಲ. ಜೈನರು, ಬೌದ್ಧರು, ವೈಶೇಷಿಕರು, ನೈಯಾಯಿಕರು, ಶೈವರು, ವೈಷ್ಣವರು, ಸಾಂಖ್ಯರು, ಯೋಗಮತದವರು ಮೊದಲಾದವರೆಲ್ಲಾ ತಮ್ಮತಮ್ಮ, ಮೋಕ್ಷಶಾಸ್ತ್ರಗಳಲ್ಲಿ, ಬೇರೆಬೇರೆ ರೀತಿಯಾಗಿ ಹೇಳಿದ್ದರೂ, ಮೋಕ್ಷಕ್ಕೆ ಸಾಧನವಾದಂಥ ಯಮ ನಿಯಮ ಮೊದಲಾದ ಎಂಟು ಸಾಧನಗಳನ್ನು ಎಲ್ಲರೂ ಒಪ್ಪಿಕೊಳ್ಳುವರು. ಆದಕಾರಣ ಯೋಗೀಶ್ವರನು ಎಲ್ಲರಿಗೂ ಒಪ್ಪಾಗಿರುವನೇ ಹೊರತು ಯಾರೊಬ್ಬರ ದೂರಿಗೂ ಸಿಕ್ಕುಬೀಳುವುದಿಲ್ಲ. ಈ ಅಭಿಪ್ರಾಯದಿಂದ ವಸಿಷ್ಠರು ಹೇಳುವುದೇನೆಂದರೆ " ಯಾವನಿಗೆ ಇಂಥಾಜನ್ಮ ಉಂಟಾಗಿರುವುದೋ ಅವನನ್ನು ಎಲ್ಲಾ ವಿದ್ಯೆಗಳೂ ಉತ್ತಮವಾದ ಬಿದಿರಿನಲ್ಲಿ ಮುತ್ತುಗಳು ಸೇರಿರುವಂತೆ ಸೇರಿಕೊಳ್ಳುವವು.

ಸ್ತ್ರೀಯರು ಅಂತಃಪುರವನ್ನೇ ಸೇರುವಂತೆ ಆರ್ಯ ಸ್ವಭಾವವೂ, ಮನೋಹರವಾ ನಡತೆಯೂ, ಎಲ್ಲರಲ್ಲಿಯೂ ಮಿತ್ರಭಾವವೂ, ಶಾಂತತೆಯೂ, ಬಂಧನಗಳಿಲ್ಲದೆ ಇರುವುದ ತಿಳಿವಳಿಕೆಯೂ ಸೇರುವುವು. ಮನೋಹರವಾದ ಆಚಾರದಿಂದ ಆವನು ಎಲ್ಲರಿಗೂ ಬೇ ಕಾಗಿರುವನು. ಕಾಡುಮೃಗಗಳು ಒಳ್ಳೇ ಧ್ವನಿಯನ್ನು ಕೊಡುವ ಬಿದಿರುಮೆಳೆಯನು ಸೇರುವಂತೆ ಎಲ್ಲರೂ ಅವನು ಬೇಕೆನ್ನುವರು. ಒಳ್ಳೇ ನಿದ್ರೆಯಲ್ಲಿ ಯಾವ ವೃತ್ತಿಯೂ ಇಲ್ಲದಂತೆ ಇರುವವನಾಗಿದ್ದರೂ ಯಾವನಮನಸ್ಸು ಯಾವಾಗಲೂ ಎಚ್ಚರವುಳ್ಳದ್ದಾ ಗಿರುವುದೋ ಅವನು ಮುಕ್ತನು. ಸಮಾಧಾನ ಉಳ್ಳವನ ಬಳಿಗೆ ಹೋದವರೆಲ್ಲಾ, ಎಂಥ ಕಠಿಣ ಮನಸ್ಸಿನವರಾಗಲಿ ಕೋಮಲ ಮನಸ್ಸಿನವರಾಗಲಿ ತಾಯಿಯ ಬಳಿಗೆ ಹೋದರೆ ಹೇಗೋ ಹಾಗೆ ಸಮಾಧಾನವನ್ನೇ ಪಡೆಯುವರು. ತಪಸ್ವಿಗಳಲ್ಲಿಯೂ ಬಹಳವಾ ತಿಳಿದವರಲ್ಲಿಯೂ ಯಜ್ಞವನ್ನು ಮಾಡುವರಲ್ಲಿಯೂ ರಾಜರಲ್ಲಿಯೂ ಹೆಚ್ಚಿನ ಗುಣಾ- ಢ್ಯರಲ್ಲಿಯೂ ಸಮಾಧಾನಿಯಾದವನೇ ಶೋಭಿಸುವವನು. ಹೀಗೆ ಇತರರ ದೂರುಗಳಿ- ಗೊಳಗಾಗದೆ ಇರುವುದು ಮೂರನೆಯ ಪ್ರಯೋಜನ.

ಇನ್ನು ದುಃಖನಾಶ ಮತ್ತು ಸುಖಾವಿರ್ಭಾವ ಎಂಬ ನಾಲ್ಕನೇ ಮತ್ತು ಐದನೇ ಪ್ರಯೋಜನಗಳು ಪಂಚದಶೀ ಎಂಬ ಗ್ರಂಥದಲ್ಲಿ ವಿದ್ಯಾನಂದವೆಂಬ ಅಧ್ಯಾಯದಲ್ಲಿ ಹೇಳಿವೆ. ಅವೆರಡರ ಅಭಿಪ್ರಾಯವೂ ಇಲ್ಲಿ ಸಂಕ್ಷೇಪವಾಗಿ ಹೇಳಲಾಗುವುದು. ತಾನು ಪರಮಾ- ತ್ಮಸ್ವರೂಪನೆಂದೇ ತಿಳಿದಮೇಲೆ ಯಾರಿಗಾಗಿ ಏನನ್ನು ಬಯಸಿ ಸಂಕಟಪಡಬೇಕು? ಆದು- ದರಿಂದ ಈ ಲೋಕದ ಸಂಬಂಧವಾದ ದುಃಖವು ದೂರವಾದಂತಾಯಿತು. ತಮ್ಮ ಪುಣ್ಯ- ಕರ್ಮಗಳಾಗಲಿ ಪಾಪಕರ್ಮಗಳಾಗಲಿ ಆತ್ಮಸ್ವರೂಪನಾದ ತನಗೆ ಸಂತಾಪವನ್ನುಂ- ಟುಮಾಡಲಾರವಾದಕಾರಣ ಪರಲೋಕದ ಸಂಬಂಧವಾದ ದುಃಖವೂ ಇಲ್ಲ. ಸುಖವು ತೋರುವುದರಲ್ಲಿಯೂ ಮೂರುವಿಧವುಂಟು. ಬೇಕಾದದ್ದೆಲ್ಲಾ ಸಿಕ್ಕಿರುವುದೊಂದು, ಮಾ- ಡತಕ್ಕದ್ದನ್ನು ಮಾಡಿರುವುದೊಂದು, ಮತ್ತು ಪಡೆಯತಕ್ಕದ್ದನ್ನು ಪಡೆದಿರುವುದೊಂದು. ಬೇಕಾದದ್ದೆಲ್ಲಾ ಸಿಕ್ಕಿರುವುದೆಂಬುದು ಮೂರು ಬಗೆ. ಎಲ್ಲಕ್ಕೂ ಸಾಕ್ಷಿಯಾಗಿರುವಿಕೆ ಯೊಂದು, ಯಾವುದರ ಬಯಕೆಯೂ ಬಾಧಿಸದಿರುವುದೊಂದು. ಮತ್ತು ಭೋಗಗಳನ್ನು ಅನುಭವಿಸುವವರೆಲ್ಲಾ ತನ್ನ ಆತ್ಮಸ್ವರೂಪವೇ ಯೆಂದು ತಿಳಿಯುವದೊಂದು. ಬ್ರಹ್ಮ- ನನ್ನು ಮೊದಲುಗೊಂಡು ಒಂದು ಮೋಟುಮರದವರಿಗೂ ಇರುವ ದೇಹಗಳಲ್ಲೆಲ್ಲಾ ಸೇರಿಕೊಂಡಿರುವ ಸಾಕ್ಷಿಚೈತನ್ಯಸ್ವರೂಪವಾದ ಬ್ರಹ್ಮವೇ ತಾನೆಂದು ತಿಳಿಯುವವನಿಗೆ ತನ್ನ ದೇಹದಲ್ಲಿ ಹೇಗೋ ಹಾಗೆ ಇತರರ ದೇಹದಲ್ಲಿಯೂ ( ಸರ್ವಕಾಮಸಾಕ್ಷಿತ್ವಮಸ್ತಿ ) ಎಂದರೇನು, ಲೋಕದಲ್ಲಿ ಭಕ್ತರಾದ ಜನರು ಯಾವ ಭೋಗದ ಬಯಕೆಯೆಂಬ ಬೇಗೆ- ಯಿಂದಲೂ ಬೇಯದೆ ಇರುವಿಕೆ ಯೆಂಬುವೇ ಬೇಕಾದದ್ದೆಲ್ಲಾ ಸಿಕ್ಕಿರುವುದೆಂಬರ್ಥವನ್ನು ತೋರಿಸುತ್ತದೆ. ಚಕ್ರವರ್ತಿಯ ಪದವಿಯನ್ನು ಮೊದಲುಮಾಡಿಕೊಂಡು ಬ್ರಹ್ಮಪದವಿ- ಯವರಿಗೆ ಇರುವ ಹೆಚ್ಚು ಹೆಚ್ಚಿನ ಆನಂದಗಳೆಲ್ಲ ಒಂದಕ್ಕಿಂತ ಒಂದು ನೂರುಪಾಲು

ಹೆಚ್ಚಿನದೆಂದು ಹೇಳುವ ಸಂದರ್ಭದಲ್ಲಿ, ಯಾವ ಬಯಕೆಯ ಬೇಗೆಯಿಂದಲೂ ಬೇಯದೆ ಇರುವಂಥ ಶ್ರೋತ್ರಿಯನ ಆನಂದಕ್ಕೆ ಹೆಚ್ಚಿನದಿನ್ನೊಂದಿಲ್ಲವೆಂದು ಶ್ರುತಿಹೇಳಿರುತ್ತದೆ. ತಾನು ಸದ್ರೂಪದಿಂದಲೂ, ಚಿದ್ರೂಪದಿಂದಲೂ, ಆನಂದರೂಪದಿಂದಲೂ, ಎಲ್ಲೆಲ್ಲಿಯೂ ಇರುವಂಥವನೆಂದು ಭಾವಿಸುತ್ತಿರುವವನು, ಭೋಗಗಳನ್ನನುಭವಿಸುವವರ ಆತ್ಮನಾಗಿಯೂ ಇದ್ದೇ ಇರುವನು. ಜ್ಞಾನವೆಂಬ ಅಮೃತವನ್ನು ಕುಡಿದು ತೃಪ್ತನಾದಂಥ ಯೋಗಿಯು ಭೂಮಿಯ ಮೇಲೆ ಹುಟ್ಟಿದುದಕ್ಕೆ ಏನುಮಾಡಬೇಕೋ ಅದನ್ನು ಮಾಡಿದಂತಾಯಿತು. ಅವನು ಮಾಡತಕ್ಕದ್ದಿನ್ನೇನೂ ಇಲ್ಲ. ಏನಾದರೂ ಉಂಟೆಂದರೆ ಅವನು ಜ್ಞಾನಿಯೇ ಅಲ್ಲ. ಆತ್ಮಸ್ವರೂಪದಲ್ಲಿಯೇ ಆನಂದಪಡುತ್ತ ಅದರಲ್ಲಿ ತೃಪ್ತನಾಗಿರುವವನು ಇನ್ನೇನೂ ಮಾಡತಕ್ಕದಿಲ್ಲ. ಆತ್ಮಸ್ವರೂಪವೊಂದು ಸಿಕ್ಕಿದರೆ ಏನನ್ನು ಪಡೆಯಬೇಕೋ ಅದನ್ನು ಪಡೆದಂತಾಯಿತು. ಜ್ಞಾನವನ್ನು ಪಡೆದಂಥ ಜನಕನನ್ನು ಕುರಿತು “ ಜನಕ! ಇನ್ನು ಯಾವ ಭಯವೂ ಇಲ್ಲದಂಥ ಸ್ಥಿತಿಯನ್ನು ಪಡದಿರುವೆ ” ಎಂದು ಶ್ರುತಿ ಹೇಳಿರುತ್ತದೆ. ಬ್ರಹ್ಮಸ್ವರೂಪವನ್ನು ತಿಳಿಯುವುದೆಂದರೆ ಬ್ರಹ್ಮಸ್ವರೂಪವೇ ಆಗಿಬಿಡುವುದು. ಹೀಗೆ ದುಃಖವಿನಾಶವೂ ಸುಖಾವಿರ್ಭಾವವೂ ನಾಲ್ಕನೇ ಭೂಮಿಕೆಯಾದ ತತ್ವಜ್ಞಾನದಿಂದಲೇ ಆಗಿರುವಾಗ ಇವುಗಳನ್ನು ಹೆಚ್ಚಿನ ಭೂಮಿಕೆಗಳಲ್ಲಿರುವ ಜೀವನ್ಮುಕ್ತಿಯ ಪ್ರಯೋಜನಗಳೆಂದ ಹೇಳುವುದು ಸರಿಯಲ್ಲವೆಂದು ತಿಳಿಯಬಾರದು ಜ್ಞಾನಮಾತ್ರದಲೇ ದುಃಖನಾಶವೂ ಸುಖಾವಿರ್ಭಾವವೂ ಆಯಿತು, ನಿಜ. ಜೀವನ್ಮುಕ್ತಿಯಲ್ಲಿ ತತ್ವಜ್ಞಾನದಂತೆ ಅವೂ ಚೆನ್ನಾಗಿ ಸುರಕ್ಷಿತವಾಗಿರುವುವು.

ಹೀಗೆ ಜೀವನ್ಮುಕ್ತಿಯಿಂದ ಐದುಪ್ರಯೋಜನಗಳಿರುವುದರಿಂದ ಲೋಕವ್ಯವಹಾರದಲ್ಲಿ ಬೀಳುವ ಜ್ಞಾನಿಗಿಂತಲೂ ಸಮಾಧಾನವನ್ನು ಬೆಳೆಸಿಕೊಳ್ಳುತ್ತಿರುವ ಯೋಗೀಶ್ವರನು ಮೇಲಾದವನೆಂದು ಹೇಳಬೇಕಾಗುವುದಷ್ಟೆ? ಹಾಗಲ್ಲವೆಂದು, ಶ್ರೀರಾಮನಿಗೂ ವಸಿಷ್ಠರಿಗೂ ನಡೆದಿರುವ ಸಂಭಾಷಣೆಯು ತಿಳಿಸುವುದು. “ ಮಹಾತ್ಮರಾದ ವಸಿಷ್ಠರೆ, ಒಬ್ಬನು ಸಮಾಧಿಯ ಭೂಮಿಕೆಯನ್ನು ಪಡೆದವನಾದರೂ ವ್ಯವಹಾರದಲ್ಲಿ ಬೀಳುತ್ತಾನೆ. ಇನ್ನೊಬ್ಬನು ಏಕಾಂತದಲ್ಲಿ ಕುಳಿತು ಸಮಾಧಿಯನ್ನೇ ಬೆಳಸಿಕೊಳ್ಳುತ್ತಿರುತ್ತಾನೆ ಇವರಿಬ್ಬರಲ್ಲಿ ಯಾರು ಮೇಲು ” ಎಂದು ಶ್ರೀರಾಮನು ಕೇಳಿದ್ದಕ್ಕೆ ವಸಿಷ್ಠರು ಸಮಾಧಿಯೆಂದರೇನು? ಕಾಣುವುದೆಲ್ಲಾ ಮೂರುಗಳಿಗೆಯ ಬಾಳಿನದೆಂದು ತಿಳಿದು ಅವುಗಳನ್ನು ತನ್ನ ಮನಸ್ಸಿಗೆ ಹಚ್ಚಿಕೊಳ್ಳದಿದ್ದರಾಯಿತು. ಈ ಕಾಣತಕ್ಕ ವಸ್ತುಗಳಿಗೂ ನನಗೂ ಏನೂ ಸಂಬಂಧವಿಲ್ಲವೆಂಬ ಅಭಿಪ್ರಾಯವನ್ನು ಗಟ್ಟಿಮಾಡಿಕೊಂಡು ಯಾವುದನ್ನೂ ಹಚ್ಚಿಕೊಳ್ಳದೆ ಒಬ್ಬನು ಚೆನ್ನಾಗಿ ವ್ಯವಹಾರದೊಳಕ್ಕೆ ಬೀಳುತ್ತಾನೆ. ಇನ್ನೊಬ್ಬನು ಧ್ಯಾನಕ್ಕೆ ಕುಳಿತುಕೊಳ್ಳುತ್ತಾನೆ. ಇಬ್ಬರೂ ಒಂದೆ. ಮನಸ್ಸಿಗೆ ಯಾವದನ್ನೂ ಹಚ್ಚಿಕೊಳ್ಳದೆ ಸಮಾಧಾನದಿಂದಿರುವುದೇ ಬಹು ಹೆಚ್ಚಿನ ತಪಃಫಲ. ” ಎಂದು ಹೇಳಿದ್ದಾರೆ. ಮುಖ್ಯಸಾರಾಂಶವೇನೆಂದರೆ ಮನಸ್ಸಿಗೆ ಯಾವುದೂ ಹತ್ತದೆ ಇರುವಂತೆ ವಾಸನಾಕ್ಷ-

ಯನ್ನು ಬಲಪಡಿಸಿಕೊಳ್ಳಬೇಕೆಂದಾಯಿತು. ಆದರೂ ಅದರ ಮುಂದಿನ ಮನೋನಾಶದ ಹೆಚ್ಚುಗಾರಿಕೆಯನೇನೂ ಇಲ್ಲವೆಂದು ಹೇಳುವದಿಲ್ಲ. ಮನಸ್ಸಿಗೆ ಏನೂ ಹತ್ತದೆ ಇರುವದೆಂದರೇನು? ಯಾವ ಬಯಕೆಯೂ ಬಾಧಿಸದೆ ಇರುವದು, ಇಷ್ಟೆ. ಒಳಗೆ ಬಯಕೆಯೆಂಬ ಬೇಗೆ ತಲೆದೋರುತ್ತಲೆ ಹೊರಗಣ ಜಗತ್ತೆಲ್ಲಾ ಕಾಡುಗಿಚ್ಚಾಗಿ ಕಾಣುವುದು. ಒಳಗೆ ಮನಸ್ಸು ತಣ್ಣಗೆ ಇದ್ದರೆ ಪ್ರಪಂಚವೆಲ್ಲಾ ಹಾಯಾಗಿ ತೋರುವದು. ಒಬ್ಬನು ಸಮಾಧಿಯನ್ನು ಬೆಳಸಿಕೊಳ್ಳುವುದಕ್ಕೆ ಕುಳಿತಿದ್ದರೂ ಅವನ ಮನಸ್ಸು ವೃತ್ತಿಗಳನ್ನು ಪಡೆಯುತ್ತ ಹೋದರೆ ಅವನ ಸಮಾಧಾನವೆಂಬುದು ಹುಚ್ಚರ ಕುಣಿತಕ್ಕೆ ಸರಿಯೆನಿಸುವದು. ಒಬ್ಬನು ಹುಚ್ಚನಂತೆ ಕುಣಿಯುತ್ತಿದ್ದರೂ, ಅವನ ಮನಸ್ಸು ಯಾವ ವಾಸನೆಯೂ ಇಲ್ಲದ್ದಾದರೆ ಆ ಹುಚ್ಚು ಕುಣಿತವೇ ಸಮಾಧಿಗೆ ಸಮನಾಗುವದು." ಎಂದು ಹೇಳುವರಲ್ಲ! ಎಂದರೆ ಹಾಗಲ್ಲ. ಈಗ ಹೇಳಿದ ಮಾತು ಸಮಾಧಿಯ ಹೆಚ್ಚುಗಾರಿಕೆಯನ್ನು ಮಾತ್ರ ಒಪ್ಪಿಸಿಕೊಂಡು ವಾಸನೆಯನ್ನು ಜರಿದದ್ದಾಗಿದೆ. ಇಲ್ಲಿ ಮಾತಿನ ಸ್ವಾರಸ್ಯವೇನೆಂದರೆ ವ್ಯವಹಾರದಲ್ಲಿ ಬೀಳುವದಕ್ಕಿಂತಲೂ ಸಮಾಧಿಯಲ್ಲಿರುವದು ಮೇಲಿನದೇ ಸರಿ. ಆದರೂ ಆ ಸಮಾಧಿಯು ವಾಸನೆಯಿಂದ ಕೂಡಿದ್ದಾಗಿದ್ದರೆ ಅದು ವಾಸನೆ ಇಲ್ಲದ ವ್ಯವಹಾರಕ್ಕಿಂತ ಕೀಳಾದುದೇ ಹೊರತು ಅದು ಸಮಾಧಿ ಎನಿಸಿಕೊಳ್ಳುವದಿಲ್ಲ. ಸಮಾಧಿಗಾಗಿ ಕುಳಿತವನು ಮತ್ತು ವ್ಯವಹಾರದಲ್ಲಿ ಬಿದ್ದವನು ಇಬ್ಬರೂ ಜ್ಞಾನಿಗಳಾಗಿಲ್ಲದೆ ವಾಸನೆಯಿಂದ ಕೂಡಿದವರಾಗಿದ್ದರೆ ಅವರಲ್ಲಿ ಸಮಾಧಿಗಾಗಿ ಕುಳಿತವನಿಗೆ ಸಮಾಧಿಯು ಉತ್ತಮಲೋಕವನ್ನು ಸಾಧಿಸಿಕೊಡುವಂಥ ಪುಣ್ಯವಾದ್ದರಿಂದ ಮೇಲಾದುದು. ಇಬ್ಬರೂ ಜ್ಞಾನಿಗಳೂ ಆಗಿ ವಾಸನೆ ಇಲ್ಲದವರೂ ಆದರೆ ಆಗಲೂ ವಾಸನಾಕ್ಷಯ ರೂಪವಾದ ಜೀವನ್ಮುಕ್ತಿಯನ್ನು ಕಾಪಾಡಿಕೊಂಡು ಮನೋನಾಶರೂಪವಾದ ಸಮಾಧಿಯನ್ನು ಬೆಳಸಿಕೊಳ್ಳುವದೇ ಮೇಲು. ಹೀಗೆ ಯೋಗೀಶ್ವರನೇ ಹೆಚ್ಚಿನವನಾದಕಾರಣ ಐದು ಪ್ರಯೋಜನಗಳುಳ್ಳ ಜೀವನ್ಮುಕ್ತಿಗೆ ಯಾವ ತಡೆಯೂ ಇಲ್ಲ.

ಇಲ್ಲಿಗೆ ಶ್ರೀಮದ್ವಿದ್ಯಾರಣ್ಯ ಮಹಾಮುನಿ ಕೃತವಾದ ಜೀವನ್ಮುಕ್ತಿ-
ವಿವೇಕವೆಂಬ ಗ್ರಂಥದಲ್ಲಿ ಸ್ವರೂಪಸಿದ್ಧಿ ಎಂಬ
ನಾಲ್ಕನೆಯ ಪ್ರಕರಣವು
ಮುಗಿದುದು.

ಓಂ ಸ್ವಸ್ತಿ.



ಶ್ರೀಃ

---+---

# ೫ ವಿದ್ವತ್ಸನ್ಯಾಸ ಪ್ರಕರಣ.



ಜೀವನ್ಮುಕ್ತಿಗೆ ಸಹಾಯವಾಗುವಂಥ ವಿದ್ವತ್ಸನ್ಯಾಸದ ವಿಷಯವನ್ನ ಹೇಳುತ್ತೇವೆ-ವಿದ್ವತ್ಸನ್ಯಾಸದ ವಿಚಾರವು ಪರಮ ಹಂಸೋಪನಿಷತ್ತಿನಲ್ಲಿ ಹೇಳಿದೆ. ಆ ಉಪನಿಷತ್ತನ್ನು ಹಿಡಿದುಕೊಂಡೇ ಅದನ್ನು ಬಿಡಿಬಿಡಿಸಿ ಹೇಳುತ್ತೇವೆ. ಆವೇಲೆ ಪರಮಹಂಸರಾದ ಯೋಗಿಗಳು ಹಿಡಿಯಬೇಕಾದ ದಾರಿ ಯಾವುದು? ಅವರು ಹೇಗಿರುತ್ತಾರೆ? ಎಂದು ನಾರದರು ಭಗವಂತನನ್ನು ಕೇಳಿದರು. ಆವೇಳೆ ಎಂದರೆ ತತ್ವಜ್ಞಾನವನ್ನು ಪಡೆದವನಾಗಿ ಲೋಕದ ವ್ಯವಹಾರಗಳಿಂದ ಮನಸ್ಸು ಹರಿದಾಡುವುದನ್ನು ನೋಡಿ ಅದನ್ನು ತಡೆದು ಸಮಾಧಾನದಲ್ಲಿಟ್ಟುಕೊಂಡು ಸುಖದಿಂದಿರಬೇಕೆಂಬ ಬಯಕೆ ಹುಟ್ಟಿದ ಮೇಲೆ ಎಂದರ್ಥ. ಬರೀಯೋಗಿಯಾದಮಾತ್ರಕ್ಕೇ ಆಗಲಿ ಬರೀಪರಮಹಂಸನಾದ ಮಾತ್ರಕ್ಕೇ ಆಗಲಿ ವಿದ್ವತ್ಸನ್ಯಾಸವು ಒಪ್ಪುವುದಿಲ್ಲ. ಬರೀ ಯೋಗಿಯಾದವನಿಗೆ ತತ್ವಜ್ಞಾನವೇ ಆಗಿರುವುದಿಲ್ಲ. ಅವನು ಹಿಂದುಮುಂದಿನ ಆಗುಹೋಗುಗಳನ್ನೆಲ್ಲಾ ತಿಳಿಯುವುದರಲ್ಲಿಯೂ ಆಕಾಶಗಮನ ಮೊದಲಾದ ಯೋಗಸಿದ್ಧಿಯ ಚಮತ್ಕಾರಗಳಲ್ಲಿಯೂ ಮನಸ್ಸನ್ನು ಹಾಕಿಕೊಂಡಿರುವನು. ಅವನು ಪರಮ ಪುರುಷಾರ್ಥವಾದ ತತ್ವಜ್ಞಾನದ ಹಾದಿಯನ್ನು ಬಿಟ್ಟು ಎಲ್ಲೆಲ್ಲಿಯೂ ಅಲೆಯುತ್ತಿರುವನು. ಈ ಸಿದ್ಧಿಗಳೆಂಬುವು ಸಮಾಧಿಗೆ ಅಡ್ಡಿಗಳೆಂದೂ ವ್ಯವಹಾರದಲ್ಲಿ ಸಿದ್ಧಿಗಳೆಂದೂ ಮೊದಲೇ ಹೇಳಿದೆ. ಇನ್ನು ಬರೀ ಪರಮಹಂಸನಾದರೂ ಎಂದೆಂದಿಗೂ ಹೋಗದೆ ಇರುವಂಥ ವಸ್ತುಯಾವುದು ಮೂರುಗಳಿಗೆಯ ತೋರಿಕೆಯ ಮಾತ್ರದ್ದು ಯಾವುದು ಎಂಬುದನ್ನು ಬಿಡಿಬಿಡಿಸಿ ನೋಡಿ ಹಣ, ಕಾಸು, ಮನೆ, ಮಾರು ಮೊದಲಾದ ಐಶ್ವರ್ಯಗಳಲ್ಲೇನೂ ಹುರಳಿಲ್ಲವೆಂದು ತಿಳಿದು ವೈರಾಗ್ಯದ ಕಡೆಗೆ ತಿರುಗುತ್ತಾನೆ. ಈ ಮಹಾಮಹಾ ಐಶ್ವರ್ಯವೆಂಬಿವುಗಳೆಲ್ಲಾ ಚಿತ್ಸ್ವರೂಪನಾದ ಪರಮಾತ್ಮನ ಶಕ್ತಿಯಿಂದ ಹೀಗೆ ಹೊರಬಿದ್ದಿರುವುವೆಂದು ತಿಳಿದು ಎಂಥೆಂಥ ಐಶ್ವರ್ಯಗಳನ್ನು ಎಷ್ಟೆಷ್ಟು ನೋಡಿದರೂ ಅವನಿಗೆ ಸೋಜಿಗವಾಗುವುದೇ ಇಲ್ಲ. ಅವನು ತನಗೆ ಯಾವುದೂ ಬೇಕೆನಿಸದಿದ್ದರೂ ತನ್ನಲ್ಲಿರುವ ಜ್ಞಾನಸಂಪತ್ತಿನ ಸೊಕ್ಕಿನಿಂದ ಇದನ್ನು ಮಾಡಬೇಕೆಂಬ, ಇದನ್ನು ಮಾಡಬಾರದೆಂಬ ಕಟ್ಟಲೆಗಳನಿಟ್ಟುಕೊಳ್ಳದೆ ಯಾವಾಗ ಹೇಗೆ ಮನಸ್ಸಿಗೆ ತೋರುತ್ತದೋ ಆಗ ಹಾಗೆ ನಡೆದುಬಿಡುತ್ತಾನೆ. ಮೂರು ಗುಣಗಳ ಕಟ್ಟಿಗೆ ಬೀಳದಂಥ ಹಾದಿಯನ್ನು ಹಿಡಿದಿರುವ ನನಗೆ ಇಂಥಾದ್ದನ್ನು ಮಾಡಬೇಕೆಂಬ ಮತ್ತು ಇಂಥಾದ್ದನ್ನು ಬಿಡಬೇಕೆಂಬ ನಿರ್ಬಂಧವಿಲ್ಲವೆಂದು ಅವನ ಭಾವನೆ. ಹೀಗೆ ಅವನು ಮಾಡುತ್ತಲೆ ಶಿಷ್ಟಾಚಾರದ ಅಭಿಮಾನವುಳ್ಳವರು ಜಾಣುಗೆ

ಬಂದಂತೆ ನಿಂದಿಸುತ್ತಾರೆ "ಕಲಿಯುಗದಲ್ಲಿ ಬ್ರಹ್ಮವಿಚಾರವನ್ನು ಎಲ್ಲರೂ ಹೇಳುತ್ತಾರೆ. ಆದರೆ ಅದರಂತೆ ಒಬ್ಬರೂ ನಡೆಯದೆ ಎಲ್ಲರೂ ವಿಷಯಲಂಪಟರೇ ಆಗಿರುತ್ತಾರೆ. ಎಂದು ಮುಂತಾಗಿ ಜನರು ಅವನನ್ನು ಆಡಿಕೊಳ್ಳುತ್ತಾರೆ. ಯೋಗಿಯೂ ಆಗಿ ಪರಮ-ಹಂಸನೂ ಆಗಿದ್ದರೆ ಮೇಲೆ ಹೇಳಿದ ಎರಡು ದೋಷಗಳೂ ಬರುವುದಿಲ್ಲ. ಒಂದು ಹೆಚ್ಚುಗಾರಿಕೆಯೇ ಇರುವುದು. ಹೀಗಿದ್ದರೂ ಜೀವನ್ಮುಕ್ತರಲ್ಲಿ ಏನು ಹೆಚ್ಚುಗಾರಿಕೆ ಯೆಂದು ಶ್ರೀರಾಮನು ಕೇಳಿದಾಗ ವಸಿಷ್ಠರು "ತತ್ವಜ್ಞಾನವನ್ನು ಪಡೆದವನ ಬುದ್ಧಿಯಲ್ಲಿಯೇ ಒಂದು ಹೆಚ್ಚುಗಾರಿಕೆ ಇದೆ. ಅವನಿಗೆ ಯಾವಾಗಲೂ ತೃಪ್ತಿ ಇರು-ವುದು. ಅವನ ಮನಸ್ಸು ಯಾವಾಗಲೂ ಸಮಾಧಾನದಿಂದಿರುವುದು. ಅವನು ಯಾವಾ-ಗಲೂ ಆತ್ಮಸ್ವರೂಪದಲ್ಲಿಯೇ ಮನಸ್ಸನ್ನು ಹಾಕಿಕೊಂಡಿರುವನು. ಒಂದೊಂದು ಮಂತ್ರವನ್ನು ಒಂದೊಂದು ನಿಯಮದಿಂದ ಜಪಿಸಿ ಸಿದ್ಧಿಯನ್ನು ಪಡೆದವರೂ, ಒಂದೊಂ-ದು ಬಗೆಯ ತಪಶ್ಚರ್ಯೆಯನ್ನು ಮಾಡಿ ಸಿದ್ಧಿಯನ್ನು ಪಡೆದವರೂ ತಂತ್ರಗಳಿಂದ ಸಿದ್ಧಿಯನ್ನು ಪಡೆದವರೂ ಎಷ್ಟೋ ಜನರಿರುವರು. ಅವರು ಮಾಡುವ ಆಕಾಶಗಮನ ಮೊದಲಾದ ಚಮತ್ಕಾರಗಳಲ್ಲೇನು ಹೆಚ್ಚುಗಾರಿಕೆ ಇದೆ? ಮೂಢಬುದ್ಧಿಯವರಿಗಿಂತ ಜ್ಞಾನಿಯಲ್ಲಿ ಮುಖ್ಯವಾದ ಒಂದೇ ಒಂದು ಹೆಚ್ಚುಗಾರಿಕೆ ಏನೆಂದರೆ, ಅವನ ಮನಸ್ಸು ಇಂಥಾದ್ದೊಂದು ಬೇಕೆನ್ನದೆ ಇಂಥಾದ್ದೊಂದು ಬೇಡವೆನ್ನದೆ ತಿಳಿಯಾಗಿ ಬೆಳಗುತ್ತಿ-ರುವುದೂ ಹುಟ್ಟುಸಾವುಗಳೆಂಬ ಸುಳಿಗೆ ಸಿಕ್ಕಿ ಎಷ್ಟೋ ಕಾಲ ತಿರುಗಿತಿರುಗಿ ಅದರ ಸೆಳತವನ್ನು ತಪ್ಪಿಸಿಕೊಂಡು ಆತ್ಮಸ್ವರೂಪವನ್ನು ತಿಳಿದ ನೆಂಬುವುದಕ್ಕೆ ಅವನು ತನ್ನ ಮೇಲೆ ಬರುವ ಬಯಕೆ ಸಿಟ್ಟು ಮೊದಲಾದವುಗಳ ಗಾಳಿಯನ್ನು ದಿನದಿನಕ್ಕೆ ಕಡಮೆ-ಮಾಡಿಕೊಳ್ಳುತ್ತಿರುವುದೇಗುರ್ತು" ಎಂದು ಹೇಳಿದ್ದಾರೆ.

ಈ ಹೆಚ್ಚುಗಾರಿಕೆಯಿಂದ ಕೂಡಿ ದೋಷಗಳೆರಡೂ ಇಲ್ಲದಂಥ ದಾರಿಯನ್ನೂ ಸ್ಥಿತಿಯನ್ನೂ ನಾರದರು ಭಗವಂತನನ್ನು ಕೇಳಿದರು. ಇಲ್ಲಿ ದಾರಿ ಎಂದರೆ ನಡೆ ನುಡಿ ಮೊದಲಾದುವುಗಳು. ಸ್ಥಿತಿಯೆಂದರೆ ಮನಸ್ಸನ್ನು ಹರಿಯಬಿಡದೆ ಇಟ್ಟುಕೊಂಡಿರುವ ಒಳಗಣ ಧರ್ಮ. ಆಗ ಭಗವಾನ್ ಚತುರ್ಮುಖಬ್ರಹ್ಮನು ಆ ಎರಡು ಪ್ರಶ್ನೆಗಳಿಗೂ ಉತ್ತರವನ್ನು ಹೇಳುತ್ತಾನೆ. ಆ ಪರಮಹಂಸರ ದಾರಿಯಲ್ಲಿ ನಡೆಯುವುದು ಎಲ್ಲರಿಗೂ ದಕ್ಕುವ ಮಾತಲ್ಲ. ಅದು ಬಹುಕಷ್ಟ. ಅವನು ವೈರಾಗ್ಯದ ತುಟ್ಟತುದಿಯಲ್ಲಿರುವನು. ಅಂಥ ಪರಮಹಂಸನು ಒಬ್ಬನಾದರೂ ಸಾಕು. ಅವನೇ ಬ್ರಹ್ಮನಿಷ್ಠನು. ಅವನೇ ವೇದ-ಪುರುಷನು. ಮನುಷ್ಯರಲ್ಲಿ ಸಹಸ್ರಕ್ಕೊಬ್ಬನು ಜ್ಞಾನಸಿದ್ಧಿನ್ನು ಪಡೆಯುವುದಕ್ಕೆ ಯ-ತ್ನಿಸುವನೆಂದೂ ಅವರಲ್ಲಿ ಎಲ್ಲಿಯೋ ಒಬ್ಬನು ಮಾತ್ರ ನಿಜವನ್ನು ತಿಳಿಯುವನೆಂದೂ ಗೀತೆಯಲ್ಲಿ ಹೇಳಿರುವ ನ್ಯಾಯದಂತೆ ಎಲ್ಲಿಯಾದರೂ ಎಂದಾದರೂ ಒಬ್ಬನು ಯೋಗಿಯೂ ಪರಮಹಂಸನೂ ಆದವನು ಸಿಕ್ಕಿದರೆ ಅವನೇ ಬ್ರಹ್ಮನಿಷ್ಠ. ಬರೀ ಯೋಗಿಯೂ ಬ್ರಹ್ಮ-ನಿಷ್ಠನಲ್ಲ. ಬರೀ ಪರಮಹಂಸನೂ ಬ್ರಹ್ಮನಿಷ್ಠನಲ್ಲ. ಬರೀ ಯೋಗಿಗೆ ಬ್ರಹ್ಮಸ್ವರೂ-

ಪವೇ ತಿಳಿದಿರುವುದಿಲ್ಲ. ಬರೀ ಪರಮಹಂಸನಿಗೆ ಬ್ರಹ್ಮಸ್ವರೂಪವು ತಿಳಿದಿದ್ದರೂ ಅವನು ಮನಸ್ಸನ್ನು ಬಿಗಿ ಹಿಡಿದುಕೊಳ್ಳದೆ ಇರುವುದರಿಂದ ಹೊರಗಣ ವಿಷಯಗಳನ್ನು ಗ್ರಹಿಸುತ್ತಿರುವನೇ ಹೊರತು ಬ್ರಹ್ಮಸ್ವರೂಪದಲ್ಲಿಯೇ ಎಡೆಬಿಡದೆ ಇದ್ದುಕೊಂಡಿರುವುದಿಲ್ಲ. ಪರಮಾತ್ಮಸ್ವರೂಪ ವೆಂಥಾದ್ದೆಂಬುದನ್ನೂ ಮನಸ್ಸನ್ನು ಸಮಾಧಾನದಲ್ಲಿಟ್ಟುಕೊಂಡಿರುವಿಕೆಯನ್ನೂ ಹೇಳುವ ಶಾಸ್ತ್ರಗಳನ್ನೆಲ್ಲಾ ಮಗುಚಿಹಾಕಿದಂಥ ಪಂಡಿತರು ಆ ಯೋಗಿಯಾದ ಪರಮಹಂಸನೇ ಬ್ರಹ್ಮನಿಷ್ಠನೆಂದು ಮನ್ನಿಸುವರು. ಬ್ರಹ್ಮಜ್ಞಾನಿಗಳಾದ ಪಂಡಿತರು ಅವರನ್ನು ಬರೀ ಬ್ರಹ್ಮನಿಷ್ಠರೆಂದರೆ ಸಾಲದೆಂದು ಬ್ರಹ್ಮಸ್ವರೂಪವೆಂದೇ ತಿಳಿಯುವರು. ಒಂದನ್ನು ನೋಡಬೇಕೆನ್ನದೆ ಅಥವಾ ನೋಡದೆ ಇರಬೇಕೆನ್ನದೆ ತನ್ನ ಸ್ವರೂಪದಲ್ಲಿ ತಾನು ಯಾವನು ಇರುತ್ತಾನೋ ಅವನನ್ನು ಬ್ರಹ್ಮಜ್ಞಾನಿಯನ್ನುವುದಕ್ಕಿಂತಲೂ ಬ್ರಹ್ಮರೂಪವೆನ್ನಬೇಕೆಂದು ಸ್ಮೃತಿ ಇರುವುದು. ವೇದಗಳಲ್ಲಿ ಹೇಳಿರುವಂಥ ಕರ್ಮಗಳನ್ನು ಮಾಡುವುದಕ್ಕೂ ತಿಳಿವಳಿಕೆಯನ್ನು ಪಡೆಯುವುದಕ್ಕೂ ಯಾರು ಯೋಗ್ಯರೋ ಅಂಥ ಪುರುಷರೆಲ್ಲರಲ್ಲಾ ಯೋಗಿಯಾದ ಪರಮಹಂಸನು ಬಹು ಹೆಚ್ಚಿನವನು. ಅವನು ತನ್ನ ಮನಸ್ಸನ್ನು ಯಾವಾಗಲೂ ಪರಮಾತ್ಮಸ್ವರೂಪದಲ್ಲಿಯೇ ನಿಲ್ಲಿಸಿಕೊಂಡಿರುವನು. ಹುಟ್ಟಿದ ತಪ್ಪಿಗೆ ಕಾಣಬರುವ ಮತ್ತು ಕೇಳಿಬರುವ ವಿಷಯಗಳಿಂದಲ್ಲಾ ಮನಸ್ಸು ವೃತ್ತಿಗಳನ್ನು ಪಡೆದು ತಾಂಡವಾಡದಂತೆ ಅವನು ಅಭ್ಯಾಸದಿಂದಲೂ ವೈರಾಗ್ಯದಿಂದಲೂ ತಡೆದುಕೊಂಡಿರುವನು. ಅವನು ಯಾವಾಗಲೂ ಪರಮಾತ್ಮನಲ್ಲಿ ಮನಸ್ಸನ್ನು ನಿಲ್ಲಿಸಿಕೊಂಡಿರುವುದರಿಂದ ಪರಮಾತ್ಮನು ಅವನಲ್ಲಿದ್ದು ಕಾಣಿಸಿಕೊಳ್ಳುವನು. ಉಳಿದ ಮೂಢರಲ್ಲಿ ಹಾಗೆ ಕಾಣಿಸಿಕೊಳ್ಳುವುದಿಲ್ಲ. ಆ ಉಳಿದವರನ್ನೆಲ್ಲಾ ಅಜ್ಞಾನವೆಂಬ ಮುಸುಕುಮುಚ್ಚಿಕೊಂಡಿರುತ್ತದೆ. ಒಬ್ಬನು ಸ್ವರೂಪಸಾಕ್ಷಾತ್ಕಾರವನ್ನು ಪಡೆದವನಾದರೂ ಮನಸ್ಸನ್ನು ಬಿಗಿಹಿಡಿದುಕೊಂಡಿರದವನಾಗಿದ್ದರೆ ಅವನ ಮನಸ್ಸು ಹೊರಬಿದ್ದು ವೃತ್ತಿಗಳಾಗುತ್ತಿರುವುದರಿಂದ ಅದರಲ್ಲಿ ಪರಮಾತ್ಮಸ್ವರೂಪವು ಮೂಡುವುದಿಲ್ಲ.

ಆ ಪರಮಹಂಸಯೋಗಿಗಳ ದಾರಿಯಾವುದೆಂದರೆ ತನ್ನ ಮಕ್ಕಳು, ಗೆಳೆಯರು, ಹೆಂಡತಿ, ಬಂಧುಗಳು ಮೊದಲಾದವರನ್ನೂ, ಜುಟ್ಟುಜನಿವಾರಗಳನ್ನೂ, ವೇದಾಭ್ಯಾಸವನ್ನೂ ಎಲ್ಲಾ ಕರ್ಮಗಳನ್ನೂ ಕೈಬಿಟ್ಟು ತನ್ನ ದೇಹದ ಹಿತಕ್ಕಾಗಿಯೂ ಮತ್ತು, ಜನರಹಿತಕ್ಕಾಗಿಯೂ ಕೌಪೀನವನ್ನೂ ದಂಡವನ್ನೂ ಹೊದಿಕೆಯನ್ನೂ ತೆಗೆದುಕೊಂಡು ಹೊರಡಬೇಕು. ಒಬ್ಬನು ಗೃಹಸ್ಥನಾಗಿದ್ದ ಜನ್ಮದಲ್ಲಿ ತಾಯಿಗಾಗಿಯೋ, ತಂದೆಗಾಗಿಯೋ ಅಣ್ಣತಮ್ಮಂದಿರಗಾಗಿಯೋ ಹೇಗೋ, ವಿವಿದಿಷಾಸನ್ಯಾಸ ರೂಪವಾದ ಪರಮಹಂಸಾಶ್ರಮವನ್ನು ತೆಗೆದುಕೊಳ್ಳದೆ ಹಿಂದಿನಜನ್ಮದಲ್ಲಿ ಮಾಡಿದ ಎಷ್ಟೋ ಪುಣ್ಯಗಳ ಫಲವಾಗಿ ಪರಮಾತ್ಮ ಸ್ವರೂಪವನ್ನು ಕೇಳಿಕೇಳಿ ತಿಳಿದು ಅದರಲ್ಲಿಯೇ ಮನಸ್ಸನ್ನು ಹಾಕಿ ಆತ್ಮಸ್ವರೂಪವನ್ನು ಸಾಕ್ಷಾತ್ಕಾರಮಾಡಿಕೊಳ್ಳುತ್ತಾನೆ. ಅವನು

ಗೃಹಸ್ಥನಾದುದರಿಂದ ಲೌಕಿಕವ್ಯವಹಾರಗಳೂ ವೈದಿಕ ವ್ಯವಹಾರಗಳೂ ಎಷ್ಟೋ ಬಂದು ಅವನ ಮೇಲೆ ಬಿದ್ದು ಅವನ ಮನಸ್ಸನ್ನು ಹೊರಕ್ಕೆ ನುಗ್ಗಿಸುತ್ತವೆ. ಹಾಗಾಗುವುದು ಅವನ ಮನಸ್ಸಿಗೆ ಬರದೆ ಸಮಾಧಾನಸ್ಥಿತಿಯಲ್ಲಿರಬೇಕೆಂದು ಅವನು ವಿದ್ವತ್ಸನ್ಯಾಸವನ್ನು ಮಾಡುತ್ತಾನೆ. ಮಕ್ಕಳು ಗೆಳೆಯರು ಮೊದಲಾದವರನ್ನೆಲ್ಲಾ ಬಿಡಬೇಕೆಂಬುದು ಅಂಥವರಿಗೆ ಹೇಳಿದ ಮಾತು. ಮೊದಲೇ ವಿವಿದಿಷಾಸನ್ಯಾಸವನ್ನು ಮಾಡಿ ಜ್ಞಾನವನ್ನು ಪಡೆದವನಾಗಿ ಈಗ ವಿದ್ವತ್ಸನ್ಯಾಸವನ್ನು ಮಾಡುವವನಿಗೆ ಹೆಂಡತಿ ಮಕ್ಕಳ ಮಾತೇ ಸಂಬಂಧವಿಲ್ಲ. "ಈ ವಿದ್ವತ್ಸನ್ಯಾಸವು ಇತರ ಸನ್ಯಾಸಾಶ್ರಮದಂತೆ ಪ್ರೈಷಮಂತ್ರವನ್ನುಚ್ಚಾರಮಾಡಿ ವಿಧಿಪ್ರಕಾರವಾಗಿ ಆಗತಕ್ಕದ್ದೋ? ಅಥವಾ ಹಳೇವಸ್ತ್ರವನ್ನು ತೆಗೆದೊಗೆಯುವಂತೆಯೋ? ಉಪದ್ರವವನ್ನು ಕೊಡುವ ಊರನ್ನು ಬಿಟ್ಟು ತೊಲಗುವಂತೆಯೋ? ಸುಮ್ಮನೆ ಬಿಟ್ಟು ಬಿಡತಕ್ಕದ್ದೋ?" ವಿದ್ವತ್ಸನ್ಯಾಸವು ವಿಧಿಪ್ರಕಾರವಾಗಿ ಆಗತಕ್ಕದ್ದೇನೂ ಅಲ್ಲ. ಜ್ಞಾನಿಯಾದವನಿಗೆ ಇಂಥಾದ್ದೊಂದನ್ನು ಮಾಡಬೇಕೆಂಬುದು ಉಳಿದಿರುವುದಿಲ್ಲ. ಆದುದರಿಂದ ಇಂಥಾದ್ದೊಂದನ್ನು ಮಾಡೆಂದು ಅಥವಾ ಇಂಥಾದ್ದೊಂದನ್ನು ಬಿಡೆಂದು ಹೇಳುವುದಕ್ಕೆ ಯಾರಿಗೂ ಅಧಿಕಾರವಿಲ್ಲ. ಇನ್ನು ಇದು ಹಳೇವಸ್ತ್ರಗಳನ್ನು ತೆಗೆದೊಗೆಯುವಂತೆ ಸುಮ್ಮನೆ ಬಿಟ್ಟು ಬಿಡತಕ್ಕದ್ದೂ ಅಲ್ಲ. ಏಕೆಂದರೆ ವಿದ್ವತ್ಸನ್ಯಾಸಿಯಲ್ಲಿಯೂ ಕೌಪೀನ ಮತ್ತು ದಂಡ ಮೊದಲಾದ ಆಶ್ರಮದ ಗುರುತುಗಳಿರುವುವೆಂದು ಶಾಸ್ತ್ರದಲ್ಲಿ ಹೇಳಿದೆ. ಕರ್ಮದಂತೆ ಇದು ಆ ಎರಡು ರೂಪಗಳಲ್ಲಿಯೂ ಇರುವುದು. ಯಜ್ಞವನ್ನು ಮಾಡಬೇಕೆಂದು ದೀಕ್ಷೆಯನ್ನು ವಹಿಸಿದವರು ಕೆಲವು ನಿಯಮಗಳನ್ನು ಅನುಸರಿಸಬೇಕಾಗುತ್ತದೆ. ಅವುಗಳಲ್ಲಿ ಒಂದೇನಂದರೆ ಅವರು ಕೈಯಿಂದ ತುರಿಸಿಕೊಳ್ಳಬಾರದು. ನವೆಯಾದರೆ ಜಿಂಕೆಯ ಕೋಡಿನಿಂದ ತುರಿಸಿಕೊಳ್ಳಬೇಕು.

ಆ ನಿಯಮವನ್ನು ಅನುಸರಿಸಬೇಕಾದ ಕಾಲ ಮುಗಿಯುತ್ತಲೇ ಆ ಜಿಂಕೆಯ ಕೋಡಿನಿಂದ ಏನೂ ಉಪಯೋಗವಿಲ್ಲ. ಅದನ್ನು ಎಂದೆಂದಿಗೂ ಹಿಡಿದುಕೊಂಡೇ ಇರುವುದು ಶಕ್ಯವಲ್ಲವಾದ್ದರಿಂದ ಅದು ತನಗೆತಾನೇ ಬಿಟ್ಟುಹೋಗುತ್ತದೆ. ಆ ಜಿಂಕೇ ಕೋಡನ್ನು ಕೈಬಿಡುವುದಕ್ಕಾದರೂ ವೇದವು ಒಂದು ವಿಧಿಯನ್ನು ಹೇಳುವುದು. ದಕ್ಷಿಣೆಯನ್ನು ಕೊಟ್ಟಮೇಲೆ ಜಿಂಕೆಯ ಕೋಡನ್ನು ಚಾತ್ವಾಲವೆಂಬ ಗುಂಡಿಯಲ್ಲಿ ಹಾಕಬೇಕು. ಹೀಗೆತಾನೇ ಮಾಡತಕ್ಕದ್ದು ವೇದದಲ್ಲಿ ಹೇಳಿರುವುದು. ಎರಡು ಬಗೆಯಾಗಿರುವ ಪ್ರಪತ್ತಿಕರ್ಮವೂ ಹೀಗೆಯೇ. ವಿದ್ವತ್ಸನ್ಯಾಸವೂ ಎರಡು ಬಗೆ. ಜ್ಞಾನಿಯಾದ ಮಾತ್ರಕ್ಕೇ ಅವನು ಮಾಡಬೇಕಾದದ್ದು ಎಳ್ಳಷ್ಟೋ ಅಥವಾ ಇಲ್ಲವೇ ಇಲ್ಲವೆಂದು ತಿಳಿಯಬಾರದು. ಚಿತ್ಸ್ವರೂಪನಾದ ಆತ್ಮನ ಸಾನ್ನಿಧ್ಯಬಲದಿಂದ ದೇಹವೂ ಇಂದ್ರಿಯಗಳೂ ಮಾಡುವುದನ್ನೆಲ್ಲಾ ಮೊದಲು ಅವನು ಆ ಆತ್ಮನೇ ಮಾಡುತ್ತಾನೆಂದು ತಪ್ಪು ತಿಳಿದುಕೊಂಡಿದ್ದನು. ಜ್ಞಾನವಾದ ಮೇಲೆ ಆ ತಪ್ಪುತಿಳಿವಳಿಕೆ ಹೋಯಿತು. ಆದರೂ ಚಿತ್ಸ್ವರೂಪನಾದ ಆತ್ಮನ ಪ್ರತಿಬಿಂಬದಿಂದ ಕೂಡಿದಂಥ ಮನಸ್ಸೆಂಬುದೊಂದು ಇವನನ್ನು ಸುತ್ತಿಕೊಂಡಿ-

ರುವವರಿಗೂ ತಾನಾಗಿ ಎಷ್ಟೋ ಕೆಲಸಗಳು ನಡೆಯುವವು. ಎಲ್ಲಿಯವರಿಗೆ ಹೊರಗಣ ಪದಾರ್ಥಗಳ ಭಾವನೆಯುಂಟಾಗುತ್ತಿರುತ್ತೋ ಅಲ್ಲಿಯವರಿಗೂ ಅದು ತಪ್ಪಿದ್ದೇ ಅಲ್ಲ. ಒಂದುವೇಳೆ ಜ್ಞಾನವಾಗಿದ್ದರೂ ಅವನಿಗೆ ವಿಶ್ರಾಂತಿ ಇಲ್ಲದಿದ್ದರೆ ತೃಪ್ತಿ ಇಲ್ಲವಾದುದರಿಂದ ವಿಶ್ರಾಂತಿಯನ್ನು ಪಡೆದುಕೊಳ್ಳುವುದೊಂದು ಅವನ ಕೆಲಸವಾಗಿ ಉಳಿದಿರುವುದರಿಂದ ಅವನಿನ್ನು ಮಾಡತಕ್ಕದ್ದೇನೂ ಇಲ್ಲವೆಂಬ ಮಾತು ಒಪ್ಪುವುದಿಲ್ಲ. ಹೀಗೆ ಜ್ಞಾನಿಗೆ ಮಾಡತಕ್ಕದ್ದೊಂದುಂಟೆಂದ ಮಾತ್ರಕ್ಕೇ ಮಾಡಿದ್ದಕ್ಕೆಲ್ಲಾ ಫಲವಾಗುವಂಥ ಜನ್ಮಾಂತರ ಮೊದಲಾದುವುಗಳು ಅವನಿಗೆ ಗಂಟುಬೀಳುವ ಭಯವೇನೂ ಇಲ್ಲ. ಅವನ ಪ್ರಾರಬ್ಧವು ಮನಸ್ಸಿಗೆ ವಿಶ್ರಾಂತಿಯನ್ನು ಒದಗಗೊಡಿಸದಂತೆ ಇರುತ್ತದೆ. ಅದನ್ನು ಜ್ಞಾನಿಯು ಪ್ರಯತ್ನದಿಂದ ಗೆದ್ದುಬಿಟ್ಟನೆಂದರೆ ಅವನು ಮಾಡಿದ ಕೆಲಸಕ್ಕೆ ಆ ತಡೆಯನ್ನು ಕಳೆದ ಫಲವು ಕಣ್ಣೆದುರಿಗೇ ಕಾಣುವುದು. ಆದಕಾರಣ ಅದು ಅವನಿಗೆ ಮತ್ತೊಂದು ಅದೃಷ್ಟವನ್ನೇನಾದರೂ ಹುಟ್ಟಿಸೀತೆಂದು ಯೋಚಿಸುವುದು ಯೋಗ್ಯವಲ್ಲ. ಹಾಗಲ್ಲದಿದ್ದರೆ ಒಬ್ಬ ಮನುಷ್ಯನು ವೇದಾಂತ ಶಾಸ್ತ್ರವನ್ನು ಕೇಳುವುದು ತಿಳಿದುಕೊಳ್ಳುವುದು ಅದರಲ್ಲಿಯೇ ಮನಸ್ಸು ಹಾಕುವುದು ಮೊದಲಾದ ಕರ್ಮಗಳನ್ನು ಮಾಡಿದರೆ ಅದು ಕೂಡ ಮತ್ತೊಂದು ಜನ್ಮವನ್ನು ಕೊಡತಕ್ಕಂಥ ಅದೃಷ್ಟವಾಗಬೇಕಾಯಿತಲ್ಲ! ಹಾಗೆಂದಿಗೂ ಅಲ್ಲ. ಪರಮಾತ್ಮನ ಜ್ಞಾನವಾಗುವುದಕ್ಕೆ ಇರುವ ತಡೆಗಳನ್ನು ಕಳೆಯುವುದೇ ಆ ವೇದಾಂತ ಶ್ರವಣದ ಫಲ. ಈ ಫಲವು ಕಣ್ಣಿಗೆ ಕಾಣುವುದು. ಎಂದರೆ ಪರಮಾತ್ಮನ ಜ್ಞಾನವಾಗುವುದಕ್ಕೆ ಇರುವ ತಡೆಗಳನ್ನು ಅದು ಕಳೆಯುವುದೆಂಬುದು ಆ ಶಾಸ್ತ್ರಶ್ರವಣವನ್ನು ಮಾಡಿದವರಿಗೆಲ್ಲಾ ಅನುಭವಕ್ಕೆ ಬರುವುದು. ಆದಕಾರಣ ಜ್ಞಾನಿಗೂ ಒಂದು ವಿಧಿಯುಂಟೆಂದ ಮಾತ್ರಕ್ಕೇ ತಪ್ಪೇನೂ ಅಲ್ಲ. ಜ್ಞಾನವನ್ನು ಪಡೆಯಬೇಕೆಂಬುವನಂತೆಯೇ ಜ್ಞಾನಿಯಾದ ಗ್ರಹಸ್ಥನು ನಾಂದೀಶ್ರಾದ್ಧ ಉಪವಾಸ ಮತ್ತು ಜಾಗರಣ ಮೊದಲಾದ ನಿಯಮಗಳನ್ನು ಅನುಸರಿಸಿಯೇ ಸನ್ಯಾಸವನ್ನು ಮಾಡಬೇಕು. ವಿದ್ವತ್ಸನ್ಯಾಸಕ್ಕೆ ಶ್ರಾದ್ಧಾದಿಗಳನ್ನೇನೂ ಹೇಳಿಲ್ಲ. ಆದರೂ ವಿವಿದಿಷಾಸನ್ಯಾಸದ ರೂಪಾಂತರವೇ ವಿದ್ವತ್ಸನ್ಯಾಸವಾಗಿರುತ್ತದೆ. ಆದಕಾರಣ ವಿವಿದಿಷಾಸನ್ಯಾಸಕ್ಕೆ ಹೇಳಿದ ನಿಯಮಗಳನ್ನೆಲ್ಲಾ ವಿದ್ವತ್ಸನ್ಯಾಸದಲ್ಲಿಯೂ ಅನುಸರಿಸಬೇಕು. ಅಗ್ನಿಷ್ಟೋಮವೆಂಬ ಯಜ್ಞದ ರೂಪಾಂತರಗಳಾದ ಅತಿರಾತ್ರ ಮೊದಲಾದುವುಗಳಲ್ಲಿ ಅಗ್ನಿಷ್ಟೋಮದ ವಿಧಿಗಳನ್ನೆಲ್ಲಾ ಅನುಸರಿಸಬೇಕಾಗುವಂತೆ ವಿದ್ವತ್ಸನ್ಯಾಸಮಾಡುವ ಕಾಲದಲ್ಲಿಯೂ ಇತರ ಸನ್ಯಾಸವನ್ನು ಮಾಡುವಾಗ ಹೇಗೋ ಹಾಗೆ ಪ್ರೈಷಮಂತ್ರವನ್ನು ಉಚ್ಚಾರಮಾಡಿ ಹೆಂಡತಿ ಮಕ್ಕಳು ಮೊದಲಾದವರನ್ನು ಬಿಡುತ್ತೇನೆಂದು ಸಂಕಲ್ಪಮಾಡಬೇಕು. ಬಂಧುಗಳನ್ನು ಮೊದಲಾದವರನ್ನು ಬಿಡಬೇಕೆಂಬ ಮಾತಿನಲ್ಲಿ ಮೊದಲಾದ ಎಂಬ ಮಾತಿಗೆ ಅರ್ಥವೇನೆಂದರೆ- ಸೇವಕರು, ದನ-ಕರು ಹೊಲ-ಮನೆ ಮೊದಲಾದ ಲೌಕಿಕಭೋಗಕ್ಕಾಗಿ ಹಿಡಿದುಕೊಂಡಿದ್ದುವುಗಳನ್ನೆಲ್ಲಾ ಬಿಡಬೇಕೆಂದರ್ಥ. ವೇದಾಧ್ಯಯನವನ್ನು ಕೂಡ

ಬಿಡಬೇಕೆಂಬ ಮಾತಿಗೆ ಅರ್ಥವೇನೆಂದರೆ—ಬರೀವೇದಾಧ್ಯಯನವನ್ನು ಬಿಡುವುದಷ್ಟೇ ಅಲ್ಲ. ಆ ವೇದದ ಅರ್ಥವನ್ನು ಗೊತ್ತುಮಾಡುವುಕ್ಕಾಗಿ ಹೊರಟಿರುವಂಥ ಬೇರೆಬೇರೆ ಶಾಸ್ತ್ರಗಳನ್ನೂ ವೇದಾರ್ಥವನ್ನು ವಿವರಿಸುವಂಥ ಪುರಾಣೇತಿಹಾಸಗಳನ್ನೂ ಕೂಡ ಬಿಡಬೇಕೆಂದು ತಾತ್ಪರ್ಯ. ವೇದಶಾಸ್ತ್ರಪುರಾಣೇತಿ ಹಾಸಗಳ ಪಾಡೇ ಹೀಗಾದಮೇಲೆ ಬರೀ ವಿನೋದಕ್ಕಾಗಿ ಓದುವಂಥ ಕಾವ್ಯಗಳನ್ನೂ ನಾಟಕಗಳನ್ನೂ ಹಿಡಿಯಬಾರದೆಂಬುದನ್ನಂತು ಹೆಸರು ತೆಗೆದುಕೊಂಡು ಬೇರೆಬೇರೆಯಾಗಿ ಹೇಳಬೇಕಾದುದೇ ಇಲ್ಲ. ಹೆಂಡತಿ ಮಕ್ಕಳನ್ನೆಲ್ಲಾ ಕೈಬಿಟ್ಟದ್ದರಿಂದ ಈ ಲೋಕದ ಸುಖದ ಆಸೆ ತೊಲಗಿತು. ವೇದದಲ್ಲಿ ಹೇಳುವ ಕರ್ಮಗಳನ್ನೆಲ್ಲಾ ಕೈಬಿಟ್ಟದ್ದರಿಂದ ಮನಸ್ಸನ್ನು ಹರಿದಾಡಿಸುವಂಥ ಪರಲೋಕದ ಸುಖದ ಆಸೆ ತೊಲಗಿತು. ಮತ್ತು ಈ ಬ್ರಹ್ಮಾಂಡವು ಒಂದು ಗಂಟು ಬೀಳದಂತೆ ವಿರಾಡುಪಾಸನೆಯನ್ನು ಬಿಡಬೇಕು. ಮತ್ತು ಸೂತ್ರಾತ್ಮಪ್ರಾಪ್ತಿಗೆ ಕಾರಣವಾಗುವಂಥ ಹಿರಣ್ಯಗರ್ಭೋಪಾಸನೆಯನ್ನೂ ತತ್ವಜ್ಞಾನಕ್ಕೆ ಕಾರಣವಾದಂಥ ಶ್ರವಣ ಮೊದಲಾದುವುಗಳನ್ನೂ ಕೂಡ ಬಿಟ್ಟುಬಿಡಬೇಕು. ಹೀಗೆ ತನ್ನ ಹೆಂಡತಿ ಮಕ್ಕಳು ಮೊದಲುಗೊಂಡು ಹಿರಣ್ಯಗರ್ಭಬ್ರಹ್ಮನವರಿಗೆ ಇರುವಂಥ ಈ ಲೋಕಸಂಬಂಧವಾದ ಮತ್ತು ಪರಲೋಕ ಸಂಬಂಧವಾದ ಸುಖಸಾಧನಗಳನ್ನೆಲ್ಲಾ ಪ್ರೈಷಮಂತ್ರೋಚ್ಚಾರ ಪೂರ್ವಕವಾಗಿ ಬಿಟ್ಟು ಒಂದು ಜೊತೆ ಕೌಪೀನವನ್ನೂ ದಂಡವನ್ನೂ ಛಳಿಯನ್ನು ಕಳೆಯುವಂಥ ಹೊದಿಕೆಯನ್ನೂ ಪಾದುಕೆಗಳನ್ನೂ ತೆಗೆದುಕೊಳ್ಳಬೇಕು. ಇನ್ನೇನೂ ತೆಗೆದುಕೊಳ್ಳಬಾರದು. ಇವುಗಳಿಂದ ತನ್ನ ಶರೀರಕ್ಕೆ ಸುಖವೇನೆಂದರೆ ಕೌಪೀನವಿರುವುದರಿಂದ ನಾಚಿಕೊಳ್ಳಬೇಕಾದ್ದಿರುವುದಿಲ್ಲ. ದಂಡವಿರುವುದರಿಂದ ದನಕರುಗಳೂ ಹಾವುಗಳೂ ತನ್ನ ಮೈಮೇಲೆ ಬರದಂತೆ ಕಾಪಾಡಿಕೊಳ್ಳಬಹುದು. ಹೊದಿಕೆ ಇರುವುದರಿಂದ ಛಳಿಯ ಹೆದರಿಕೆ ತಪ್ಪುತ್ತದೆ. ಪಾದುಕೆಗಳಿಂದ ಉಗುಳು ಮೊದಲಾದ ಹೊಲಸಿನ ಸೋಕು ಕಾಲಿಗೆ ಹತ್ತುವುದಿಲ್ಲ. ಇದರಿಂದ ಜನರ ಹಿತವೇನಾಗುವುದೆಂದರೆ ಇವನಲ್ಲಿ ದಂಡ ಮೊದಲಾದುವುಗಳು ಇರುವುದರಿಂದ ಇವನು ಉತ್ತಮಾಶ್ರಮದವನೆಂದು ತಿಳಿದು ಜನರು ಅವನಿಗೆ ಅಡ್ಡಬಿದ್ದು ಮನೆಗೆ ಕರೆದುಕೊಂಡು ಹೋಗಿ ಊಟಮೊದಲಾದ ಉಪಚಾರಗಳನ್ನು ನಡೆಸಿ ಪುಣ್ಯವನ್ನ ಪಡೆದುಕೊಳ್ಳುವರು. ಬಹುಹಿಂದಿನಿಂದ ನಡೆದುಕೊಂಡು ಬಂದಿರುವಂಥ ಆಶ್ರಮದ ಶಿಷ್ಟಾಚಾರವೂ ಉಳಿದುಕೊಳ್ಳುವುದು. ಈ ಪರಮಹಂಸ ಯೋಗಿಗೆ ಕೌಪೀನ ಮೊದಲಾದುವುಗಳು ಅನುಕೂಲಕ್ಕಾಗಿಯೇ ಹೊರತು ಅವೇ ಮುಖ್ಯವಲ್ಲ. ವಿವಿದಿಷಾಸನ್ಯಾಸಿಗೆ ಮಾತ್ರ ದಂಡಮೊದಲಾದುವುಗಳೆಲ್ಲಾ ಮುಖ್ಯ. ದಂಡವನ್ನು ಬಿಟ್ಟು ಅವನು ಮೂರು ಇಷುಕ್ಷೇಪಕ್ಕಿಂತ ಮೇಲೆ ಎಂದಿಗೂ ಹೋಗಕೂಡದು. ಇಷುಕ್ಷೇಪವೆಂದರೆ:—ಹೊಡೆದಬಾಣ ಹೋಗುವಷ್ಟು ದೂರ. ದಂಡವನ್ನು ಕಳೆದುಕೊಂಡರೆ ಆ ತಪ್ಪಿಗೆ ನೂರು ಪ್ರಾಣಾಯಾಮಗಳನ್ನು ಮಾಡಬೇಕೆಂದು ಸ್ಮೃತಿಯಲ್ಲಿ ಹೇಳಿದೆ. ಪರಮಹಂಸಯೋಗಿಗೆ ಜುಟ್ಟು ಜನಿವಾರ, ಕೋಲು, ಹೊದಿಕೆ ಇವೇನೂ ಮು-

ಖ್ಯವಲ್ಲ. ವಿವಿದಿಷನಾದ ಪರಮಹಂಸನು ಜುಟ್ಟು ಜನಿವಾರಗಳಿಲ್ಲದವನಾಗಿ ಮುಖ್ಯ-ವೆನಿಸುವಂತೆ ಪರಮಹಂಸಯೋಗಿಯು ದಂಡ ಮತ್ತು ಹೊದಿಕೆಯಾವುದೂ ಇಲ್ಲದವನಾಗಿ ಮುಖ್ಯವೆನಿಸುವನು. ದಂಡದ ಬಿದಿರಿನ ಲಕ್ಷಣವನ್ನೂ ಹೊದಿಕೆಯ ವಸ್ತ್ರದ ಲಕ್ಷಣವನ್ನೂ ಪರೀಕ್ಷಿಸುವುದರ ಕಡೆಗೆ ಮನಸ್ಸು ಹೋಗಿ ಅವನ ಯೋಗಕ್ಕೆ ಭಂಗಬಂದೀತು. ಹಾಗೆ ಮನಸ್ಸು ಕದಲುವುದು ಸರಿಯಲ್ಲ. ಏಕೆಂದರೆ-ಅಳಿಯನನ್ನು ಕೊಲ್ಲಬೇಕೆಂದು ಯಾರೂ ಮಗಳಿಗೆ ಮದುವೆಮಾಡುವುದಿಲ್ಲ. ಹೊದಿಕೆ ಮೊದಲಾದುವುಗಳೇನೂ ಇಲ್ಲದಿದ್ದರೆ ಛಳಿ ಮೊದಲಾದ ಬಾಧೆಗೇನು ಮಾಡ-ಬೇಕೆಂಬರೆ ಅವನಿಗೆ ಛಳಿಯೂ ಇಲ್ಲ. ಸೆಕೆಯೂ ಇಲ್ಲ. ದುಃಖವೂ ಇಲ್ಲ. ಸುಖವೂ ಇಲ್ಲ. ಮಾನವೂ ಇಲ್ಲ ಅವಮಾನವೂ ಇಲ್ಲ. ಅವನ ಮನಸ್ಸು ಒಳಗೇ ಇರುವುದರಿಂದ ಹೊ-ರಗಣ ಛಳಿ ಸೆಕೆ ಮೊದಲಾದಲಾದುವುಗಳು ಅವನಿಗೆ ತಟ್ಟುವುದೇ ಇಲ್ಲ. ಹುಡುಗರು ಮೈಮೇಲೆ ಬಟ್ಟೆಗಳನ್ನು ಹಾಕಿಕೊಳ್ಳದೆ ಛಳಿಗಾಲದಲ್ಲಿ ಮುಂಜಾನೆ ಕೂಡ ಹೊರಗೆ ಬಂದು ಆಟದೊಳಗಿದ್ದು ಬಿಡುವರಲ್ಲ! ಅವರಿಗೆಲ್ಲಿಯ ಛಳಿ? ಹಾಗೆಯೇ ಪರಮಾತ್ಮ-ಸ್ವರೂಪದಲ್ಲಿಯೇ ಮನಸ್ಸನ್ನು ಮುಚ್ಚಿಟ್ಟುಕೊಂಡಿರುವ ಪರಮಹಂಸ ಯೋಗಿಗೆ ಛಳಿಯೂ ಹತ್ತುವುದಿಲ್ಲ ಮಳೆಯೂ ಹತ್ತುವುದಿಲ್ಲ ಸೆಕೆಯೂ ಹತ್ತುವುದಿಲ್ಲ. ಛಳಿ ಮತ್ತು ಸೆಕೆ ಇವು ಹತ್ತದ ಮೇಲೆ ಇವುಗಳಿಂದಾಗುವ ಸುಖವೂ ಹತ್ತುವುದಿಲ್ಲ ದುಃಖವೂ ಹತ್ತುವುದಿಲ್ಲ. ಒಳ್ಳೇ ಉರಿಬೇಸಿಗೆಯಲ್ಲಿ ತಂಪು ಹಿತವಾಗಿರುತ್ತದೆ. ಅದೇ ತಂಪು ಛಳಿಗಾಲದಲ್ಲಿ ಬೇಡವಾಗುತ್ತದೆ. ಸೆಕೆಯೂ ಒಳ್ಳೇ ಛಳಿಗಾಲದಲ್ಲಿ ಬೇಕೆನಿಸುತ್ತದೆ. ಬಿಸಿಲುಗಾಲದಲ್ಲಿ ಬೇಡವೆನಿಸುತ್ತದೆ. ಮಾನವೆಂದರೆ ಇನ್ನೊಬ್ಬರು ಬಂದು ಉಪಚಾರಮಾಡುವುದು. ಅಮಾನವೆಂದರೆ ಇನ್ನೊಬ್ಬರು ತಿರಸ್ಕರಿಸುವುದು. ಪರಮಹಂಸ ಯೋಗಿಗೆ ಪರಮಾತ್ಮನ ಹೊರತು ಬೇರೆ ಇಲ್ಲ. ಪರಮಪುರುಷನೆಂಬುವನೇ ಗೋಚರನಾಗುವುದಿಲ್ಲವಾದುದರಿಂದ ಮಾನಾವಮಾನಗಳ ಮಾತಂತೂ ಎಷ್ಟೋ ದೂರ ಹೋಯಿತು. ಹೀಗಾಗಿ ಅವನನ್ನು ಗೆಳೆಯರ ಮತ್ತು ಹಗೆಗಳ ಪ್ರೀತಿ ಮತ್ತು ಹಗೆತನ ಮೊದಲಾದ ಯಾವದ್ವಂದ್ವವೂ ಪೀಡಿಸುವದಿಲ್ಲ. ಇಷ್ಟೇ ಅಲ್ಲ. ಹಸಿವು ಬಾಯಾರಿಕೆ-ಗಳೂ, ಶೋಕ ಮೋಹಗಳೂ, ಮತ್ತು ಹುಟ್ಟುಸಾವುಗಳೂ ಇವು ಅವನಮೇಲೆ ಕೈ-ಮಾಡಲಾರವು. ಏಕೆಂದರೆ ಹಸಿವು ಬಾಯಾರಿಕೆಗಳೆಂಬುವು ಪ್ರಾಣದ ಧರ್ಮಗಳು, ಶೋಕ ಮೋಹಗಳು ಮನಸ್ಸಿನ ಧರ್ಮಗಳು, ಹುಟ್ಟುಸಾವುಗಳು ದೇಹದ ಧರ್ಮಗಳು. ಪರಮಹಂಸ ಯೋಗಿಯು ಆತ್ಮಸ್ವರೂಪದಲ್ಲಿಯೇ ಸೇರಿಕೊಂಡಿರುವುದರಿಂದ ಯಾವ ದ್ವಂದ್ವವೂ ಅವನನ್ನು ಮುಟ್ಟಲರಿಯದು.

ಸಮಾಧಿಯಲ್ಲಿ ಕುಳಿತಿರುವಾಗ ದ್ವಂದ್ವಗಳು ಕೈಮಾಡದಿದ್ದರೂ ಸಮಾಧಿಯಿಂದ ಎದ್ದಮೇಲೆ ಇತರ ಸಂಸಾರಿಗಳಿಗೆ ಹೇಗೋ ಹಾಗೆಯೇ ಅವರಿಗೂ ದ್ವಂದ್ವಗಳ ಭಾಧೆ ತಟ್ಟುವುದೆಂದರೆ ಹಾಗಲ್ಲ. ಪರಮಹಂಸಯೋಗಿಯು ನಿಂದೆ, ಗರ್ವ, ಮತ್ಸರ, ದಂಭ,

ದರ್ಪ, ಬಯಕೆ, ಹಗೆತನ, ಸುಖ, ದುಃಖ, ಕಾಮ, ಸಿಟ್ಟು, ಜಿಪುಣತನ, ಮೋಹ, ಹರ್ಷ ಅಸೂಯೆ ಮತ್ತು ಅಹಂಕಾರ ಮೊದಲಾದುವುಗಳನ್ನೆಲ್ಲಾ ದೂರದಲ್ಲಿ ಬಿಟ್ಟಿರುವನು. ನಿಂದೆಯೆಂದರೆ ಅವನಿಗೆ ಆಗದವರು ತನ್ನ ಮೇಲೆ ಹೊರಿಸುವದೂರು. ಇತರರಿಗಿಂತ ತಾನು ಹೆಚ್ಚಿನವನಂತೆ ಮೆರೆಯುವದು ಗರ್ವ. ವಿದ್ಯೆಯಲ್ಲಿಯೂ ಹಣಕಾಸಿನಲ್ಲಿಯೂ ಇತರರಿಗೆ ಸಮಜೋಡಿಯಾಗಬೇಕೆಂಬ ಬುದ್ಧಿಯು ಮತ್ಸರ. ಇತರರೆದುರಿಗೆ ತಾನು ಜಪಿಸುತ್ತಿರುವಂತೆಯೂ ಧ್ಯಾನಮಾಡುತ್ತಿರುವಂತೆಯೂ ತೋರಿಸಿಕೊಳ್ಳುವದು ದಂಭ. ಇತರರನ್ನು ಬೆದರಿಸುವದರಲ್ಲಿ ಗಟ್ಟಿಗತನವನ್ನು ತೋರಿಸುವದು ದರ್ಪ. ಹಣಕಾಸುಗಳನ್ನು ಬೇಕೆನಿಸುವುದು ಬಯಕೆ. ತನಗೆ ಆಗದವರನ್ನು ಕೊಲ್ಲಬೇಕೆಂದು ಮುಂತಾದುವನ್ನು ಬಯಸುವದು ಹಗೆತನ, ಬೇಕಾದವಸ್ತು ಶಿಕ್ಕಿದಾಗ ಮನಸ್ಸು ಹರಿದಾಟವನ್ನು ಬಿಟ್ಟು ಸಮಾಧಾನವನ್ನು ಹೊಂದಿರುವದೇ ಸುಖ. ಬೇಡವಾದವಸ್ತು ಗಂಟುಬಿದ್ದಾಗ ಮನಸ್ಸು ತೊಳಲುವದು ದುಃಖ. ಹೆಂಗಸರಮೇಲಣ ಆಸೆ ಕಾಮ. ಬಯಸಿದ ವಸ್ತು ಸಿಕ್ಕದೇ ಹೋಯಿತೆಂದು ಮನಸ್ಸಿನಲ್ಲಿ ಕುದಿಯುವುದು ಸಿಟ್ಟು. ಕೈಗೆಸಿಕ್ಕಿದ ಹಣಕಾಸುಗಳನ್ನು ವೆಚ್ಚಮಾಡಲಾರದೆ ಬಿಗಿಹಿಡಿಯುವದೇ ಜಿಪುಣತನ. ತನಗೆ ಬೇಕಾದವರನ್ನು ಆಗದವರೆಂದು ತಿಳಿಯುವುದು ಮೋಹ. ಮನಸ್ಸಿನಲ್ಲಿ ಸುಖವಾದುದೆಲ್ಲಾ ಹೊರಗೆ ತೋರುವಂತೆ ಮುಖವು ಅರಳುವದೇ ಮೊದಲಾದ ರೀತಿಯಾಗುವಂಥ ಬುದ್ಧಿವೃತ್ತಿಯೇ ಹರ್ಷ. ಇನ್ನೊಬ್ಬರ ಗುಣವನ್ನು ದೋಷವಾಗಿ ಎಣಿಸುವದೇ ಅಸೂಯೆ. ದೇಹ ಮತ್ತು ಇಂದ್ರಿಯಗಳು ಒಂದುಕೊಂಡು ಕೂಡಿಕೊಂಡಿರುವದನ್ನೇ ಆತ್ಮಸ್ವರೂಪವೆಂದು ತಪ್ಪು ತಿಳಿಯುವದೇ ಅಹಂಕಾರ. ಪರಮಹಂಸಯೋಗಿಯು ಇವುಗಳನ್ನೂ ಭೋಗ್ಯವಸ್ತುಗಳೆಲ್ಲಾ ಚೆನ್ನಾಗಿರುವುವೆಂಬ ಬುದ್ಧಿಯನ್ನೂ ಅವುಗಳು ನನ್ನವೆಂಬುದನ್ನೂ ಎಷ್ಟು ಹಿಂದೆಯೇ ಬಿಟ್ಟು ವಾಸನಾಕ್ಷಯವನ್ನೂ ಅಭ್ಯಾಸಮಾಡಿಕೊಂಡಿರುವನು.

ತನ್ನ ದೇಹವು ಕಣ್ಣುತುಂಬ ಕಾಣುತ್ತಲಿರುವಾಗ ಅವುಗಳನ್ನೆಲ್ಲಾ ಬಿಡುವದು ಸಂಭವವೇ ಎಂದು ಯೋಚಿಸಬಾರದು. ಅವನು ತನ್ನ ದೇಹವನ್ನು ಆತ್ಮವಲ್ಲವೆಂದು ದೂರಮಾಡಿ ಅದನ್ನು ತನಗಿಂತ ಬೇರೆಯಾದಂಥ ಒಂದು ಹೆಣದಂತೆ ನೋಡುತ್ತಿರುವನು. ಮುಟ್ಟಿದರೆ ಮೈಲಿಗೆಯಾಗುವದೆಂದು, ಹೆದರುತ್ತ ಶ್ರದ್ಧಾಳುಗಳಾದವರು ಹೆಣವನ್ನು ದೂರದಲ್ಲಿದ್ದು ನೋಡುವಂತೆ ಪರಮಹಂಸಯೋಗಿಯು ದೇಹವೇ ನಾನೆಂಬ ಬುದ್ಧಿ-ಎಲ್ಲಿ ಬಂದು ತಾಕಿತೋ ಎಂದು ದೂರದಲ್ಲಿಯೇ ಇದ್ದು ಆತ್ಮಸ್ವರೂಪಕ್ಕಿಂತ ಅದನ್ನು ಬೇರೆಯಾಗಿಯೇ ಮಾಡಿ ಒಗೆಯುತ್ತಿರುವನು. ಏಕೆಂದರೆ ಅವನು ಮೊದಲೇ ಗುರುಗಳ ಹೇಳಿಕೆಯಿಂದಲೂ ವೇದವಚನದಿಂದಲೂ ಅನುಭವದಿಂದಲೂ, ಕೂಡ ದೇಹವು ಆತ್ಮವಲ್ಲವೆಂದು ಅದನ್ನು ಚಿತ್ಸ್ವರೂಪನಾದ ಆತ್ಮನಿಂದ ಎಷ್ಟೋ ಆಚೆಗೆ ದೂರಕ್ಕೆ ಸರಿಸಿರುವನು. ಚೈತನ್ಯದಿಂದ ಬೇರೆಮಾಡಿ ನೋಡುತ್ತಲೇ ದೇಹವು ಹೆಣದಂತೆಯೇ ಕಾಣುವುದು. ಆದ್ದರಿಂದ ದೇಹವು ಅವನಿಗೆ ಕಣ್ಣುತುಂಬಾ ಕಂಡರೂ ನಿಂದೆ ಮೊದಲಾದುವುಗಳೇನೂ ಅವನಿಗೆ ಹತ್ತುವದಿಲ್ಲ. ಕಗ್ಗತ್ತಲೆಯಲ್ಲಿ ಒಂದುಸಲ ದಿಕ್ಕುತೋಚದಂತೆ

ಆಗಿದ್ದದ್ದು ಹೊತ್ತು ಹುಟ್ಟಿದ್ದರಿಂದಲೋ ಏತರಿರದಲೋ ಹೋದರೂ ಮತ್ತೊಮ್ಮೆ ಯಾವಾಗಲಾದರೂ ಬರುವಂತೆ ದೇಹವೇ ನಾನೆಂಬ ಸಂಶಯವೂ ತಲೆದೋರಿ ನಿಂದೆ ಮೊದಲಾದುವುಗಳಿಂದ ದುಃಖವನ್ನುಂಟುಮಾಡೀತೆಂದು ತಿಳಿಯಬಾರದು. ಅವನಿಗೆ ಸಂಶಯ ತಪ್ಪು ತಿಳಿವಳಿಕೆ ಮತ್ತು ಒರೀ ತೋರಿಕೆಯನ್ನು ನಂಬುವ ಕಾರಣವೇ ಎಂದಿಗೂ ಬರುವದಿಲ್ಲ. ಸಂಶಯವೆಂದರೆ ಆತ್ಮನು ಮಾಡುವುದು ಬಿಡುವುದು ಮೊದಲಾದ ಧರ್ಮಗಳುಳ್ಳವನಹುದೋ ಅಲ್ಲವೋ ಎಂದು ಯೋಚಿಸುವುದು. ತಪ್ಪು ತಿಳಿವಳಿಕೆ ಎಂದರೆ ದೇಹ ಮೊದಲಾದುವುಗಳನ್ನೇ ಆತ್ಮನೆಂದು ತಿಳಿಯುವುದು. ಒರೀ ತೋರಿಕೆಯನ್ನು ನಂಬುವುದೆಂದರೆ ವಿಷಯಗಳಮೇಲೆ ಇರುವ ಭರವಸ. ಈ ಸಂಶಯ ಮೊದಲಾದವುಗಳುಂಟಾಗುವುದಕ್ಕೆ ನಾಲ್ಕು ಕಾರಣಗಳಿರುವುವು. ಮೂರುಗಳಿಗೆಯ ಬಾಳಿನವುಗಳಾದ ಬೆಟ್ಟ ನದಿ ಸಮುದ್ರ ಮೊದಲಾದವುಗಳನ್ನು ಎಂದೆಂದೂ ಇರುವುದೆಂದು ತಿಳಿಯುವುದೊಂದು. ಹೊಲಸಾದಂಥ ಹೆಂಡತಿ ಮಕ್ಕಳ ಮೈಯನ್ನು ಪವಿತ್ರವಾದದ್ದೆಂದು ಭಾವಿಸುವುದೊಂದು. ದುಃಖರೂಪವಾದ ವ್ಯವಸಾಯ ಮತ್ತು ವ್ಯಾಪಾರಗಳನ್ನು ಸುಖರೂಪವೆಂದು ಮೋಹಗೊಳ್ಳುವುದೊಂದು—ತಾನಲ್ಲದ ಹೆಂಡತಿ ಮಕ್ಕಳು ಮೊದಲಾದವರನ್ನು ತಾನೆಂದು ತಿಳಿಯುದೊಂದು. ಹೀಗೆ ನಾಲ್ಕು ಬಗೆಯಾಗಿರುವುದು. ಸಂಶಯ ಮೊದಲಾದವುಗಳಿಗೆ ತೌರುಮನೆಯಾದಂಥ ಈ ನಾಲಕ್ಕು ಇವುಗಳ ವಾಸನೆಯೂ ಕೂಡ ಬ್ರಹ್ಮವಸ್ತುವನ್ನು ಮರೆಮಾಡುವುವು. ಇವುಗಳಿಗೇ ಅಜ್ಞಾನವೆಂದು ಹೆಸರು—ಈ ಅಜ್ಞಾನವು ಪರಮಹಂಸಯೋಗಿಗೆ ಎಷ್ಟೋಕಾಲದಹಿಂದೆ ಮಹಾವಾಕ್ಯಶ್ರವಣವಾದಾಗಲೇ ದಿಕ್ಕುಗೆಟ್ಟು ಹೋಗಿರುವುದು. ಆಗ ಅಷ್ಟಿಷ್ಟು ಅದರ ವಾಸನೆ ಉಳಿದುಕೊಂಡಿದ್ದರೂ ಅದು ಈಚೆಗೆ ಯೋಗಾಭ್ಯಾಸದಿಂದ ಕರಗಿ ಹೋಗಿರುವುದು. ಕಗ್ಗತ್ತಲೆಯಲ್ಲಿ ದಿಕ್ಕುತೋಚದೆ ಇದ್ದವನಿಗೆ ಹೊತ್ತು ಹುಟ್ಟಿದಮೇಲೆ ದಿಗ್ಭ್ರಾಂತಿಯು ಹೋದ ಉದಾಹರಣೆಯು ಈ ಸಂದರ್ಭಕ್ಕೆ ಒಪ್ಪುವುದಿಲ್ಲ. ಏಕೆಂದರೆ ಹೊತ್ತು ಹುಟ್ಟಿದಾಗ ಆದಿಗ್ಭ್ರಾಂತಿ ಹೋದರೂ ಅದರವಾಸನೆ ಉಳಿದುಕೊಂಡೇ ಇರುತ್ತದೆ. ಆ ಪರಮಹಂಸನಿಗೆ ಅಜ್ಞಾನವೂ ಇರುವುದಿಲ್ಲ. ಅಜ್ಞಾನದ ವಾಸನೆಯೂ ಇರುವದಿಲ್ಲ ಅಂಥವನಲ್ಲಿ ಸಂಶಯ ಮೊದಲಾದವುಗಳು ಹೇಗೆ ಕಾಣಿಸಿಕೊಂಡಾವು! ಅಜ್ಞಾನವೂ ಅದರ ವಾಸನೆಯೂ ಪರಮಹಂಸಯೋಗಿಯ ನೆರಳಿದ್ದ ಕಡೆಗೆ ಕೂಡ ಎಂದೆಂದಿಗೂ ಸುಳಿಯಲಾರವು. ಅಜ್ಞಾನ ಮತ್ತು ಅಜ್ಞಾನದ ವಾಸನೆ ಇವುಗಳ ನಾಶಹುಟ್ಟಿದಮೇಲೆ ಅವು ಮತ್ತೆ ಹುಟ್ಟುವುದಿಲ್ಲ. ಆದುದರಿಂದ ಪರಮಹಂಸನಿಗೆ ಸಂಶಯಾದಿಗಳು ಎಂದೆಂದಿಗೂ ಇರುವುದಿಲ್ಲ. ಆ ಯೋಗಿಗೆ ಸರ್ವವೇದಾಂತ ಪ್ರಸಿದ್ಧನಾದ ಪರಮಾತ್ಮನಜ್ಞಾನವು ಎಡೆಬಿಡದೆ ಇರುವುದು. ಅವನು ಮನಸ್ಸಿನ ಹರಿದಾಟವನ್ನೆಲ್ಲಾ ಯೋಗದಿಂದ ನಿಲ್ಲಿಸಿಕೊಂಡು ಯಾವಾಗಲೂ ಪರಮಾತ್ಮಸ್ವರೂಪವನ್ನು ಅನುಸಂಧಾನ ಮಾಡುತ್ತಿರುವನು. ಆ ಜ್ಞಾನವು ಮುಕ್ಕದೆ ಯಾವಾಗಲೂ ಒಂದೇರೀತಿಯಾಗಿ ಇದ್ದೇ ಇರುವುದರಿಂದ ಅಜ್ಞಾನವಾಗಲಿ ಅದರ ವಾಸನೆಯಾಗಲಿ ಅಲ್ಲಿ ಹಣುಕಿ ನೋಡುವುದಕ್ಕೆ

ಕೂಡ ಆಗುವದಿಲ್ಲ. ತನ್ನಲ್ಲಿ ಸ್ವಾನುಭವಸಿದ್ಧರೂಪ ಪರಮಾತ್ಮಸ್ವರೂಪವು ತಾನೇ ಹೊರತು ತಾರ್ಕಿಕರ ಕಲ್ಪನೆಯಂತೆ ಬೇರೆಯಂದಲ್ಲವೆಂದು ಅವನು ಗೊತ್ತುಮಾಡಿಕೊಂಡಿರುವನು. ಆ ಪರಮಾತ್ಮನು ಸಿಟ್ಟುಮೊದಲಾದವುಗಳಿಂದ ಹೊರಬಿದ್ದು ಶಾಂತನಾಗಿ ಆನಂದ-ದಲ್ಲಿ ಹೋಗುವದು ಬರುವದು ಮೊದಲಾದ ಕ್ರಿಯೆಗಳನ್ನು ಮಾಡತಕ್ಕವನಲ್ಲ. ಅವನ ಜೊತೆಗೆ ಎಣಿಸಿ ಬೆರಳು ಮಡಿಸುವುದಕ್ಕೆ ಮತ್ತೊಂದಿಲ್ಲ. ಅವನು ಸಚ್ಚಿದಾನಂದಸ್ವರೂಪನು. ಪರಮಹಂಸಯೋಗಿಯು ಆ ಸ್ವರೂಪನಾಗಿರುವನು. ಎಲ್ಲರ ಆತ್ಮವೂ ಪರಬ್ರಹ್ಮನೇ. ಪರಬ್ರಹ್ಮವು ಆನಂದಸ್ವರೂಪವಾಗಿದ್ದು ಎಲ್ಲರ ಆತ್ಮವೂ ಪರಬ್ರಹ್ಮವೇ ನಿಜವಾದರೆ ಎಲ್ಲರಿಗೂ ಆನಂದವೇಕೆ ತೋರುವದಿಲ್ಲವೆಂದರೆ:—ಹಸುವಿನ ಹೊಟ್ಟೆಯಲ್ಲಿ ಬೆಣ್ಣೆಯ ಭಾಗವಿರುತ್ತದೆ. ಅಲ್ಲಿಯೇ ಅದು ಶರೀರದ ಬೆಳವಣಿಗೆಗೆ ಸಹಾಯ ಮಾಡುವದಿಲ್ಲ. ಬೆಣ್ಣೆಯನ್ನು ನಾವೇ ಪ್ರಯತ್ನದಿಂದ ಕಡೆದು ತೆಗೆಯುತ್ತೇವೆ. ಮತ್ತೆ ಅದರ ಬೆಳವಣಿಗೆಗೆ ಔಷಧವಾಗುತ್ತದೆ ಈ ರೀತಿಯಲ್ಲಿ ಬೆಣ್ಣೆಯಂತೆ ಪರಮಾತ್ಮನು ಎಲ್ಲರ ಶರೀರದಲ್ಲಿಯೂ ಇರುವನು. ಉಪಾಸನೆ ಇಲ್ಲದೆ ಅವನು ಜನರ ಹಿತವನ್ನು ಮಾಡುವದಿಲ್ಲ.

ಆ ಪರಮಹಂಸಯೋಗಿಯ ಹಿಂದಿನ ಆಶ್ರಮದಲ್ಲಿ ಗುರುಗಳೂ ಹಿರಿಯರೂ ಅಣ್ಣತಮ್ಮಂದಿರೂ ಅಂಥ ಕರ್ಮಠರು ಕರ್ಮಕ್ಕಿಂತ ಇನ್ನೊಂದು ಹೆಚ್ಚಿನದಿಲ್ಲವೆಂದು ಅದರಮೇಲೆ ಅತ್ಯಾಸಕ್ತಿಯನ್ನಿಟ್ಟು ಆ ಯೋಗಿಯು ಜುಟ್ಟು ಜನಿವಾರಗಳನ್ನೂ ಸಂಧ್ಯಾವಂದನೆಯನ್ನೂ ಬಿಟ್ಟಿರುವುದನ್ನು ನೋಡಿ ಇವನೊಬ್ಬ ನಾಸ್ತಿಕನೆಂದು ಬೊಗಳುತ್ತ ನಾಲಿಗೆಯ ತೀಟೆಯನ್ನು ಕಳೆದುಕೊಳ್ಳಬಹುದು. ಅವನಿಗೆ ವೇದಾಂತವೇದ್ಯನಾದ ಪರಮಾತ್ಮನ ಜ್ಞಾನವೇ ಜುಟ್ಟು. ಅದೇ ಜನಿವಾರ. ಅದೇ ಮಂತ್ರ. ಅದೇ ಕರ್ಮ. ಜುಟ್ಟು ಜನಿವಾರಗಳನ್ನಿಟ್ಟುಕೊಂಡು ಮಾಡುವ ಕರ್ಮಗಳಿಂದ ಸಿಕ್ಕುವಂಥ ಸ್ವರ್ಗಮೊದಲಾದ ಸುಖಗಳೆಲ್ಲಾ ಪರಮಹಂಸ ಯೋಗಿಯ ಪರಮಾನಂದವೆಂಬ ಸಮುದ್ರದ ತುಂತುರುಹನಿಗಳು. ಹೊರಗಣ ಜುಟ್ಟು ಜನಿವಾರಗಳನ್ನು ತೆಗೆದೊಗೆದಂಥ ಸನ್ಯಾಸಿಯು ಒಳಗೆ ಬ್ರಹ್ಮಜ್ಞಾನವೆಂಬ ಸೂತ್ರವನ್ನು ಧರಿಸಿರುವನು ಸೂಚನೆ ಮಾಡುವುದರಿಂದ ಅದಕ್ಕೆ ಸೂತ್ರವೆಂದು ಹೆಸರು. ಬ್ರಹ್ಮಜ್ಞಾನವೇ ಸೂತ್ರ. ಆ ಸೂತ್ರವನ್ನು ತಿಳಿದವನೇ ವೇದವನ್ನು ತಿಳಿದ ಬ್ರಾಹ್ಮಣನು. ಸೂತ್ರದಲ್ಲಿ ಪೋಣಿಸಿರುವ ಮಣಿಗಳಂತೆ ಯಾವ ಸೂತ್ರಾತ್ಮನ ಆಧಾರದಿಂದ ಎಲ್ಲವೂ ಇರುವವೋ ಆ ಸೂತ್ರವನ್ನು ಪರಮಹಂಸಯೋಗಿಯು ಧರಿಸುವನು. ಒಳ್ಳೇ ಗಟ್ಟಿಯಾದ ಉತ್ತಮವಾದ ಆ ಸೂತ್ರವನ್ನು ಧರಿಸಿಕೊಂಡಮೇಲೆ ಆ ಯೋಗಿಗೆ ಮೈಲಿಗೆ ಎಂಬುದೇ ತಟ್ಟುವುದಿಲ್ಲ. ಅವನೇ ನಿಜವಾದ ಯಜ್ಞೋಪವೀತವಂತನು. ಅವನೇ ನಿಜವಾದ ಜುಟ್ಟುಳ್ಳವನು. ಬರಿಯ ಕೂದಲ ಹೊರೆಯಲ್ಲೇನಿದೆ? ಹೀಗೆ ಪರಮಹಂಸಯೋಗಿಗೆ ಜ್ಞಾನವೇ ಜುಟ್ಟು. ಜ್ಞಾನವೇ ಜನಿವಾರ. ಅವನಿಗೆ ಸಂಧ್ಯಾವಂದನೆಯೂ ಉಂಟು ಅವನಿಗೆ ಶಾಸ್ತ್ರದಲ್ಲಿ ಹೇಳಿರುವ ಪರಮಾತ್ಮನೂ, ನಾನು ನಾನೆಂಬ ಭಾವ

ಹೇಳಿಕೊಳ್ಳುವಂಥ ಜೀವಾತ್ಮನೂ ಇಬ್ಬರೂ ಒಂದೇ ಎಂಬ ಜ್ಞಾನವು ಮಹಾವಾಕ್ಯ ಶ್ರವಣದಿಂದ ಆಗಿ ಮತ್ತೆಂದೆಂದೂ ಚಿಗುರದಂತೆ ಅವರ ಭೇದಬುದ್ಧಿಯು ಸುಟ್ಟುಬೂದಿಯಾಗಿರುವುದು. * ಆ ಜೀವಾತ್ಮ ಪರಮಾತ್ಮರ ಸಂಧಿಯಲ್ಲಿ ಹುಟ್ಟುವುದರಿಂದ ಅದಕ್ಕೆ ಸಂಧ್ಯಾ ಎಂದು ಹೆಸರು. ಹಗಲು ಮತ್ತು ರಾತ್ರಿಗಳ ಸಂಧಿಕಾಲದಲ್ಲಿ ಮಾಡುವ ಸಂಧ್ಯೆಯಂತೆ ಇದೂ ಸಂಧ್ಯೆ. ಆದ್ದರಿಂದ ಕರ್ಮಠರ ಬಾಯಿಗದ್ದಲವು ಯೋಗಿಯನ್ನೇನೂ ಮಾಡಲಾರದು. ಇಲ್ಲಿಗೆ ಪರಮಹಂಸಯೋಗಿಗಳು ಹಿಡಿಯತಕ್ಕ ದಾರಿಯನ್ನು ಹೇಳಿ ಅವರು ಹೇಗಿರುತ್ತಾರೆಂಬುದನ್ನು ಸ್ವಲ್ಪ ಹೇಳಿದ್ದಾಯಿತು. ಅವರು ಇರುವ ಸ್ಥಿತಿಯ ವಿಷಯವೇ ಇನ್ನಷ್ಟು ವಿಸ್ತಾರವಾಗಿ ಹೇಳಲಾಗುವುದು.

ಮುಖ್ಯವಾಗಿ ಆಸೆಗಳನ್ನೆಲ್ಲಾ ಬಿಟ್ಟು ಅಖಂಡಾನಂದ ಸ್ವರೂಪನಾಗಿರುವುದೇ ಅವನ ಸ್ಥಿತಿಯು. ಆಸೆಯೊಂದಿದ್ದರೆ ಸಿಟ್ಟು ಜಿಪುಣತನ ಮೊದಲಾದವುಗಳೆಲ್ಲಾ ಬಸವನ ಬಾಲದಂತೆ ಹಿಂದೆಯೇ ಅಂಟಿಕೊಂಡಿರುವುವು. ಆಸೆಯೊಂದನ್ನು ಹುಟ್ಟಡಗಿಸಿ ಬಿಟ್ಟರೆ ಮನಸ್ಸಿನ ದೋಷಗಳೆಲ್ಲ ಹೋದಂತೆಯೇ ಸರಿ. ಆಸೆಗಳೆಲ್ಲಾ ವಾಸನೆ ಕೂಡ ಇಲ್ಲದಂತೆ ಹೋದಮೇಲೆ ಮಾತ್ರವೇ ಮನಸ್ಸು ಆತ್ಮಸ್ವರೂಪದಲ್ಲಿಯೇ ಕದಲದೆ ನಿಲ್ಲುವುದು. “ದಂಡವನ್ನು ಹಿಡಿದಿರಬೇಕೆಂಬ ವಿಧಿಯ ವಾಸನೆಯಿಂದ ಕೂಡಿದಂಥ ವಿವಿದಿಷಾ ಸನ್ಯಾಸಿಗಳು ದಂಡವಿಲ್ಲದ ಪರಮಹಂಸಯೋಗಿಯ ಬಳಿಗೆ ಬರದೇ ಹೋದಾರಲ್ಲ!” ಎಂದರೆ ಯಾವನು ಜ್ಞಾನವೆಂಬ ದಂಡವನ್ನು ಹಿಡಿದಿರುವನೋ ಅವನಿಗೆ ಏಕದಂಡಿಯೆಂದು ಹೆಸರು. ಜ್ಞಾನವಿಲ್ಲದೆ ಬರೀ ಕಟ್ಟಿಗೆಯ ದಂಡವನ್ನು ಹಿಡಿದುಕೊಂಡ ಮಾತ್ರಕ್ಕೇ ಏನಾಯಿತು! ಅವನು ಸಹನಶೀಲತೆ, ಜ್ಞಾನ, ವೈರಾಗ್ಯ, ಮನೋನಿಗ್ರಹ ಮೊದಲಾದ ಗುಣಗಳನ್ನು ಮೈಗೂಡಿಸಿಗೊಳ್ಳದೆ ಬರೀ ಭಿಕ್ಷದಿಂದ ಹೊಟ್ಟೆಯನ್ನು ಹೊರೆಯುವವನಾದರೆ ಯತಿವೃತ್ತಿಯನ್ನು ಹಾಳುಮಾಡಿದಂಥ ಪಾಪಕ್ಕೆ ಗುರಿಯಾಗಿ ಬಹು ಭಯಂಕರವಾದ ನರಕವನ್ನು ಪಡೆಯುವನು. ತ್ರಿದಂಡಿಗಳಿಗೆ, ವಾಗ್ದಂಡವೆಂದೂ, ಕರ್ಮದಂಡವೆಂದೂ ಮನೋದಂಡವೆಂದೂ ದಂಡವು ಮೂರು ಬಗೆಯಾಗಿರುವಂತೆ ಏಕದಂಡಿಗೆ ಜ್ಞಾನದಂಡವೆಂದೂ, ಕಾಷ್ಠದಂಡವೆಂದೂ ಎರಡು ಬಗೆ. ವಾಗ್ದಂಡವೆಂದರೆ ಮಾತಾಡದೆ ಇರುವುದೆಂದೂ ಕರ್ಮದಂಡವೆಂದರೆ ಬಯಕೆಯನ್ನು ಬಿಡುವನೆಂದೂ ಮನೋದಂಡವೆಂದರೆ ಪ್ರಾಣಾಯಾಮವೆಂದೂ ದಕ್ಷನು ಹೇಳಿರುವನು. ಕರ್ಮದಂಡವೆಂದರೆ ಮಿತವಾಗಿ ಊಟಮಾಡುವುದೆಂದು ಒಬ್ಬರ ಅಭಿಪ್ರಾಯವಿರುವುದು. ತ್ರಿದಂಡಿ ಹರಟೆ ಮೊದಲಾದುವುಗಳನ್ನು ತಡೆದುಕೊಳ್ಳುವುದಕ್ಕಾಗಿ ವಾಗ್ದಂಡ ಮೊದಲಾದವುಗಳಿರುವಂತೆ ಪರಮಹಂಸಯೋಗಿಗೆ ಅಜ್ಞಾನವನ್ನೂ ಅದರ ಕಾರ್ಯವನ್ನೂ ಹಿಮ್ಮೆಟ್ಟಿಸುವುದಕ್ಕಾಗಿ ಜ್ಞಾನವೇ ದಂಡವಾಗಿರುವುದು. ಅಜ್ಞಾನವೆಂಬ ದಂಡವನ್ನು ಹಿಡಿದಿರುವನು ಮನಸ್ಸಿಗೆ ಯಾವಾಗಲಾದರೂ ಹೊರಬೀಳಬೇಕೆಂಬ ಯೋಚನೆ ಹುಟ್ಟಿದರೆ ಹಾಗೆ ಮಾಡದಂತೆ ನೆನಪು ಕೊಡುವು-

* ಆ ಜೀವಾತ್ಮ ಪರಮಾತ್ಮರಿಬ್ಬರೂ ಒಂದೇಯೆಂಬ ಬುದ್ಧಿಯಲ್ಲಿ

ದಕ್ಕಾಗಿ ಹೊರಗೆ ಕಟ್ಟಿಗೆಯ ದಂಡವನ್ನು ಹಿಡಿದುಕೊಳ್ಳಬೇಕು; ಅಷ್ಟೆ. ದಂಡವನ್ನು ಹಿಡಿಯಬೇಕೆಂಬ ಶಾಸ್ತ್ರದ ಮರ್ಮವಿಷ್ಟೆ. ಇದನ್ನು ತಿಳಿಯದೆ ಬರೀವೇಷದಿಂದಲೇ ಪುರುಷಾರ್ಥಸಿದ್ಧಿಯಾಗುವುದೆಂದು ಕಟ್ಟಿಗೆಯ ದಂಡವನ್ನು ಹಿಡಿದು ಕೃತಕೃತ್ಯನಾದನೆಂದು ಭಾವಿಸುವ ಸನ್ಯಾಸಿಯು ಬಹು ಭಯಂಕರವಾದ ನರಕವನ್ನು ಸೇರುತ್ತಾನೆ. ಏಕೆಂದರೆ ಅವನ ವೇಷವನ್ನು ನೋಡಿ ಜನರು ಅವನೊಬ್ಬ ಜ್ಞಾನಿಯೆಂದು ತಿಳಿದು ತಮ್ಮತಮ್ಮ ಮನೆಗಳಿಗೆ ಕರೆದುಕೊಂಡು ಹೋಗಿ ಊಟ ಉಪಚಾರಗಳನ್ನು ಮಾಡಿಸುವರು. ಈ ಸನ್ಯಾಸಿಯಾದರೋ . ನಾಲಿಗೆಯ ಚಪಲವನ್ನು ತಡೆದುಕೊಳ್ಳಲಾರದವನಾಗಿ ಯಾವುದನ್ನು ತಿನ್ನಬಹುದೆಂದೂ . ಯಾವುದನ್ನು ತಿನ್ನಬಾರದೆಂದೂ ನೋಡದೆ ಎಲ್ಲವನ್ನೂ ಹೊಟ್ಟೆಗೆ ತುರುಕಿಕೊಂಡುಬಿಡುವನು. ಇದರಿಂದ ಅವನಿಗೆ ಬಹು ಹೆಚ್ಚಿನ ದೋಷಪ್ರಾಪ್ತಿಯುಂಟಾಗುವುದು. ಸನ್ಯಾಸಿಗೆ ಅನ್ನದೋಷವಿಲ್ಲವೆಂಬುದೂ ನಾಲ್ಕು ವರ್ಣದವರಲ್ಲಿಯೂ ಭಿಕ್ಷೆ ತೆಗೆದುಕೊಳ್ಳಬಹುದೆಂಬುದೂ ಮೊದಲಾದ ಸ್ಮೃತಿವಚನಗಳೆಲ್ಲಾ ಜ್ಞಾನಿಯಾದ ಸನ್ಯಾಸಿಯ ವಿಷಯಕ್ಕೇ ಹೊರತು ಅಜ್ಞಾನಿಯಾದ ಸನ್ಯಾಸಿಗಲ್ಲ. ಆದ್ದರಿಂದ ಅಜ್ಞಾನಿಗೆ ನರಕವಾಗುವುದುಯೋಗ್ಯವೇ ಆಯಿತು. ಜ್ಞಾನಿಗಳಾದಂಥ ಸನ್ಯಾಸಿಗಳು ಭಿಕ್ಷೆಯಲ್ಲಿ ನಿಯಮವನ್ನನುಸರಿಸಬೇಕೆಂದು ಮನುವು ಹೇಳಿದ್ದಾನೆ. ಶಕುನ ಮೊದಲಾದವುಗಳನ್ನು ಹೇಳುವುದರಿಂದಾಗಲಿ ಜ್ಯೋತಿಷ ಮೊದಲಾದುವುಗಳನ್ನು ಹೇಳುವುದರಿಂದಾಗಲಿ ಧರ್ಮಶಾಸ್ತ್ರದಿಂದಾಗಲಿ ತರ್ಕವಾದದಿಂದಾಗಲಿ ಎಂದಿಗೂ ಭಿಕ್ಷೆಯನ್ನು ಸಂಪಾದಿಸುವುದಕ್ಕೆ ಹೋಗಬಾರದು. ಒಂದೇಹೊತ್ತು ಭಿಕ್ಷವನ್ನು ಮಾಡಬೇಕು. ಅದನ್ನು ಬೆಳಸಿ ಕೊಳ್ಳುತ್ತಾ ಹೋಗಬಾರದು. ಭಿಕ್ಷದಲ್ಲಿ ಹೆಚ್ಚಾಗಿ ಮನಸ್ಸು ಹಾಕುತ್ತಾ ಹೋದರೆ ಆಮೇಲೆ ಆ ಮನಸ್ಸು ವಿಷಯಗಳಲ್ಲಿಯೂ ಆಸಕ್ತಿಯನ್ನು ಹೊಂದೀತು. ಆತ್ಮಜ್ಞಾನವನ್ನು ಬೆಳಸಿಕೊಳ್ಳುತ್ತಿರುವಂಥವನ ವಿಷಯದಲ್ಲಾದರೂ ಅವನು ಒಂದುಹೊತ್ತು ಬೇಕಾದರೂ ಊಟಮಾಡಬಹುದೆಂತಲೂ ಎರಡು ಹೊತ್ತು ಬೇಕಾದರೂ ಊಟಮಾಡಬಹುದೆಂತಲೂ ಹೇಗಾದರೂ ಅವನ ಜ್ಞಾನದ ಅಭ್ಯಾಸವು ಸಾಗಿದರೆ ಸರಿಯೆಂದೂ ಸ್ಮೃತಿಯಲ್ಲಿ ಹೇಳಿದೆ.

ಹೀಗೆ ಜ್ಞಾನದಂಡ ಮತ್ತು ಕಾಷ್ಠದಂಡಗಳಲ್ಲಿ ಜ್ಞಾನದಂಡದ ಹೆಚ್ಚುಗಾರಿಕೆಯನ್ನೂ ಕಾಷ್ಠದಂಡದ ಕೀಳುತನವನ್ನೂ ತಿಳಿದು ಯಾವನು ಜ್ಞಾನದಂಡವನ್ನು ಹಿಡಿಯುವನೋ ಅವನೇ ಪರಮಹಂಸಯೋಗಿ. ಒಳ್ಳೇದು. ಪರಮಹಂಸಯೋಗಿಗೆ ಕಾಷ್ಠದಂಡದ ನಿರ್ಬಂಧವಿಲ್ಲವೆಂದು ಒಪ್ಪಿಕೊಳ್ಳೋಣ. ಉಳಿದ ನಡವಡಿಕೆಯೆಲ್ಲಾ ಹೇಗಿರಬೇಕೆಂಬುದೆ ಅವನಿಗೆ ದಿಕ್ಕುಗಳೇಹೊದಿಕೆ. ಅವನಿಗೆ ನಮಸ್ಕಾರದ ಗೋಜು ಇಲ್ಲ ನಿಂದೆಇಲ್ಲ. ಸ್ತುತಿಇಲ್ಲ. ಅವನು ಹುಚ್ಚನಂತೆ ಇರಬೇಕು. ಒಂದರಲ್ಲಿ ದ್ವೇಷವಿಲ್ಲ. ಇನ್ನೊಂದರಲ್ಲಿ ಪ್ರೀತಿಇಲ್ಲ. ಶ್ರಾದ್ಧಭೋಜನವಿಲ್ಲ. ಬುದ್ಧಿಯನ್ನು ಹಾಕುವುದೂಇಲ್ಲ. ತೆಗೆಯುವುದೂ ಇಲ್ಲ. ಮಂತ್ರವಿಲ್ಲ. ಧ್ಯಾನವಿಲ್ಲ. ಉಪಾಸನೆ ಇಲ್ಲ. ಬೇರೆ ಎಂಬುದಿಲ್ಲ. ಒಂದೇ ಎಂಬುದಿಲ್ಲ.

ನಾನೆಂಬುದಿಲ್ಲ. ನೀನೆಂಬುದಿಲ್ಲ. ಯಾವುದೂ ಇಲ್ಲ. ಅವನಿಗೆ ಇಂಥಾ ಕಡೆ ಎಂಬುದಿಲ್ಲ. ಒಬ್ಬನುಕೊಟ್ಟ ದುಡ್ಡುಕಾಸುಗಳನ್ನು ಮುಟ್ಟುವುದಿಲ್ಲ. ಜನರಕಡೆಗೆ ಕಡೆಗಣ್ಣನ್ನೂ ಕೂಡಹಾಕಿನೋಡುವುದಿಲ್ಲ. ಮೊಳಕಾಲಮೇಲೆ ಹೊಕ್ಕಳ ಕೆಳಗೆ ಒಂದು ಅರಿವೆಯನ್ನು ಸುತ್ತಿಕೊಂಡು ಮತ್ತೊಂದನ್ನು ಹೊದ್ದುಕೊಂಡು ಮನೆಗಳನ್ನು ತಿರುಗಬೇಕೆಂಬ ಸ್ಮೃತಿವಚನವು ಯೋಗಿಯಲ್ಲದ ಸನ್ಯಾಸಿಗೆ ಹೇಳಿದ್ದು. ತನಗಿಂತ ಮೊದಲು ಸನ್ಯಾಸಿಯಾಗಿದ್ದು ಧರ್ಮದಲ್ಲಿ ತನ್ನಂತೆ ಇದ್ದರೆ ಅವನಿಗೆ ನಮಸ್ಕಾರವನ್ನು ಮಾಡಬೇಕೆಂಬ ಸ್ಮೃತಿವಚನವೂ ಕೂಡ ಯೋಗಿಯಲ್ಲದ ಸನ್ಯಾಸಿಗೇ ಹೇಳಿದ್ದು. ಗಯಾ ಪ್ರಯಾಗ ಮೊದಲಾದ ತೀರ್ಥಗಳಲ್ಲಿ ಪೂರ್ಣವಿಶ್ವಾಸದ ಕರ್ಮಠರು ಕೊಡುವ ಶ್ರಾದ್ಧಭೋಜನವು ಇವನಿಗಿಲ್ಲ. ಜೀದೆ ನಿಂದೆ ಗರ್ವ ಮೊದಲಾದವುಗಳಿವನಿಗಿಲ್ಲವೆಂದಮಾತಿನಲ್ಲಿ ನಿಂದೆಯೆಂದರೆ ಮತ್ತೊಬ್ಬರು ನಿಂದಿಸಿದರೆ ಪರಮಹಂಸ ಯೋಗಿಯು ಅದನ್ನು ಮನಸ್ಸಿಗೆ ಹಚ್ಚಿಕೊಳ್ಳುವುದಿಲ್ಲವೆಂದು ಅರ್ಥ. ಇಲ್ಲಿ ನಿಂದೆಯೂ ಇಲ್ಲ ಸ್ತುತಿಯೂ ಇಲ್ಲ. ಎಂಬ ಮಾತಿಗೆ ಪರಮಹಂಸಯೋಗಿಯು ಒಬ್ಬರನ್ನು ನಿಂದಿಸುವುದೂ ಇಲ್ಲ. ಸ್ತುತಿಸುವುದೂ ಇಲ್ಲವೆಂದು ತಾತ್ಪರ್ಯ. ಹೊತ್ತು ಬಂದಹಾಗೆ ಇರುವನೆಂದರೆ ಅವನಿಗೆ ಯಾವ ನಿರ್ಬಂಧವೂ ಇಲ್ಲವೆಂದರ್ಥ. ರಾಜನ ಅಪ್ಪಣೆಯನ್ನು ಹೇಗೆ ನಡೆಸಿಯೇ ತೀರಬೇಕೋ ಹಾಗೆಯೇ ಭಿಕ್ಷಾಟನವನ್ನೂ ಜಪವನ್ನೂ ಶೌಚವನ್ನೂ ಸ್ನಾನವನ್ನೂ ಧ್ಯಾನವನ್ನೂ ದೇವತಾರ್ಚನೆಯನ್ನೂ ಮಾಡಿಯೇ ತೀರಬೇಕೆಂಬ ಸ್ಮೃತಿವಚನವು ಯೋಗಿಯಲ್ಲದ ಪರಮಹಂಸನಿಗೆ ಹೇಳಿದ್ದು. ಯಾವಾಗಲೋ ಒಂದುಸಲ ನೆನಸಿಕೊಳ್ಳುವುದು ಧ್ಯಾನ. ಯಾವಾಗಲೂ ನೆನಸಿಕೊಳ್ಳುತ್ತಲಿರುವುದು ಉಪಾಸನ. ಇವೂ ಅವನಿಗಿಲ್ಲ ಯೋಗಿಗೆ ಸ್ತುತಿ ನಿಂದೆ ಮೊದಲಾದ ಲೌಕಿಕ ವ್ಯವಹಾರವು ಹೇಗಿಲ್ಲವೋ ಮತ್ತು ದೇವರ ಪೂಜೆ ಮೊದಲಾದ ಧರ್ಮಶಾಸ್ತ್ರದ ವ್ಯವಹಾರವೂ ಕೂಡ ಹೇಗೆ ಇಲ್ಲವೋ ಹಾಗೆ ಇದು ಲಕ್ಷ್ಯ ಇದು ವಾಚ್ಯ ಮೊದಲಾದ ಜ್ಞಾನಶಾಸ್ತ್ರದ ವ್ಯವಹಾರವೂ ಇರುವುದಿಲ್ಲ. "ಅನಾತ್ಮವನ್ನೆಲ್ಲಾ ನೋಡುತ್ತಿರುವ ಚೈತನ್ಯವೇ ತತ್ವಮಸಿ ಎಂಬ ವಾಕ್ಯದಲ್ಲಿರುವ ತ್ವಂ (ನೀನು) ಎಂಬ ಪದಕ್ಕೆ ಲಕ್ಷ್ಯವು. ಶರೀರಮೊದಲಾದವುಗಳಿಂದ ಕೂಡಿದ ಚೈತನ್ಯವು ತ್ವಂ ಪದಕ್ಕೆ ಲಕ್ಷ್ಯವಲ್ಲ. ವಾಚ್ಯ. ಆ ವಾಚ್ಯವು ತತ್ ಎಂಬ ಪದದ ಅರ್ಥಕ್ಕೆ ಬೇರೆಯಾಗಿರುವುದು. ಆದರೆ ಲಕ್ಷ್ಯವು ಮಾತ್ರ ಬೇರೆಯಲ್ಲ. ತನ್ನ ದೇಹದಲ್ಲಿರುವ ವಾಚ್ಯಾರ್ಥವನ್ನು" "ನಾನು, ಎನ್ನಬೇಕು. ಮತ್ತೊಬ್ಬರ ದೇಹದಲ್ಲಿರುವುದನ್ನು ನೀನು ಎನ್ನಬೇಕು. ಲಕ್ಷ್ಯ—ವಾಚ್ಯ ಇವೆರಡೂ ಚೈತನ್ಯದಿಂದ ಕೂಡಿರುತ್ತವೆ. ಉಳಿದುವೆಲ್ಲ ಜಡವೆನಿಸುವುದು. ಇದನ್ನೆ ಜಗತ್ತೆನ್ನುತ್ತಲೂ ಎನ್ನುತ್ತಾರೆ. ಹೀಗೆಂಬ ಬೇರೆಬೇರೆ ಕಲ್ಪನೆಗಳು ಯಾವವೂ ಯೋಗಿಗೆ ಇರುವುದಿಲ್ಲ. ಏಕೆಂದರೆ ಅವನ ಮನಸ್ಸು ಬ್ರಹ್ಮದಲ್ಲಿಯೇ ವಿಶ್ರಾಂತಿಯನ್ನು ಹೊಂದಿರುವುದು. ಆದ್ದರಿಂದಲೇ ಪರಮಹಂಸ ಸನ್ಯಾಸಿಗೆ ಇಂಥಾದ್ದೊಂದು ಕಡೆಯೆಂಬ ನೆಲೆಯೇಇಲ್ಲ. ಯಾವಾಗಲೂ ಇರುವದಕ್ಕೆಂದು ಅವನು ಒಂದು ಮಠವನ್ನು ಸಂಪಾದನೆ

ಸ್ವತ್ತನ್ನಾಗಲಿ, ತಾಳು ಕಡ್ಡಿಯನ್ನಾಗಲಿ, ಲೋಹದ ಪದಾರ್ಥವನ್ನಾಗಲಿ ವಿಷದ್ರವ್ಯಗಳನ್ನಾಗಲಿ, ಆಯುಧವನ್ನಾಗಲಿ ಇಟ್ಟುಕೊಳ್ಳಬಾರದು. ಯತಿಯಾದವನು ಇವುಗಳನ್ನು ಮಲಮೂತ್ರಗಳಂತೆ ಕಾಣಬೇಕು. ವೈದ್ಯವನ್ನೂ, ಮಾಟವನ್ನೂ ಜ್ಯೋತಿಷ್ಯವನ್ನು, ಕ್ರಯ ವಿಕ್ರಯವನ್ನೂ ಕುಶಲವಿದ್ಯವನ್ನೂ ಬಿಡಬೇಕು. ಇವುಗಳನ್ನು ಪಠರ ಹಂದಿನಂತೆ ಕಾಣಬೇಕು ಎಂದು ವೇದಾಂತಿಗಳು ಹೇಳಿದ್ದಾರೆ. ಹೀಗೆ ಯೋಗಿಯು ಲೌಕಿಕವಾಗಲಿ ವೈದಿಕವಾಗಲಿ ತನಗೆ ಬಾಧಕವಾದ ವ್ಯವಹಾರಗಳನ್ನು ಬಿಡಬೇಕೆಂದು ಹೇಳಿದ್ದಾಯಿತು. ಹಾಗೆ ಬಿಡದಿದ್ದರೆ ಅದರಿಂದ ಬಹು ಕೇಡಾಗುವದು. ಸನ್ಯಾಸಿಯು ದುಡ್ಡು ಕಾಸನ್ನು ಆಸಕ್ತಿಯಿಂದ ನೋಡಿದರೆ ಬ್ರಹ್ಮಹತ್ಯದ ಪಾಪ ಬರುತ್ತದೆ. ಅವನು ಅದನ್ನು ಆಸಕ್ತಿಯಿಂದ ಮುಟ್ಟಿದರೆ ಪೇಹರವನಾಗುತ್ತಾನೆ. ಆಸಕ್ತಿಯಿಂದ ಅದನ್ನು ತೆಗೆದುಕೊಂಡರೆ ತನ್ನನ್ನು ತಾನೇ ಕೊಂದುಕೊಂಡವನಾಗುತ್ತಾನೆ. ಸನ್ಯಾಸಿಗೆ ದುಡ್ಡು ಕಾಸಿನಲ್ಲಿ ಆಸಕ್ತಿ ಹುಟ್ಟಿದರೆ ಏನಾದರೂ ಮಾಡಿ ಅದನ್ನು ಪಡೆಯಬೇಕೆಂಬ ಸಡಗರದಲ್ಲಿ ಪ್ರಪಂಚವೆಲ್ಲಾ ಬರೀ ತೋರಿಕೆಯದೆಂಬ ವೇದಾಂತವನ್ನು ಜರಿದು ಅದೇ ಸತ್ಯವೆಂಬ ಭಾವನೆಯನ್ನಿಟ್ಟುಕೊಳ್ಳಬೇಕಾಗುತ್ತದೆ. ಹೀಗಾಗುತ್ತಲೆ ಶಾಸ್ತ್ರಸಿದ್ಧವಾದಂಥ ಅದ್ವಿತೀಯ ಬ್ರಹ್ಮವನ್ನು ಅವನು ಕೊಂದಂತೆ ಆಗುತ್ತದೆ. ಬ್ರಹ್ಮವಸ್ತು ಇಲ್ಲವೇ ಇಲ್ಲವೆಂದು ಹೇಳುವವನೂ, ಬ್ರಹ್ಮಜ್ಞಾನಿಯನ್ನು ಕಂಡರೆ ಆಗದವನೂ, ಬ್ರಹ್ಮಸ್ವರೂಪವನ್ನು ತಿಳಿಯದವನೂ ಬ್ರಹ್ಮವನ್ನು ಕೊಂದವರೆಂದು ಸ್ಮೃತಿಯಲ್ಲಿದೆ. ಅವರು ಎಲ್ಲಾ ಧರ್ಮಕ್ಕೂ ಹೊರಗೆ. ಆಸೆಯಿಂದ ಕವಡಿ ಚಿನ್ನವನ್ನು ಮುಟ್ಟುವ ಸನ್ಯಾಸಿಯು ತನ್ನ ಉತ್ತಮಸ್ಥಿತಿಯಿಂದ ಕೆಳಕ್ಕೆ ಉರುಳುವನೆಂದು ಸ್ಮೃತಿಯಲ್ಲಿ ಹೇಳಿದೆ. ಬುದ್ಧಿಪೂರ್ವಕವಾಗಿ ಕೇಶಸವನ್ನು ಬಿಟ್ಟರಂತೇ (ಪೌಲ್ಕಸ) ನಾಗುವನು. ಆಸೆಯನ್ನು ಹೊರಡಿಸಿ ಕೊಳ್ಳವಂಥ ಮತ್ತು ದುಡ್ಡು ಕಾಸುಗಳನ್ನು ತೆಗೆದುಕೊಳ್ಳುವಂಥ ಸನ್ಯಾಸಿಯು ತನ್ನ ಉತ್ತಮಸ್ಥಿತಿಯಿಂದ ಕೆಳಕ್ಕೆ ಉರುಳುವನೆಂದು ಸ್ಮೃತಿಯಲ್ಲಿ ಹೇಳಿದೆ. ದುಡ್ಡು ಕಾಸನ್ನು ತೆಗೆದುಕೊಂಡರೆ ಕೇವಲ ಸಾಕ್ಷಿತ್ವರೂಪನಾದ ಜೀವಾತ್ಮನನ್ನು ಕೊಂದವನಾಗುತ್ತಾನೆ. ತಾನು ಅಸಂಗನೆಂಬುದನ್ನು ಮರೆತು ತಾನು ಅದನ್ನು ಭೋಗಿಸುವನೆಂಬ ಭಾವನೆಯನ್ನು ಹೊಂದಬೇಕಾಗುತ್ತದೆ. ಒಂದು ಸ್ವರೂಪದಲ್ಲಿರುವ ಆತ್ಮನನ್ನು ಇನ್ನೊಂದು ಸ್ವರೂಪವನ್ನಾಗಿ ತಿಳಿಯುವುದಕ್ಕಿಂತ ಹೆಚ್ಚಿನ ಪಾಪವೇ ಇಲ್ಲವೆಂದು ಸ್ಮೃತಿಯಲ್ಲಿ ಹೇಳಿದೆ. ಆತ್ಮಘಾತಕರಿಗೆ ಸುಖದ ಗಾಳಿಕೂಡ ಇಲ್ಲದೆ ಬಗೆಬಗೆಯಾದ ದುಃಖಗಳೇ ಗಂಟುಬೀಳುವವೆಂದು ಶ್ರುತಿಯು ಹೇಳುತ್ತದೆ. ಆದ್ದರಿಂದ ಸನ್ಯಾಸಿಯು ದುಡ್ಡು ಕಾಸುಗಳನ್ನು ನೋಡಲೂ ಬಾರದು, ಮುಟ್ಟಲೂ ಬಾರದು, ತೆಗೆದುಕೊಳ್ಳಲೂ ಬಾರದು ಇಷ್ಟೇ ಅಲ್ಲ. ದುಡ್ಡು ಕಾಸಿನ ಮಾತಿಗೆ ಅವಕಾಶ ಕೊಡಲೂ ಬಾರದು ತಾನು ಅದನ್ನು ಹೊಗಳಲೂ ಬಾರದು. ಅದರ ಸಂಬಂಧವಾದ ಯಾವ ವ್ಯವಹಾರವನ್ನೂ ಮಾಡಲೂ ಕೂಡದು.

ದುಡ್ಡು ಕಾಸಿನ ಶೋಧಕನ್ನು ಇಟ್ಟುಕೊಳ್ಳದೆ ಇರುವುದರಿಂದ ಫಲವೇನೆಂದರೆ ದುಡ್ಡು ಕಾಸಿದ್ದರಲ್ಲವೆ ಹೆಂಡತಿ ಬೇಕಾಗುತ್ತಾಳೆ ಮಕ್ಕಳು ಬೇಕಾಗುತ್ತಾರೆ. ಮನೆ ಬೇಕಾಗುತ್ತದೆ. ದುಡ್ಡು ಕಾಸಿಲ್ಲನೆ ಹೋದರೆ ಮನಸ್ಸಿನ ಆಸೆಗಳೆಲ್ಲಾ ತಮ್ಮತಮ್ಮ ದಾರಿಯನ್ನು ಹಿಡಿದುಕೊಂಡು ಹೋಗುತ್ತವೆ. ಆಸೆಗಳು ಹೋಗಿಬಿಟ್ಟರೆ ಮಾಡುವ ಕೆಲಸದಿಂದ ಸುಖವಾದರೆ ಹಿಗ್ಗುವುದಿಲ್ಲ. ದುಃಖವಾದರೆ ತಗ್ಗುವುದಿಲ್ಲ. ಇಹಲೋಕ ಸಂಬಂಧವಾದ ಸುಖದುಃಖಗಳು ಹಿಮ್ಮೆಟ್ಟಿದರೆ ಅವುಗಳ ಹಿಂದೆಯೇ ಬಸವನ ಹಿಂದಿನ ಬಾಲದಂತೆ ಪರಲೋಕಸಂಬಂಧವಾದ ಸುಖದುಃಖಗಳ ಬಯಕೆಯೂ ಕಾಲಿಗೆ ಬುದ್ಧಿಯನ್ನು ಹೇಳುತ್ತದೆ. ಇಹಲೋಕದ ಸುಖಗಳಿಗೆ ಬಾಯಿನೀರು ಕರೆಯುವವನು ಇದಕ್ಕಿಂತ ಹೆಚ್ಚಿನದಿರಬಹುದೆಂದು ಪರಲೋಕಸುಖಕ್ಕೆ ಆಂಗಲಾಚುತ್ತಾನೆ ಈ ಲೋಕದ ಸುಖದಲ್ಲಿ ಅಕ್ಕರೆ ತಪ್ಪಿದರೆ ಪರಲೋಕ ಸುಖದಮೇಲಿನ ಅಕ್ಕರೆಯೂ ಹೋದಂತೆಯೇ. ಹೀಗಾದರೆ ಈ ಲೋಕದಲ್ಲಾಗಲಿ ಪರಲೋಕದಲ್ಲಾಗಲಿ ಒಳ್ಳೇದೆಂಬುದೂ ಕೆಟ್ಟದೆಂಬುದೂ ಅನುಕೂಲವೆಂಬುದೂ ಪ್ರತಿಕೂಲವೆಂಬುದೂ ಅವನ ಭಾಗಕ್ಕೇ ತೋರದೆ ಯಾವುದರಮೇಲೆಯೂ ಆಸಕ್ತಿಯಿಲ್ಲದಂತೆ ಆಗುತ್ತದೆ. ಅಂಥ ಮನುಷ್ಯನು ತನಗೆಯಾರಾದರೂ ಕೇಡುಮಾಡಿದರೂ ಅವನಮೇಲೆ ಹಗೆತನವನ್ನು ಮಾಡುವುದಿಲ್ಲ. ಒಬ್ಬರು ತನಗೆ ಒಳ್ಳೇದುಮಾಡಿದರೂ ಅದರಿಂದ ಹರ್ಷಗೊಳ್ಳುವುದಿಲ್ಲ. ಹೀಗಾಗಿ ಅವನು ಯಾವಾಗಲೂ ಆತ್ಮಸ್ವರೂಪದಲ್ಲಿಯೇ ಇದ್ದುಕೊಂಡಿರುವುದರಿಂದ ಅವನ ಇಂದ್ರಿಯಗಳು ತಮ್ಮಷ್ಟಕ್ಕೆ ತಾವೇ ಸುಮ್ಮನಾಗುವವು ಇಂದ್ರಿಯಗಳೆಲ್ಲಾ ಸುಮ್ಮನಾದರೆ ನಿರ್ವಿಕಲ್ಪಸಮಾಧಿಗೆ ಯಾವ ಅಡ್ಡಿಯೂ ಬರುವುದಿಲ್ಲ. ಪರಮಹಂಸಯೋಗಿಯು ಹೇಗಿರುತ್ತಾನೆಂಬ ಮಾತಿಗೆ ಇದೇ ಉತ್ತರ. ಅವನು ವೇದಾಂತದಲ್ಲಿ ಅಖಂಡ ಸಚ್ಚಿದಾನಂದ ಸ್ವರೂಪವೆಂದು ಹೇಳಿರುವ ಪರಬ್ರಹ್ಮಸ್ವರೂಪವೇ ತಾನೆಂದು ಯಾವಾಗಲೂ ಅನುಭವಿಸುತ್ತ ಇದ್ದರೆ ಅವನು ಮಾಡತಕ್ಕದನ್ನು ಮಾಡಿ ಆಯಿತು. ಜ್ಞಾನವೆಂಬ ಅಮೃತವನ್ನು ಕುಡಿದು ತೃಪ್ತನಾಗಿ ಮಾಡತಕ್ಕದ್ದನ್ನೆಲ್ಲಾ ಮಾಡಿ ಮುಗಿಸಿದವನಾಗಿರುವಂಥ ಯೋಗಿಗೆ ಮಾಡತಕ್ಕ ದ್ದೆಂಬುದಿನ್ನೇನೂ ಉಳಿದಿರುವುದಿಲ್ಲವೆಂದೂ ಇನ್ನೂ ಉಳಿದಿದ್ದರೆ ಅವನು ಜ್ಞಾನಿಯೇ ಅಲ್ಲವೆಂದೂ ಸ್ಮೃತಿವಚನ ವಿರುವುದು.

ಓಂ ತತ್ಸತ್ ಶ್ರೀಕೃಷ್ಣಾರ್ಪಣಮಸ್ತು.

ಇಲ್ಲಿಗೆ ಶ್ರೀಮದ್ವಿದ್ಯಾರಣ್ಯ ಮಹಾ ಮುನಿಕೃತವಾದ ಜೀವನ್ಮುಕ್ತಿ ವಿವೇಕವೆಂಬ ಗ್ರಂಥದಲ್ಲಿ ವಿದ್ವತ್ಸನ್ಯಾಸವೆಂಬ ಐದನೆಯ ಪ್ರಕರಣವು ಮುಗಿದುದು.

ಗ್ರಂಥವೂ ಪರಿಸಮಾಪ್ತ ವಾದುದು.



